# ಚಾಣಕ್ಯತಂತ್ರ.



## ಪೂರ್ವತಂತ್ರ.

### ೧. ಚಾಣಕ್ಯದರ್ಶನ.

ಈ ಭರತಖಂಡದ ಪೂರ್ವದಿಕ್ಕಿನಲ್ಲಿ ಸದಾಕಾಲವೂ ಅರಳಿ ಬಗೆಬಗೆಯ ಬಣ್ಣದಿಂದೊಪ್ಪಿ ಮಗಮಗಿಸುವ (ಮಲ್ಲಿಗೆಯ, ಮಂದಾರದ, ಪಾರಿಜಾತದ, ಪಾಟಳಿಯ) ತೋಟದಿಂದೆಸೆವ ಪಾಟಲೀಪುತ್ರವೆಂಬೊಂದು ಪಟ್ಟಣವಿರುವುದು. ಇದನ್ನು ಕುಸುಮಪುರವೆಂದೂ ಹೇಳುವರು.

ಒಮ್ಮೆ ಅದರ ಮುಂಗಡೆಯ ಗಟ್ಟಬೆಟ್ಟಗಳೆಡೆಯ ಹಳ್ಳಕೊಳ್ಳಗಳ ನಡುವಣ ಕಾಡುದಾರಿಯಿಂದ ಮೇಲೇರಿ, ಉದಯಾದ್ರಿಯ ಶಿಖರದಲ್ಲಿ ಬೆಳಗುವ ಅರುಣಕಿರಣವನ್ನು ಹಳಿದು, ಕೆಂಜೆಡೆಯ, ಕೆಂಗಣ್ಣ, ಕೆಮ್ಮೀಸೆಯ ಕೆಂಚುಗಡ್ಡದ, ಸರ್ವಾಂಗವೂ ಕೆಂಪಾಗಿ, ಉರಿಯುವ ಕಿಚ್ಚಿನೊಂದು ಮೂರ್ತಿಯೊ ಎಂಬಂತೆ, ದಂಡ ಕೃಷ್ಣಾಜಿನಗಳನ್ನು ಧರಿಸಿದ ಮಹಾತೇಜಸ್ವಿಯೊಬ್ಬನು ಸರಸರನೆ ವಾಯುವೇಗವಾಗಿ ಧಾವಿಸಿ ಹೋಗುತ್ತಿರಲು, ದಾರಿಯಲ್ಲಿ ಬೆಳೆದಿದ್ದ ಗರುಕೆಯ ಹುಲ್ಲುಬಳ್ಳಿಗಳು ಕಾಲಿಗೆ ಸುತ್ತಿ, ತಡೆಗಟ್ಟಿ, ನಡೆಗೆಟ್ಟು, ಮುಗ್ಗರಿಸಿ ಬಡ್ಡನೆ ಬಿದ್ದನು. ಬಿದ್ದವನೆ ಎದ್ದನು; ಎದ್ದು ಅತ್ತಿತ್ತ ನೋಡಿದನು; ಹೀಗೆ ನೋಡಿ, ಮೂಗು ಮುರಿದುಕೊಂಡು, ಏನನ್ನೂ ಆಡದೆ, ಉಸಿರೆತ್ತದೆ, ಕಾಸೆಗಟ್ಟಿ ಮೊಣಕಾಲೂರಿ ಕುಳಿತು ಕೈಯ ದಂಡದ ತುದಿಯಿಂದಲೇ ಕುಟ್ಟಿಕುಟ್ಟಿ, ಕಿತ್ತುಕಿತ್ತು, ಅದನ್ನು ಸಮೂಲವಾಗಿ ನಿಃಸಂತಾನಮಾಡಿಬಿಟ್ಟು, ಮುಂದೆ ನಡೆದನು. ಇವನೆ ನಮ್ಮ ಈ ತಂತ್ರದ ತಾಂತ್ರಿಕನಾದ ಚಾಣಕ್ಯನು.

"ಅಬ್ಬಾ! ಮುನಿಗಳಿಗೆ ಮೂಗಿನ ತುದಿಯಲ್ಲಿ ಮುನಿಸು, ಎಂಬುದು ಈಗ ಪ್ರತ್ಯಕ್ಷವಾಯಿತು. ಇವನೊಬ್ಬನು ಯಾರೂ ಮಹಾತೇಜಸ್ವಿಯೂ ಕೋಪಿಷ್ಠನೂ ಆಗಿರಬೇಕು; ಏನಾದರೊಂದು ಕೆಲಸವು ಆಗಬೇಕಾದರೆ ಇಂತಹವರಿಂದಲೆ; ಅಲ್ಲದೆ, ನುಡಿಸಿದರೆ ನುಡಿಯದ, ಕೆಣಕಿದರೆ ಕೋಪಿಸದ, ನಿಂದಿಸಿದರೆ ಕುಂದದ ಆ ಸಾಧುಗಳಿಂದ ನಮ್ಮಂತಹವರ ಕಾರ್ಯ ವಾಗದು. ನನ್ನ ಪುಣ್ಯದಿಂದ ಇವನು ಅನುಕೂಲನಾಗಿ ಹೋದರೆ ಮತ್ತೆ ಕೇಳುವುದೇನು?" ಎಂದು ಆಲೋಚಿಸಿ, ಇದೆಲ್ಲವನ್ನೂ ದೂರ ದಿಂದಲೆ ನಿಂತು ನೋಡುತಿದ್ದ ಒಬ್ಬ ಯುವಕನು ಸಮೀಪಕ್ಕೆ ಓಡಿಬಂದು ಸಾಷ್ಟಾಂಗವಾಗಿ ನಮಸ್ಕರಿಸಿದನು. ಆಗ ಚಾಣಕ್ಯನು ಇವನ ಸರ್ವಾಂಗ ವನ್ನೂ ಒಮ್ಮೆ ದಿಟ್ಟಿಸಿ ನೋಡಿ, 'ಏನು?' ಎಂದು ಕೈಕಣ್ಣುಗಳ ಸನ್ನೆ ಯಿಂದ ಕೇಳಿದನು.

ಅದಕ್ಕೆ ಯುವಕನು "ಸ್ವಾಮೀ! ಮಧ್ಯಾಹ್ನಕಾಲವು ಮೀರಿ ಹೋಯಿತು; ದಯಮಾಡಿ ತಾವು ನನ್ನ ಬಿಡಾರಕ್ಕೆ ಬಂದು, ನಿತ್ಯವಿಧಿ ಗಳನ್ನು ತೀರಿಸಿ, ಸ್ವಲ್ಪ ವಿಶ್ರಮಿಸಿಕೊಂಡು, ತರುವಾಯ ಮುಂದಣ ದಾರಿ ನೋಡಬಹುದು" ಎಂದನು. ಚಾಣಕ್ಯನು ಇವನ ಪ್ರಾರ್ಥನೆಯನ್ನು ಕೇಳಿ "ಹಾಗಾಗಲಿ" ಎಂದು ಬಂದು, ಆದರಾತಿಥ್ಯಗಳನ್ನು ಸ್ವೀಕರಿಸಿ. ಪೂಜಾಪುರಸ್ಕಾರಗಳನ್ನು ತೀರಿಸಿ, ತಂದಿಟ್ಟ ಹಣ್ಣುಹಂಪಲುಗಳನ್ನು ತಿಂದು, ಸ್ವಲ್ಪ ವಿಶ್ರಮಿಸಿಕೊಂಡು, ಬಿಸಿಲು ತಣಿದೊಡನೆ ಹೊರಡುವ ಸನ್ನಾಹ ವನ್ನು ಮಾಡಿದನು.

ಇದನ್ನು ನೋಡಿ ಯುವಕನು "ಸ್ವಾಮೀ! ತಾವು ದಾರಿನಡೆದು ಬಳಲಿ ಬಂದವರು; ನನ್ನ ಮೇಲೆ ಕೃಪೆಮಾಡಿ, ಮೂರುನಾಲ್ಕು ದಿವಸ ಇಲ್ಲಿಯೇ ಉಳಿದುಕೊಂಡು, ನಾನು ಮಾಡುವ ಯತ್ಕಿಂಚಿತ್ ಸೇವೆ ಯನ್ನು ಕೈಕೊಂಡು, ಮುಂದೆ ದಯೆಮಾಡಿಸಬೇಕು: ತಮ್ಮ ಬರುವಿಕೆ ಯಿಂದ ನನ್ನ ಪಿತೃಗಳೆಲ್ಲರೂ ತೃಪ್ತರಾದರು; ನಾನೂ ಧನ್ಯನಾದೆನು: ನನ್ನೀ ಹರುಕು ಗುಡಿಸಲೂ ಪರಿಶುದ್ಧವಾಯಿತು" ಎಂದು ಕೈತಗ್ಗಿಸಿ ಕೊಂಡು ದೀನಭಾವದಿಂದ ಹೇಳಿಕೊಂಡನು.

ತರುಣನ ಭಕ್ತಿವಿಶ್ವಾಸಗಳನ್ನು ನೋಡಿ ಚಾಣಕ್ಯನು "ಆಯಿತು, ನಿನ್ನ ಇಷ್ಟವಿದ್ದಂತೆಯೆ ಆಗಲಿ" ಎಂದು ಮೂರುನಾಲ್ಕು ದಿನಗಳಿದ್ದು,

ಆತನ ಉಪಚಾರಗಳಿಗೆ ಮೆಚ್ಚಿ "ಅಯ್ಯಾ! ನೀನು ಯಾರ ಮಗನು? ಹೆಸರೇನು? ನಿನಗಿಲ್ಲಿ ಜೀವನವು ಹೇಗೆ?" ಎಂದು ಕೇಳಿದನು.

**ಯುವಕನು**—ಸ್ವಾಮಿಾ! ನಾನು ಈ ದೇಶಾಧಿಪತಿಯಾದ ಸರ್ವಾರ್ಥಸಿದ್ಧಿಯ ಪ್ರಿಯಪತ್ನೀಪುತ್ರನಾದ ಮೌರ್ಯನ ಮಗನು; ನನ್ನ ಹೆಸರು ಚಂದ್ರಗುಪ್ತನೆಂದು; ನನ್ನ ಜೀವನವೆಂದರೆ, ಪಶುಜೀವನಕ್ಕಿಂತಲೂ ಕಡೆಯಾಗಿದೆ.

**ಚಾಣಕ್ಯ**—ಅದೇನು ಹಾಗೆ ಹೇಳುವೆ? ವಿವರಿಸಿ ಹೇಳು.

**ಚಂದ್ರಗುಪ್ತ**—ಸ್ವಾಮಿಾ! ನನಗೊದಗಿದ ಈ ದುರವಸ್ಥೆಯನ್ನು ಏನೆಂದು ಹೇಳಲಿ! ನೂರುಮಂದಿ ಅಣ್ಣತಮ್ಮಂದಿರೊಡನೆ ಹುಟ್ಟಿ ಜೀವ ದಿಂದುಳಿದವನು ನಾನೊಬ್ಬನೆ. ನಮ್ಮ ಪುರಾಣವು ಸ್ವಲ್ಪ ದೊಡ್ಡದಿದೆ. ಆದರೂ ಕೇಳಬೇಕು; ಏನೆಂದರೆ—ನನ್ನ ಅಜ್ಜನ ಪಟ್ಟದರಸಿಯಾದ ಸುನಂದಾದೇವಿಯಲ್ಲಿ ನಂದ, ಸುನಂದ, ಉಪನಂದ, ಪ್ರನಂದ, ಲೋಕ ನಂದ, ಕುರುನಂದ, ಪ್ರಿಯನಂದ, ಮಿತ್ರನಂದ, ವಿನಂದರೆಂದು ಒಂಬತ್ತು ಮಂದಿ ಮಕ್ಕಳು. ಪ್ರಿಯಪತ್ನಿಯಾದ ಮುರಾದೇವಿಯಲ್ಲಿ ಮೌರ್ಯ ನೆಂಬೊಬ್ಬನೆ ಮಗನು. ಈತನಿಗೆ ಅಸಹಾಯಶೂರರಾದ ನಾವು ನೂರು ಮಂದಿ ಮಕ್ಕಳು; ಶೂರರೂ ದಾಯಾದ್ಯರೂ ಆದುದರಿಂದ ಕಾಲಾನು ಕಾಲಕ್ಕೆ ನಮ್ಮಿಂದ ಏನಾದರೂ ಕೇಡು ಸಂಭವಿಸೀತೆಂಬ ಭಯದಿಂದಲೊ, ಅಥವಾ ಮಾತ್ಸರ್ಯದಿಂದಲೊ, ಬೇಟೆಯ ನೆವದಿಂದ ಕಾಡಿಗೆ ಕರೆದು ಕೊಂಡು ಹೋಗಿ, ಭೋಜನದ ಸಮಯವಾಯಿತೆಂದು ಅಲ್ಲಿರುವ ಒಂದು ನೆಲಮನೆಯಲ್ಲಿ ನಮ್ಮನ್ನು ಇಳಿಸಿ, ಬಾಗಿಲು ಹಾಕಿ ಅನ್ನನೀರು ಸಹ ಕೊಡದೆ ನನ್ನ ಪಿತೃಸಹೋದರರೆಲ್ಲರನ್ನು ಕೊಂದರು. ನನಗೊಬ್ಬನಿಗೆ ಈಗಲೊ, ಮತ್ತೊ, ಎಂಬಂತೆ ಎಕ್ಕು ಮಾತ್ರ ಉಳಿದಿತ್ತು".

"ಆ ಕಾಲದಲ್ಲಿ ಪರ್ವತರಾಜ್ಯದ ಕೆಲವು ಮಂದಿ ಬೇಹುಗಾರರು ದೇಶಾಂತರದಿಂದ ಅಖಂಡವಾದೊಂದು ಸಿಂಹದ ಗೂಡನ್ನು ತಂದಿಟ್ಟು "ಈ ಪಂಜರದಿಂದ ಈ ಸಿಂಹವನ್ನು ಹೊರಗೆ ತೆಗೆಯುವವರಿದ್ದರೆ ಬರಲಿ" ಎಂದು ಪಟ್ಟಣದಲ್ಲೆಲ್ಲ ಸಾರುತಿದ್ದರು. ಜನರೆಲ್ಲ ಗುಂಪುಗುಂಪಾಗಿ ಬಂದು ನೋಡಿ ಹೋಗುತಿದ್ದರು; ಆದರೆ ಒಬ್ಬನಿಂದಲೂ ಅದರ ಪರೀಕ್ಷೆ

ಯಾಗಲಿಲ್ಲ. ಆಗ ನಂದರು "ನಮ್ಮ ದೇಶದಲ್ಲಿ ಈ ಪಂಜರ ಪರೀಕ್ಷಕನೊಬ್ಬನು ಇಲ್ಲದೆ ಹೋದನಲ್ಲ! ಇದ್ದರೆ ಅಂತಹವನಿಗೆ ಯೋಗ್ಯವಾದ ಬಹುಮಾನವನ್ನು ಮಾಡಬಹುದು" ಎಂದು ಸಾರಿದರು. ಬಂದೀವಾಸದಲ್ಲಿದ್ದ ನಾನು ಪಂಜರವನ್ನು ನೋಡಲು ಅಪೇಕ್ಷಿಸಿದೆನು. ಆ ಮೇಲೆ ರಾಜದೂತರೊಡನೆ ಹೋಗಿ ಪಂಜರವನ್ನು ಪರೀಕ್ಷಿಸಿದೆನು; ಸಿಂಹವು ಪೋಷಕನು ತನ್ನ ಕೈಯಲ್ಲಿದ್ದ ಕಬ್ಬಿಣದ ಶಲಾಕೆಯ ತುದಿಯಿಂದ ಆಹಾರವನ್ನು ಕೊಟ್ಟರೆ ಮಾತ್ರ ತಿನ್ನುತಿತ್ತು. ಇದರಿಂದಲೆ ಇದು ಸೂಜಿಕಲ್ಲಿನಿಂದ ಮಾಡಲ್ಪಟ್ಟುದೆಂದು ತಿಳಿದು ಅದರ ಗುಟ್ಟನ್ನು ಹೊರಗೆಡವಿದೆನು. ಆದುದರಿಂದ ನನ್ನನ್ನು ಬಿಡುಗಡೆ ಮಾಡಿ, ಈ ಅನ್ನ ಸತ್ರದಲ್ಲಿರಿಸಿದರು".

"ಸ್ವಾಮಿ! ಏನೇನೂ ಟಿಕಾಣಿಯಿಲ್ಲದೆ ಗತಿಗೆಟ್ಟು ಅತ್ತ ಸಾಯದೆಯೂ, ಇತ್ತ ಬದುಕದೆಯೂ, ಈ ಹೀನವೃತ್ತಿಯಿಂದ ಜೀವನಮಾಡುತ್ತ, ಯಾವ ಕಾಲಕ್ಕೆ ಏನು ಸಂಭವಿಸುವುದೊ ಎಂಬ ಹೆದರಿಕೆಯಿಂದ ಇಲ್ಲಿ ಜೀವ ಕೈಯಲ್ಲಿ ಹಿಡಿದುಕೊಂಡಿದ್ದೇನೆ. ರಾಜಾಧಿರಾಜನಾದ ಸರ್ವಾರ್ಥಸಿದ್ಧಿ ಮಹಾರಾಜನ ಮೊಮ್ಮಗನಾಗಿದ್ದು, ನಮ್ಮ ತಂದೆಯಿಂದ ಪ್ರತಿಷ್ಠಿತವಾದ ವಿರೂಪಾಕ್ಷ ದೇವರಿಗೆ ನಿತ್ಯದಲ್ಲೂ ಆಗುವ ಆರಾಧನೆ ಸಹ ನಿಂತು ಹೋಗಿರುವಾಗ, ಅದನ್ನು ಸಹ ನಿರ್ವಹಿಸಲಾರದೆ ಈ ಕೈಗುಂದಿನಿಂದ ವೈರಿಗಳ ನಡುವೆ ಜೀವಹಿಡಿದುಕೊಂಡಿರುವುದಕ್ಕಿಂತಲೂ ತಮ್ಮಂತಹವರ ಪಾದಸೇವೆಯನ್ನಾದರೂ ಮಾಡಿಕೊಂಡು, ಕಂದಮೂಲಗಳಿಂದ ಹೊಟ್ಟೆ ಹೊರೆಯುತ್ತ ಇದ್ದರೆ, ಪರಲೋಕವಾದರೂ ಪ್ರಾಪ್ತವಾದೀತು. ಇಲ್ಲಿದ್ದು ಪುರುಷಾರ್ಥವಾದರೂ ಏನು? ಅಪ್ಪಣೆಯಾದರೆ ನಾನೂ ತಮ್ಮೊಡನೆ ಬರುವೆನು" ಎಂದು ಕಣ್ಣೀರು ಮಿಡಿದನು.

ಚಾಣಕ್ಯನು ಅವನ ರಾಜಲಕ್ಷಣಲಕ್ಷಿತವಾದ ಶರೀರವನ್ನೂ ಸೌಜನ್ಯವನ್ನೂ ನೋಡಿ ಮನಸ್ಸು ಕರಗಿ, ತನ್ನಲ್ಲಿಯೇ—'ಇವನು ಮುಂದೆ ರಾಜಪದವಿಗೆ ತಕ್ಕವನೆಂದು ತೋರುತ್ತಾನೆ' ಎಂದೆಣಿಸುತಿದ್ದನು.

## ೨. ಘೋರ ಪ್ರತಿಜ್ಞೆ.

ಅನಂತರ ಚಾಣಕ್ಯನು ಸರ್ವವನ್ನು ಆಲೋಚಿಸಿ ಒಂದು ನಿಶ್ಚಯಕ್ಕೆ ಬಂದು ಚಂದ್ರಗುಪ್ತನನ್ನು ನೋಡಿ ಹೀಗೆಂದನು:—

"ಚಂದ್ರಗುಪ್ತನೆ! ಕ್ಷತ್ರಿಯ ಬೀಜಸಂಭವನೂ, ಯೌವನಶಾಲಿಯೂ, ರಾಜಲಕ್ಷಣಲಕ್ಷಿತನೂ ಆಗಿರುವ ನಿನಗೆ ಈ ವನವಾಸವೂ, ಕಂದಮೂಲಾ ಹಾರವೂ ತಕ್ಕುವಲ್ಲ; ಅದು ನಮ್ಮಂತಹವರಿಗೆ. ಕ್ಷತ್ರಿಯನು ಧನಹೀನ ನಾಗಿ ಒಮ್ಮೆ ವಿಪತ್ತಿಗೆ ಗುರಿಯಾದರೂ ಎದೆಗೆಡದೆ ಧೈರ್ಯವನ್ನು ತಂದು ಕೊಂಡು, ತನ್ನ ಅಭ್ಯುದಯಕಾಲವನ್ನೆ ಎದುರು ನೋಡುತ್ತ, ಸಮಯ ವನ್ನು ಸಾಧಿಸಿ, ಬುದ್ಧಿಪೌರುಷಗಳ ಬಲದಿಂದ ಶತ್ರುಗಳನ್ನು ನಿರ್ಮೂಲ ಮಾಡಿ ಸುಖಿಯಾಗಬೇಕಲ್ಲದೆ, ಹೀಗೆ ಧೈರ್ಯಗುಂದಿ ಹೆಂಗುಸರಂತೆ ಕೈಕಾಲು ಬಿಡುವುದೇ?

ಚಂದ್ರಗುಪ್ತ—"ಸ್ವಾಮಿ! ಅಕ್ಕಿಯ ಕಾಳಿನಷ್ಟಿದ್ದ ಕಿಚ್ಚಿನ ಕಿಡಿ ಗಾಳಿಯ ಬಲದಿಂದ ಇಡೀ ಕಾಡನ್ನು ಸುಡುವಂತೆ ನನ್ನ ಅದೃಷ್ಟವು ತಮ್ಮ ಕಟಾಕ್ಷದಿಂದ ವೈರಿಗಳನ್ನು ನಿಗ್ರಹಿಸಿ ಪ್ರಜ್ವಲಿಸಬೇಕಲ್ಲದೆ ನನ್ನಿಂದೇನಾ ದೀತು? ಹಣ್ಣುಕತ್ತಿಗಳೆರಡನ್ನು ತಮ್ಮ ಕೈಗೆ ಒಪ್ಪಿಸಿದ್ದೇನೆ; ಇನ್ನು ಇಡು ವುದಾದರೂ ತೆಗೆಯುವುದಾದರೂ ತಮ್ಮನ್ನೆ ಕೂಡಿದೆ. ನಿಮ್ಮನ್ನೆ ಶರಣು ಹೊಕ್ಕೆನು; ನಿಮ್ಮಿಂದಲೆ ಈ ದುಷ್ಟರ ನಿಗ್ರಹವಾಗಿ ನನ್ನ ಉದ್ಧಾರವಾಗ ಬೇಕು; ಬೇರೆ ಗತಿಯಿಲ್ಲ" ಹೀಗೆಂದು ಚಂದ್ರಗುಪ್ತನು ಚಾಣಕ್ಯನ ಎರಡು ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡನು.

ಚಾಣಕ್ಯ—"ಮಗನೆ! ಈ ಕಾರ್ಯಕ್ಕೆ ನಾನೇನೂ ಸಮರ್ಥ ನೆಂಬುದು ನಿಜ; ಆದರೆ ನಂದರು ನಿನಗೊಬ್ಬನಿಗೆ ದ್ರೋಹಿಗಳಾಗಿದ್ದರೂ ಪ್ರಜಾಪಾಲನೆಯನ್ನು ಸರಿಯಾಗಿ ಮಾಡುತಿದ್ದಾರಂತೆ. ಅಂತಹವರನ್ನು ಅಕಾರಣವಾಗಿ ಹೇಗೆ ನಿಗ್ರಹಿಸಲಿ? ಒಂದು ವೇಳೆ ನಿಗ್ರಹಿಸಿದರೆ ಅದರಿಂದ ಲೋಕಕ್ಕೆ ಕೇಡೂ, ನನಗೊಂದು ಅಪಕೀರ್ತಿಯೂ ಉಂಟಾಗದಿರದು. ಅದರಿಂದೇನಾದರೂ ನನಗೆ ಕೆಡುಕಾಗಿದ್ದರೆ ಮಾತ್ರ ಆಗ ಬಾಧಕವಿಲ್ಲ" ಎಂದು ಹೀಗೆ ನೋಡಿ "ಚಿಂತೆಯಿಲ್ಲ, ಈ ವಿಷಯಕ್ಕೆ ಹೀಗೆಯೆ, ಎಂದು ಮತ್ತೆ ಹೇಳುತ್ತೇನೆ" ಎಂದು ಹೇಳಿ, ಮಧ್ಯಾಹ್ನಿಕಕ್ಕಾಗಿ ಗಂಗಾನದಿಯ ಬಳಿಗೆ ಹೊರಟು ಹೋದನು.

ಇತ್ತ ಉದ್ಯಾನವಿನೋದಕ್ಕೆಂದು ಬಂದ ನಂದರು, ಮಾರ್ಗದಲ್ಲೆ ಒಮ್ಮೆ ಅನ್ನಸತ್ರವನ್ನು ಸಂದರ್ಶಿಸಿ ಹೋಗಬೇಕೆಂದು ಕುದುರೆಗಳಿಂದಿಳಿದು

ಬಂದು ಒಳಹೊಕ್ಕರು. ಆ ಕಾಲದಲ್ಲಿ ಸಮಯವನ್ನು ಸಾಧಿಸಿಕೊಂಡಿದ್ದ ಚಾಣಕ್ಯನು ಇದುವೆ ತಕ್ಕಕಾಲವೆಂದು, ಒಂದು ಹರುಕು ಬಟ್ಟೆಯನ್ನು ಉಟ್ಟುಕೊಂಡು, ಮಾಸಿದ ಉತ್ತರಿಯವನ್ನು ಧರಿಸಿಕೊಂಡು, ಒಬ್ಬ ನಾಡಾಡಿ ಬ್ರಾಹ್ಮಣನಂತೆ ಅನ್ನಸತ್ರವನ್ನು ಹೊಕ್ಕು, ಅಲ್ಲಿದ್ದ ರಾಜ ಯೋಗ್ಯವಾದ ಸಿಂಹಾಸನವೊಂದನ್ನು ಎಳೆದುತಂದು ಮುಂದಿರಿಸಿ, ಅದರಲ್ಲಿ ಕಾಲ ಮೇಲೆ ಕಾಲು ಹಾಕಿಕೊಂಡು, ಮೀಸೆಯನ್ನು ಹುರಿಮಾಡಿ ಕೊಂಡು, ಗಡ್ಡವನ್ನು ನೇವರಿಸುತ್ತ ಎದುರಾಗಿ ಕುಳಿತುಕೊಂಡನು.

ಬ್ರಾಹ್ಮಣರ ಪಂಕ್ತಿಗಳನ್ನು ನೋಡುತ್ತ ಬರುವ ನಂದರು, ಸಿಂಹಾ ಸನದ ಮೇಲೆ ಕುಳಿತಿದ್ದ ಹರುಕು ಹಾರುವನನ್ನು ಕಂಡು, ಕೋಪಗೊಂಡು, ಒಬ್ಬರೊಬ್ಬರ ಮೋರೆಗಳನ್ನು ನೋಡುತ್ತ, "ಇವನೊಬ್ಬನು ಯಾರೊ ನೀಚ ಬ್ರಾಹ್ಮಣನು, ತುಚ್ಛನು; ಎಲ್ಲರಿಗಿಂತಲೂ ತಾನೊಬ್ಬ ವಿಶೇಷ ನೆಂಬಂತೆ ಕಾಲ ಮೇಲೆ ಕಾಲು ಹಾಕಿಕೊಂಡು, ಮೀಸೆ ತಿರುವುದನ್ನು ನೋಡಬಾರದೆ? ಯಾರೂ ಇಲ್ಲವೆ ಇಲ್ಲಿ?" ಎಂದು ಹಿಂದೆ ತಿರುಗಿ ನೋಡಿ ದರು.

ಕೂಡಲೆ ರಾಜಭಟರು ಬಂದು "ಏಳೇಳು" ಎಂದು ದಿಟ್ಟಿಸಿ ಹೇಳಿ ದರು. ಅದಕ್ಕೂ ಚಾಣಕ್ಯನು ಗಣ್ಯವಿಲ್ಲದೆ ಮೇಲೆ ನೋಡುತ್ತ, ಯಥಾ ಪ್ರಕಾರವಾಗಿ ಕುಳಿತಿದ್ದನು. ಆಗ ರಾಜದೂತರು ಕೋಪಗೊಂಡು, ಅವನ ಕೈಯನ್ನು ಹಿಡಿದೆಳೆದು, ಕೊರಳಿಗೆ ಕೈಗೊಟ್ಟು "ಹೋಗತ್ತ, ಬೇಡಿ ತಿನ್ನು" ಎಂದು ಗರ್ಜಿಸಿ ನೂಕಿದರು.

ಅವರೆಳೆದು ನೂಕಿದ ರಭಸಕ್ಕೆ ಮುಗ್ಗರಿಸಿ ಬಿದ್ದು, ಜುಟ್ಟು ಬಿಚ್ಚಿ ಹೋಗಲು, ಒಡನೆಯೆ ಬಾಲಕೊಯಿದ ಹಾವಿನಂತೆಯೂ, ಗಾಯಗೊಂಡ ಹಂದಿಯಂತೆಯೂ, ಕೆಣಕಿದ ಮಹಾಕೇಸರಿಯಂತೆಯೂ, ರೋಷಾವೇಷ ದಿಂದೆದ್ದು, ಘುಡುಘುಡಿಸಿ, ಕಿಡಿಕಿಡಿಯಾಗಿ, ಕಟಕಟನೆ ಹಲ್ಲ ಡಿದು, ಹುಬ್ಬುಗಳನ್ನು ಗಂಟಿಕ್ಕಿಕೊಂಡು, ಪೀಠವನ್ನೊದೆದು, ಕಾಲಮೃತ್ಯುವಿನಂತೆ ಔಡುಗಚ್ಚಿ, ಹಲ್ಲುಮಸೆದು, ಗಡಗಡನೆ ನಡುಗಿ, ಮೊರೆದು ಬುಸುಗುಟ್ಟಿ, ನಂದರನ್ನು ಬಿರಬಿರನೆ ನೋಡಿ—

"ಅಃ! ಕ್ಷತ್ರಿಯಾಧಮರೇ! ದಾರಿನಡೆದು ಬಳಲಿ ಹಸಿದು ಬಂದು ಮುಷ್ಟಿ ಅನ್ನಕ್ಕೆಂದು ಬಂದು ಕುಳಿತ ನನ್ನನ್ನು ಈ ರೀತಿ ಅವಮಾನ ಪಡಿಸಿ

ದಿರಿ! ನೀಚನೆಂದೂ, ತುಚ್ಛನೆಂದೂ ಬೈದಿರಿ! ಎಳೆಯಿಸಿದಿರಿ! ನೂಕಿಸಿದಿರಿ! ಇರಲಿರಲಿ! ಕಿವಿ ಚಿವುಟಿಕೊಳ್ಳಿರಿ! ಸೆರಗಿನಲ್ಲಿ ಗಂಟಿಕ್ಕಿಕೊಳ್ಳಿರಿ! ಎಲ್ಲರೂ ನೋಡುವಂತೆ ನನ್ನನ್ನು ಹೇಗೆ ಎಳೆಯಿಸಿದಿರೊ ಹಾಗೆಯೇ, ಅದಕ್ಕಿಂತಲೂ ಹೆಚ್ಚಾಗಿ, ನಿಮ್ಮ ಪ್ರಾಣಗಳನ್ನು ಹೀರಿ, ಕಾಲುಗಳಿಗೆ ಹಗ್ಗಗಳನ್ನು ಬಿಗಿಯಿಸಿ, ಹದ್ದು ನರಿನಾಯಿಗಳ ತುತ್ತಾಗಿ, ದಾರಿಬಿಟ್ಟು ಮುಳ್ಳು ಪೊದೆ ಬೇಲಿಗಳಲ್ಲಿ ಎಳೆಯಿಸಿ ಹಾಕುವುದನ್ನು ಈ ಸಭಿಕರು ನೋಡುವರು. ನನ್ನ ತಪೋಬಲದಿಂದ ಈಗಲೇ ನಿಮ್ಮನ್ನು ಸುಟ್ಟುಬಿಡುತಿದ್ದೆನು. ಆದರದು ಪೌರುಷವಲ್ಲ; ಆ ಶುಕ್ರಾಚಾರ್ಯರಿಂದ ಪ್ರಣೀತವಾದ ದಂಡನೀತಿಶಾಸ್ತ್ರವನ್ನು ಮನಮುಟ್ಟಿ ಅಧ್ಯಯನ ಮಾಡಿ, ನಾನು ಅವರಿಗೆ ಧರ್ಮಪುತ್ರನೆನಿಸಿಕೊಂಡುದು ಸತ್ಯವಾಗಿದ್ದರೆ, ಆ ಪರಶುರಾಮನು ಇಪ್ಪತ್ತೊಂದು ಬಾರಿ ದುಷ್ಟ ಕ್ಷತ್ರಿಯರನ್ನು ಸಮೂಲವಾಗಿ ಸಂಹರಿಸಿ ವಿಶ್ರಾಂತಿ ಹೊಂದಿದಂತೆಯೆ, ದುಷ್ಟ ಕ್ಷತ್ರಿಯರಾದ ನಿಮ್ಮ ಒಂಬತ್ತು ಮಂದಿಯನ್ನೂ, ನಿಮ್ಮನ್ನು ಹೊಂದಿಹೊರೆದವರನ್ನೂ ಮಣ್ಣುಕೂಡಿಸಿ, ಕಾಲಸರ್ಪದಂತೆ ಬಿಚ್ಚಿರುವ ಈ ಜುಟ್ಟನ್ನು ಕಟ್ಟುವೆನು. ಹಾಗೆ ಮಾಡದೆ ಕಟ್ಟಿದೆನಾದರೆ, ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಸ್ವೀಕರಿಸುವವನ ಮತ್ತು ಮದ್ಯಪಾನವನ್ನು ಮಾಡುವವನ ದುರ್ಗತಿ ನನಗಾಗಲಿ!" ಎಂದು ಘೋರ ಪ್ರತಿಜ್ಞೆಯನ್ನು ಮಾಡಿ, ಪೀಠೆಯನ್ನು ತಿರುವಿಕೊಂಡು, ಬಿಚ್ಚಿಹೋದ ಕೂದಲುಗಳನ್ನು ಕೈಯಿಂದ ನೇವರಿಸಿಕೊಂಡು, ಹೊರಟು ಹೋದನು.

## ೩. ವಿಚಾರ.

ಇಷ್ಟಾದುದನ್ನು ನೋಡಿ ನಂದರು ಒಬ್ಬರಿಗೊಬ್ಬರು ಮೋರೆ ಮೋರೆ ನೋಡಿಕೊಂಡು ಕಿಡಿಕಿಡಿ ಮಸಗಿದರು. ಆಗ ಬಳಿಯಲ್ಲಿದ್ದ ವಕ್ರನಾಸನ ಮಗನಾದ ಪುಷ್ಪದಂತನೆಂಬ ಮಂತ್ರಿಯು, ಇವರು ಮುಂದೆ ಬರುವ ಸಂಕಟವನ್ನು ಈಗಲೆ ತಂದುಕೊಳ್ಳುವರೆಂದು ತಿಳಿದು, ಫಕ್ಕನೆ ಎದ್ದುನಿಂತು, ಅವರೊಡನೆ "ಬುದ್ಧೀ! ಸಾವಿರಾರು ಮಂದಿ ಬಂದು, ತಿಂದು ಹೋಗುವ ಈ ಸತ್ರದಲ್ಲಿ ಹೇಗೆ ಹೇಗಿದ್ದವರು ಬರುವುದಿಲ್ಲ? ಇವನೊಬ್ಬನು ಹುಚ್ಚನೆಂದು ಕಾಣುತ್ತದೆ ಅಲ್ಲದಿದ್ದರೆ ಅವನು ತಮ್ಮೆದುರಿಗೆ ಸಿಂಹಾಸನ

ದಲ್ಲಿ ಕುಳಿತುಕೊಳ್ಳುವನೆ? ಛಿಃ! ಹುಚ್ಚರ ಮಾತೂ, ಮಕ್ಕಳ ಮಾತೂ ಒಂದೆ. ಅದರಲ್ಲೇನಿದೆ? ಅದೆಲ್ಲ ಹೋಗಲಿ. ಅನೇಕ ದಿವಸಗಳಿಂದ ತಮ್ಮ ದರ್ಶನವನ್ನು ಕಾಯುತಿದ್ದ ಅರಸುಗಳಿಗೆ ತಾವು ಈ ದಿನ ಕಾಣಿಸಿ ಕೊಳ್ಳುತ್ತೇವೆ ಎಂದು ಅಪ್ಪಣೆಕೊಡಿಸಿರುವಿರಷ್ಟೆ? ಅವರೆಲ್ಲರೂ ಎಷ್ಟು ಹೊತ್ತಿಗೆ ಸಮಯ ಸಿಕ್ಕೀತೆಂದು, ಕಪ್ಪಕಾಣಿಕೆಗಳನ್ನು ಹಿಡಿದು ಕಾದು ಕೊಂಡಿರುವರು. ಮಂತ್ರಿಗಳೂ ತಮ್ಮ ಬರವನ್ನೆ ಹಾರಯಿಸುತಿದ್ದಾರೆ. ದಯಮಾಡಿಸಬೇಕು" ಎಂದನು.

ಅದಕ್ಕೆ ನಂದರು—"ಹೌದು ನೀನು ಹೇಳಿದ ಮಾತು ಸರಿ: ಹೀಗಿದ್ದುವುಗಳು ಎಷ್ಟೋ ಬರುತ್ತವೆ, ಹೋಗುತ್ತವೆ; ಅವನು ಹುಚ್ಚನೆ, ಹೋಗಲಿ" ಎಂದು ತಮ್ಮ ತಮ್ಮ ಕುದುರೆಗಳನ್ನೇರಿ, ಪಟ್ಟಣಕ್ಕೆ ಹೊರಟು ಹೋದರು.

ಘೋರಪ್ರತಿಜ್ಞೆಯನ್ನು ಮಾಡಿ, ಹೊರಟ ಚಾಣಕ್ಯನು ಮನ ಸ್ಸಿನಲ್ಲಿ—"ಈ ನಂದರನ್ನೀಗ ನಾಶಮಾಡಿದರೆ, ಮುಂದೆ ಶುದ್ಧ ಕ್ಷತ್ರಿಯ ವಂಶವೆ ಇಲ್ಲವೆಂದಾಗಿ ಹೋಗುವುದಲ್ಲ? ಸುಮ್ಮನೆ ಇದ್ದರೆ ನಮ್ಮ ಪ್ರತಿ ಜ್ಞೆಗೆ ಮೂರು ಕಾಸು. ಏನು ಮಾಡಲಿ? ಇವರು ಶುದ್ಧಕ್ಷತ್ರಿಯರಾಗಿ ದ್ದರೂ ದುಷ್ಟರು; ಸಾಧುಗಳನ್ನು ಪೀಡಿಸುತ್ತಾರೆ; ಇವರಿಂದ ಲೋಕ ಕ್ಕೊಂದು ಒಳ್ಳೆಯದಾದಿತೇ? ಹೇಗೆ? ಛೀ! ಎಂದೆಂದಿಗೂ ಆಗದು. ಶೂದ್ರಸ್ತ್ರೀಪುತ್ರನಾದ ವಿದುರನು ಧೃತರಾಷ್ಟ್ರನ ರಾಜ್ಯಭಾರವನ್ನು ನಿರ್ವಹಿಸುತ್ತಿರಲಿಲ್ಲವೆ? ಹಾಗೆಯೆ ಮುಂದೆ ಚಂದ್ರಗುಪ್ತನೂ ಯಾಕೆ ರಾಜ್ಯಭಾರವನ್ನು ಮಾಡಬಾರದು? ಇವನಿಂದ ತಕ್ಕಮಟ್ಟಿಗಾದರೂ ಲೋಕಕ್ಕೆ ಕ್ಷೇಮವಾದೀತೆಂದು ತೋರುತ್ತದೆ" ಎಂದು ಯೋಚಿಸಿ ಕೊಂಡು ಹೋಗುತಿದ್ದನು.

ಆ ಸಮಯದಲ್ಲಿ ಚಂದ್ರಗುಪ್ತನು ಒಂದು ಅಡ್ಡಬಿದ್ದು—"ಸ್ವಾಮೀ, ನನಗಿನ್ನು ಇಲ್ಲಿ ಏನೂ ಕೆಲಸವಿಲ್ಲ. ತಮ್ಮ ಸೇವೆಯನ್ನು ಮಾಡಿಕೊಂಡು ಒಟ್ಟಿಗೆಯೇ ಬರುತ್ತೇನೆ. ಈ ದುಷ್ಟರ ಮಧ್ಯದಲ್ಲಿ ಒಂದು ಕ್ಷಣವಾದರೂ ಇರಲಾರೆನು" ಎಂದು ಕಾಲುಗಳನ್ನು ಹಿಡಿದನು.

ಅದಕ್ಕೆ ಚಾಣಕ್ಯನು—"ಚಂದ್ರಗುಪ್ತನೆ! ಇನ್ನು ಮೇಲೆ ನಿನ್ನ ವೈರಿಗಳ ಭಯವನ್ನು ಬಿಟ್ಟುಬಿಡು. ಸ್ವಲ್ಪ ಕಾಲದೊಳಗೆಯೆ ಈ ನಂದ

ರನ್ನು ನಿಗ್ರಹಿಸಿ, ಸಕಲ ಸಾಮ್ರಾಜ್ಯವನ್ನೂ ನಿನಗುಂಟುಮಾಡಿ, ನಿನ್ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ನೀನು ಸಕಲ ಸಾಮಂತಮಂಡಲದ ನಡುವೆ ರಾಜತೇಜದಿಂದ ಮೆರೆಯುವ ಆ ವೈಭವವನ್ನು ನೋಡಿ, ಕೃತಕೃತ್ಯನಾಗಿ, ಅನಂತರ ತಪೋವನಕ್ಕೆ ಹೋದೇನು; ನಂಬಿಕೊ, ಇದಕ್ಕೆ ನನ್ನ ಸುಕೃತವೆ ಸಾಕ್ಷಿ" ಎಂದು ಅಭಯಹಸ್ತವನ್ನೆತ್ತಿ, ನಿರ್ಜನವಾಗಿದ್ದ ಕಾಡಿನಲ್ಲಿ ಒಂದು ಮರದ ನೆರಳಿನಲ್ಲಿ ಕುಳಿತು ಚಂದ್ರಗುಪ್ತನೊಡನೆ ಮುಂದಣ ರಾಜ್ಯ ಕಾರ್ಯವನ್ನು ಆಲೋಚಿಸುತಿದ್ದನು.

ಚಾಣಕ್ಯ—ಚಂದ್ರಗುಪ್ತ! ಅರಸುಗಳಲ್ಲಿ ನಂದರಿಗೆ ಶತ್ರುಗಳು ಯಾರು? ಮಿತ್ರರು ಯಾರು?

ಚಂದ್ರಗುಪ್ತ—ಸ್ವಾಮಿ! ಒಳಗೊಳಗೆ ಎಲ್ಲರಿಗೂ ಇವರ ಮೇಲೆ ಹೊಟ್ಟೆಕಿಚ್ಚಿದೆ ಆದರೆ ಒಬ್ಬರಿಗೂ ಮುಂದೆ ಬರಲಿಕ್ಕೆ ಧೈರ್ಯವಿಲ್ಲ.

ಚಾಣ—ಕಾರಣ?

ಚಂದ್ರ—ಈ ನಂದರಿಗೆ ಅಮಾತ್ಯ ರಾಕ್ಷಸನೆಂಬೊಬ್ಬನು ಮಂತ್ರಿ ಇದ್ದಾನೆ. ಅವನ ಚತುರೋಪಾಯಗಳಿಗೆ ಈ ಅರಸರೆಲ್ಲ ಹಲ್ಲುಕಿರಿದು ಹೋಗಿ ನಿವೃತ್ತಿ ಇಲ್ಲದೆ ನಂದರಿಗೆ ದಾಸಾನುದಾಸರಾಗಿದ್ದಾರೆ.

ಚಾಣ—ರಾಕ್ಷಸನು ರಾಜ್ಯಭಾರನಿರ್ವಾಹದಲ್ಲಿ ಅಷ್ಟು ನಿಪುಣನೆ?

ಚಂದ್ರ—ಗುಣಕ್ಕೆ ಮತ್ಸರವೆ? ನಂದರ ವಿಷಯದಲ್ಲಿ ಎಲ್ಲಿಯಾದ ರೊಬ್ಬನು ಎಳ್ಳಿನಷ್ಟು ವಿರೋಧವನ್ನು ತೋರಿಸಿದರೆ ಸಾಕು; ನಾಳೆಗೆ ಅವನ ಹೆಸರೆ ಇಲ್ಲ! ಪ್ರೀತಿಪಾತ್ರರಾದವರಿಗೆ ಕಡಿಮೆಯೆ ಇಲ್ಲ.

ಚಾಣ—ಸಾಮಂತರಾಜರನ್ನು ಯಾವ ರೀತಿಯಿಂದ ನಡೆಯಿಸಿ ಕೊಂಡು ಬರುತ್ತಾನೆ?

ಚಂದ್ರ—ಅನುಕೂಲರಾದವರಿಗೆ ಅವರವರ ಇಚ್ಛಾನುಸಾರವಾಗಿ ದೇಶಗಳನ್ನು ಬಿಟ್ಟು, ಸಾಕಷ್ಟು ಕಪ್ಪಗಳನ್ನು ನೇಮಿಸಿ, ಕಾಲಕಾಲಕ್ಕೆ ತಪ್ಪದೆ ದ್ರವ್ಯಸಂಚಯವನ್ನು ಮಾಡುತ್ತ, ಭಂಡಾರವನ್ನು ಬಹುವಾಗಿ ಬೆಳೆಯಿಸಿದ್ದಾನೆ. ಕ್ಷಣವಾದರೂ ಉದಾಸೀನತೆಯನ್ನು ತೋರಿಸು ವುದಿಲ್ಲ.

ಚಾಣ—ಅಧಿಕಾರಿಗಳನ್ನು ಹೇಗೆ ನೋಡುತ್ತಾನೆ?

ಚಂದ್ರ—ಅಧಿಕಾರಿಗಳಿಗೆ ಸಂಬಳಗಳು ಬೇಕಾದಷ್ಟು. ಆದರೆ, ಅವಂಗೆ ತಲೆ ತುರಿಸಿಕೊಳ್ಳುವಷ್ಟು ಸಮಯ ಸಿಗದು; ಅಷ್ಟು ಕೆಲಸ ಗಳನ್ನು ನೇಮಿಸುವನು. ಇದನ್ನು ನೋಡಿದರೆ ಇವನು ಅನ್ಯರ ಅಭಿ ವೃದ್ಧಿಯನ್ನು ಸಹಿಸುವವನಲ್ಲವೆಂದು ತೋರುತ್ತದೆ.

ಚಾಣ—ಚಂದ್ರಗುಪ್ತನೆ! ಹಾಗಲ್ಲ; ರಾಕ್ಷಸನಲ್ಲಿ ಈ ಗುಣವಿದ್ದರೆ ಅವನ್ನು ದೋಷವೆಂದೆಣಿಸಕೂಡದು. ಸಾಮಾನ್ಯರೂ ಕೂಡಾ ಮಿತಿ ಮೀರಿದ ಧನಿಕರಾದರೆ, ಕಡೆಗೆ ಅವರಲ್ಲಿ ನಿಗ್ರಹಾನುಗ್ರಹ ಶಕ್ತಿಯುಂಟಾ ಗುತ್ತದೆ. ಆ ಮೇಲೆ ಅವರು ರಾಜನನ್ನೆ ಗಣ್ಯಕ್ಕೆ ತಾರದೆ ಅವನ ಸ್ಥಾನ ವನ್ನೆ ಅಪಹರಿಸಲೂ ಬಹುದು. ಆದುದರಿಂದ ರಾಕ್ಷಸನ ನೀತಿ ರಾಜ ತಂತ್ರಕ್ಕೆ ಸಾಧಕವಾಗಿದೆ. ಸ್ವಾಮಿಭಕ್ತಿಯುಳ್ಳ ಮಂತ್ರಿಗೆ ಇದೊಂದು ಗುಣವಲ್ಲದೆ ದೋಷವಲ್ಲ; ಇವನು ಮಂತ್ರಿಪದವಿಗೆ ಯೋಗ್ಯನು. ಅದು ಹಾಗಿರಲಿ. ಈಗ ನಂದರಿಗೆ ಮಿತ್ರಪಕ್ಷದವರು ಯಾರು? ಉದಾಸೀನ ಪಕ್ಷದವರು ಯಾರು?

ಚಂದ್ರ—ಕಾಶೀರಾಜನೂ, ಮತ್ಸ್ಯರಾಜನೂ ನಂದರಿಗೆ ಸ್ನೇಹಿ ತರು. ಕಾಶ್ಮೀರ, ಮಲಯ, ಸಿಂಧು, ಕುಲೂತ, ಪಾರಸೀಕ, ಕಾಂಬೋಜ, ಚೀನ, ಹೂಣ ದೇಶಾಧಿಪತಿಗಳ ನಿಯಂತೃತವಾದ ಪರ್ವತೇಶ್ವರನು ಉದಾಸೀನನು.

ಚಾಣ—ಉದಾಸೀನತೆಗೆ ಕಾರಣವೇನು?

ಚಂದ್ರ—ಮೊದಲು ಅವನು ವೈರಿಯೆ ಆಗಿದ್ದನು. ಆದರೆ ಒಮ್ಮೆ ಪರ್ವತೇಶ್ವರನಿಗೆ ಶತ್ರುಗಳಿಂದ ಬಂದ ವಿಪತ್ತನ್ನು ಈ ಅಮಾತ್ಯನು ತಪ್ಪಿ ಸಿದನು. ಅಂದಿನಿಂದ ಮಿತ್ರನಂತೆ ನಟಿಸಿಕೊಂಡಿರುವನಂತೆ.

ಚಾಣ—ಅದು ಹಾಗಿರಲಿ. ಈ ಪಟ್ಟಣದಲ್ಲಿ ನಿನ್ನ ತಂದೆಯಲ್ಲಿ ಅನುರಾಗವಿದ್ದ ಅಧಿಕಾರಿಗಳಿದ್ದಾರೋ? ಇಲ್ಲವೊ?

ಚಂದ್ರ—ನಮ್ಮ ತಂದೆಯಿಂದಲೆ ಬಾಗುರಾಯಣಾದಿ ಸೇನಾ ಪತಿಗಳು ಪ್ರಸಿದ್ಧರಾದವರು.

ಚಾಣ—ರಾಕ್ಷಸನು ಬುದ್ಧಿವಂತನಾಗಿದ್ದರೂ ಶೌರ್ಯದಲ್ಲಿ ಹೇಗೆ?

ಚಂದ್ರ—ಇವನು ಎಲ್ಲಾ ಸೇನಾಧಿಪತಿಗಿಂತಲೂ ಅಧಿಕ ಪರಾಕ್ರಮ ಉಳ್ಳವನು. ಯುದ್ಧಕ್ಕೆ ನಿಂದನಾದರೆ, ಪ್ರತಿಪಕ್ಷಲಕ್ಷವನ್ನಾದರೂ ಲಕ್ಷ್ಯಮಾಡದೆ ಲಕ್ಷಿಸುವುದರೊಳಗೆ ಶಿಕ್ಷಿಸುವಷ್ಟು ದಕ್ಷತೆಯುಳ್ಳವನು ಎಂದು ಹಲವರು ಹೇಳಿಕೊಳ್ಳುವುದನ್ನು ಕೇಳಿದ್ದೇನೆ.

ಇದನ್ನು ಕೇಳಿ ಚಾಣಕ್ಯನು ಚಂದ್ರಗುಪ್ತನನ್ನು ಬಳಿಗೆ ಕರೆದು, ಕಿವಿಯಲ್ಲಿ ಏನೇನೊ ಹೇಳಿ, ಆ ಮೇಲೆ "ನಾನು ಅಲ್ಲಿದ್ದೇನೆ, ನೀನು ಅಷ್ಟು ಮಾಡಿಕೊಂಡು ಬಂದುಬಿಡು" ಎಂದು ಹೇಳಿ ಹೊರಟು ಹೋದನು.

## ೪. ಕಾರ್ಯಾರಂಭ.

ಹೊತ್ತುಮುಳುಗಿ ಸುಮಾರು ಎರಡು ಗಳಿಗೆಯಾದೀತು. ಸೇನಾಪತಿ ಬಾಗುರಾಯಣನು ಮನೆಗೆ ಬಂದು ಉಡಿಗೆತೊಡಿಗೆಗಳನ್ನೆಲ್ಲ ತೆಗೆದು ಹಾಕಿ, ಕೈಕಾಲು ಮೋರೆ ತೊಳೆದು ಬಂದಿಷ್ಟು ಗಂಗೋದಕವನ್ನು ತೆಗೆದುಕೊಂಡು ಹೊರ ಜಗಲಿಯಲ್ಲಿರುವ ಎರಗುಮಂಚದ ಮೇಲೆ ಕುಳಿತು ವೀಳೆಯದೆಲೆಗೆ ಸುಣ್ಣ ಹಚ್ಚುತಿದ್ದನು. ಅಷ್ಟರಲ್ಲಿ ಚಂದ್ರಗುಪ್ತನು ಬಂದುಬಿಟ್ಟನು. ಒಡನೆಯೆ ಎದ್ದು ಉಪಚಾರಗಳನ್ನೆಲ್ಲ ಮಾಡಿ, ಸುಖದುಃಖಗಳನ್ನು ಮಾತನಾಡಿ, ಅವನಿಗೆ ಬಂದೊದಗಿದ ಅವಸ್ಥೆಯನ್ನು ನೋಡಿ ಮನಸ್ಸು ಕರಗಿ, ''ಈ ಸಮಯದಲ್ಲಿ ಏನು ಬಂದೆ? ನೀನು ಸುಮ್ಮನೆ ಬರುವವನಲ್ಲ" ಎಂದನು.

ಅದಕ್ಕೆ ಚಂದ್ರಗುಪ್ತನು:—ಸೇನಾಪತಿಗಳೇ! ನನ್ನ ಅವಸ್ಥೆಯನ್ನು ಏನೆಂದು ಹೇಳಲಿ? ಹಿಂದಣದನ್ನೆಲ್ಲ ನೆನೆದರೆ ನೀರಿನಲ್ಲಿ ಕಣ್ಣುತೆರೆದಂತಾಗುವುದು. ಒಮ್ಮೊಮ್ಮೆ "ಶಿವಾ" ಎಂದು ಕಣ್ಣಿಗೆ ನಿದ್ದೆಯೆ ಹತ್ತುವುದಿಲ್ಲ. ಕಳೆದುದೆಲ್ಲ ಕಳೆಯಿತು, ಇನ್ನು ಅದನ್ನು ಯೋಚಿಸಿ ಮಾಡುವುದೇನು? ನನ್ನ ಹಿರಿಯರೆಲ್ಲ ಅಕಾಲದಲ್ಲಿಯೆ ಪರಲೋಕವಾಸಿಗಳಾದರು. ಇನ್ನು ನನಗೆ ಬುದ್ಧಿನೀತಿ ಹೇಳುವವರಾಗಿ ಇರುವವರು ನೀವೆ; ಆದುದರಿಂದ ಈಗ ಬಂದ ವಿಷಯವನ್ನು ಹೇಳುತ್ತೇನೆ. ಮೊದಲು ನನ್ನ

ತಂದೆ ಗಂಗಾತೀರದಲ್ಲಿ ಶಿವಾಲಯವನ್ನು ಕಟ್ಟಿಸಿ, ಅದರಲ್ಲಿ ಈಶ್ವರ ಪ್ರತಿಷ್ಠೆಯನ್ನು ಮಾಡಿಸಿ, ಆ ಮೇಲೆ ನಿತ್ಯದ ವಿನಿಯೋಗಕ್ಕೆಂದೂ, ಕೈಸಾಲೆ ಗೋಪುರಗಳನ್ನು ಕಟ್ಟಿಸಲಿಕ್ಕೆಂದೂ, ಕೆಲವು ದ್ರವ್ಯವನ್ನು ಕಾಶಿಯಲ್ಲಿರುವ ಕೇಶವದಾಸನೆಂಬ ವರ್ತಕನಲ್ಲಿ ಕೊಟ್ಟು, ಅವನಿಂದ ಆ ಕಾರ್ಯವನ್ನು ಮಾಡಿಸಬೇಕೆಂದು ನಿಶ್ಚಯಿಸಿದ್ದರು. ಆದರೆ ಮತ್ತೆ ಏನಾಯಿತೆಂದು ನಿಮಗೆ ಗೊತ್ತಿದೆಯಷ್ಟೆ? ಸಾಯುವಾಗಲೂ ಅದನ್ನೆ ಹೇಳುತ್ತ "ಶಿವಶಿವಾ" ಎಂದು ಪ್ರಾಣಗಳನ್ನು ಬಿಟ್ಟರು. ಇದನ್ನು ಕೇಳುತಿದ್ದ ನಾನು ಅಲ್ಲಿಂದ ಬಿಡುಗಡೆಯಾದ ಮೇಲೆ ಆ ಕೇಶವದಾಸನಿಗೊಂದು ಕಾಗದವನ್ನು ಬರೆದೆನು. ಅದಕ್ಕವನು ಬರೆದ ಉತ್ತರವಿದು" ಎಂದು ತಂದಿದ್ದ ಕಾಗದವನ್ನು ಮುಂದಿಟ್ಟು, "ನೀವು ನನ್ನ ಹಿರಿಯರಿಗೆ ಸರಿ; ಆದುದರಿಂದ ನನ್ನ ಮೇಲೆ ಪ್ರೀತಿ ಇಟ್ಟು, ಹಿರಿಯರು ಆರಂಭಿಸಿದ ಧರ್ಮಕಾರ್ಯವೊಂದು ಶಾಶ್ವತವಾಗಿ ನಡೆದುಬರುವಂತೆ ನಿಮ್ಮ ಅನುಮತಿಯನ್ನೂ ಕೊಡಬೇಕು. ಮಿಕ್ಕ ಸೇನಾಪತಿಗಳ ಅನುಮತಿಗಳನ್ನೂ ಕೊಡಿಸಬೇಕು" ಎಂದನು.

**ಪತ್ರದಲ್ಲಿ:**—ರಾಜ ಶ್ರೀ ಚಂದ್ರಗುಪ್ತರಾಯರಿಗೆ—ತಮ್ಮ ಸೇವಕನಾದ **ಕಾಶಿಯ** ಕೇಶವದಾಸನು ಮಾಡುವ ವಿಜ್ಞಾಪನೆ; ಏನೆಂದರೆ, ನೀವು ನನಗೆ ಬರೆದು **ಕಳುಹಿಸಿದ** ಕಾಗದನ್ನು ನೋಡಿ ಅಭಿಪ್ರಾಯವಾಯಿತು. ನಿಮ್ಮ ತಂದೆ ಮೌರ್ಯರು ಇಲ್ಲಿ ಕಟ್ಟಿಸಿದ ಶಿವಾಲಯದ ನಿತ್ಯನೈಮಿತ್ತಿಕಗಳ ವಿನಿಯೋಗಕ್ಕಾಗಿಯೂ, ಕೈಸಾಲೆ **ಗೋಪುರಗಳನ್ನು** ಕಟ್ಟಿಸುವುದಕ್ಕಾಗಿಯೂ ಅವುಗಳಿಗೆ ಬೇಕಾದಷ್ಟು ಹಣವನ್ನು ನನ್ನ **ಕೈಯಲ್ಲಿ** ಕೊಟ್ಟಿದ್ದರು. 'ಅದನ್ನು ಪೂರಯಿಸಿ ಆಯಿತೋ? ಆಗದಿದ್ದರೆ **ಕೂಡಲೇ ಮಾಡಿಸಬೇಕು'** ಎಂದು ನೀವು ಬರೆದಿರುವುದು ಸರಿಯಷ್ಟೆ? ನೀವು ಅವರ ಉತ್ತರಾಧಿಕಾರಿಗಳಾದರೂ ಇನ್ನೂ **ಚಿಕ್ಕವರು.** ಆದುದರಿಂದ ಅವರು ದೈವಾಧೀನರಾಗಿರುವ **ಈ** ಸಮಯದಲ್ಲಿ ನಿಮ್ಮ ಮಾತಿನ ಮೇಲೆ ಇಷ್ಟೊಂದು ಹಣ ವೆಚ್ಚಮಾಡಿ ಆ **ಕೆಲಸವನ್ನು ಮಾಡಿಸಲಿಕ್ಕೆ** ಸ್ವಲ್ಪ ಸಂದೇಹವಾಗುತ್ತದೆ. ಆದಕಾರಣ ನಿಮಗೀಗ ತಿಳಿಸುವುದೇನಂದರೆ--**ಈ** ವಿಷಯವನ್ನು ನಿಮಗೆ ಹಿರಿಯರಾಗಿಯೂ ಆಪ್ತರಾಗಿಯೂ ಇರುವವರ ಸಂಗಡ **ಚೆನ್ನಾಗಿ** ಆಲೋಚಿಸಿಕೊಂಡು **ಅವರೆಲ್ಲರ** ಸಮ್ಮತಿ ಇದ್ದ ಪ್ರತ್ಯುತ್ತರವನ್ನು ನನಗೆ ಬರೆಯಬೇಕು. **ಉತ್ತರ** ಬಂದೊಡನೆ ನಿಮ್ಮ ಹಿರಿಯರು ಆರಂಭಿಸಿದ **ಸತ್ಕಾರ್ಯವನ್ನು ಕೂಡಲೇ** ಸಾಂಗಗೊಳಿಸುತ್ತೇನೆ.

ಇತಿ ತಮ್ಮ ವಿಧೇಯ,

**ಕಾಶೀ ಕೇಶವದಾಸ.**

ಹೀಗೆ ಬರೆದಿರುವುದನ್ನು ಓದಿನೋಡಿ ಬಾಗುರಾಯಣನು--"ಕುಮಾರನೇ! ನಿನ್ನ ತಂದೆ ಎಂದರೆ ಮಹಾ ಧಾರ್ಮಿಕನೂ, ಪುಣ್ಯವಂತನೂ, ಸ್ವಾಮಿಕಾರ್ಯತತ್ಪರನೂ ಆಗಿದ್ದನು. ಅಂತಹವನನ್ನು ಈ ದುಷ್ಟರು ಕಪಟದಿಂದ ಹೀಗೆ ಮಾಡಿಬಿಟ್ಟರು. ನಿನಗೂ ಈ ಗತಿಯನ್ನು ತೋರಿಸಿದರು. ಇಂತಹ ವಿಷಮಕಾಲದಲ್ಲಿಯೂ ನೀನು ನಿನಗೊದಗಿದ ಕಷ್ಟಗಳೊಂದನ್ನೂ ಮನಸ್ಸಿಗೆ ತಾರದೆ ತಂದೆ ಆರಂಭಿಸಿದ ಧರ್ಮಕಾರ್ಯವನ್ನು ಕೊನೆಗಾಣಿಸುವುದರಲ್ಲಿಯೇ ಬದ್ಧಕಂಕಣನಾಗಿರುವೆ. ನೂರು ವರುಷ ಬದುಕು; ನಿನ್ನ ತಂದೆಯೆ ನಮ್ಮನ್ನು ಈ ಸ್ಥಿತಿಗೆ ತಂದವನು. ನಾವು ಭಾಗ್ಯಹೀನರಾದುದರಿಂದ ಅವನನ್ನು ಕಳೆದುಕೊಂಡೆವು. ಅವನ ಕೆಲಸಕ್ಕೆ ನಮ್ಮಿಂದ ಎಂದಿಗೂ ಅಡ್ಡಿಯಾಗದು. ಈಗಲೆ ಆ ಕೇಶವದಾಸನಿಗೆ ನಿನ್ನ ಸ್ವಹಸ್ತಾಕ್ಷರದಿಂದ ಒಂದು ಕಾಗದವನ್ನು ಬರೆ; ನಾವೆಲ್ಲರೂ ಸಮ್ಮತಿಗಳನ್ನು ಬರೆದುಕೊಡುವೆವು" ಎಂದನು.

ಚಂದ್ರಗುಪ್ತನು ಪ್ರಕೃತೋಚಿತವಾಗಿ ಕೇಶವದಾಸನಿಗೆ ತನ್ನ ಹೆಸರಿನಿಂದ ಒಂದು ಕಾಗದವನ್ನು ಬರೆದು, ತನ್ನ ಸಮ್ಮತಿಯನ್ನು ಹಾಕಿ, ಅನಂತರ ಬಾಗುರಾಯಣನೊಡನೆ ಕೊಟ್ಟನು. ಅವನು ತನ್ನ ಸಮ್ಮತಿಯನ್ನು ಹಾಕಿ, ಮಿಕ್ಕ ಏಳು ಮಂದಿ ಸೇನಾಪತಿಗಳ ಸಮ್ಮತಿಗಳನ್ನು ಹಾಕಿಸಿ ತರಿಸಿ, ವಸ್ತ್ರತಾಂಬೂಲದೊಡನೆ ಆ ಕಾಗದವನ್ನು ಚಂದ್ರಗುಪ್ತನ ಕೈಗೆ ಒಪ್ಪಿಸಿದನು.

ಕಾಗದವನ್ನು ತೆಗೆದುಕೊಂಡು ಹೊರಟ ಚಂದ್ರಗುಪ್ತನು ಮೊದಲು ತಾನಿದ್ದ ಬಿಡಾರಕ್ಕೆ ಬಂದು, ತಾಯಿಗೆ ನಮಸ್ಕರಿಸಿ, ವಿಷಯಗಳನ್ನೆಲ್ಲಾ ಹೇಳಿ, ಮಾತೃಪತ್ನಿಯರನ್ನು ಕರೆದುಕೊಂಡುಹೋಗಿ, ಒಂದು ಗುಪ್ತವಾದ ಸ್ಥಳದಲ್ಲಿರಿಸಿ, ಮರುದಿನ ಅಲ್ಲಿಂದ ನೈಮಿಶಾರಣ್ಯಕ್ಕೆ ಬಂದು, ಗಂಗಾತೀರದಲ್ಲಿರುವ ಇಂದುಶರ್ಮನ ಮನೆಯಲ್ಲಿ ಅತಿಥಿಸತ್ಕಾರಗಳನ್ನು ಕೈಕೊಳ್ಳುತ್ತಿರುವ ಚಾಣಕ್ಯನನ್ನು ನೋಡಿ, ಸಾಷ್ಟಾಂಗ ವಂದನೆಯನ್ನು ಮಾಡಿ, ಕಾಗದವನ್ನು ಕೊಟ್ಟನು.

**ಆ ಕಾಗದದಲ್ಲಿ:—ಪರಮ ಪ್ರಿಯರಾದ ಕೇಶವದಾಸರಿಗೆ—ತಮ್ಮ ಪ್ರೀತಿಗೆ ಪಾತ್ರನಾದ ಚಂದ್ರಗುಪ್ತನು ಬರೆದ ಕಾಗದ—ನೀವು ಬರೆದು ಕಳುಹಿಸಿದ ಕಾಗದವನ್ನು ನನ್ನ ಹಿರಿಯರೂ, ಹಿತಚಿಂತಕರೂ ಆಗಿರುವ ಸೇನಾಪತಿಗಳಿಗೆ ತೋರಿಸಿದೆನು. ಈ ವಿಷ**

ಯಕ್ಕೆ ಅವರು ಸಂತೋಷಪಟ್ಟು, ತಮ್ಮ ತಮ್ಮ ಸ್ವಹಸ್ತಾಕ್ಷರಗಳಿಂದ ಸಮ್ಮತಿಗಳನ್ನು ಕೊಟ್ಟಿರುತ್ತಾರೆ. ಇನ್ನು ಮೇಲೆ ನಿಮ್ಮ ಮನಸ್ಸಿನ ಸಂದೇಹಗಳನ್ನು ಬಿಟ್ಟು ದೇವಾಲಯದ ಕೆಲಸಗಳನ್ನು ಶಾಶ್ವತವಾಗಿ ನಡೆದುಬರುವಂತೆ ಮಾಡುವ ಸರ್ವ ಭಾರವೂ ನಿಮ್ಮನ್ನು ಕೂಡಿದೆ.

ಇತಿ ಮೌರ್ಯ ಪುತ್ರ ಚಂದ್ರಗುಪ್ತ.

ಚಂದ್ರಗುಪ್ತನ ಅಭಿಪ್ರಾಯವೆ ನಮ್ಮದೂ ಆಗಿರುತ್ತದೆ.

**ಇತಿ ಬಾಗುರಾಯಣ, ಭದ್ರಭಟ, ಪುರುಷದತ್ತ, ಡಿಂಗಿರಾತ, ಬಲಗುಪ್ತ, ರಾಜಸೇನ, ಲೋಹಿತಾಕ್ಷ, ವಿಜಯವರ್ಮ.**

ಕಾಗದವನ್ನು ಓದಿ ನೋಡಿ ಚಾಣಕ್ಯನು ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಹೆಚ್ಚಿನ ಭಾಗವನ್ನು ಕತ್ತರಿಸಿ ತೆಗೆದು ಸುಟ್ಟುಬಿಟ್ಟನು. ಬಳಿಕ ಸ್ನಾನಸಂಧ್ಯಾದಿಗಳನ್ನು ತೀರಿಸಿ, ಚಂದ್ರಗುಪ್ತನೊಡನೆ ಫಲಾಹಾರವನ್ನು ಮಾಡಿ, ಮುಂದಣ ಕಾರ್ಯವನ್ನು ಆಲೋಚಿಸುತಿದ್ದನು.

## ೫. ಪರ್ವತರಾಜ್ಯಪ್ರವೇಶ.

ಹೀಗೆ ಒಂದೆರಡು ದಿನಗಳು ಕಳೆದವು. ಮತ್ತೊಂದು ದಿನ ಉದಯಕಾಲದಲ್ಲಿ ಎದ್ದು ಸ್ನಾನಸಂಧ್ಯಾದಿಗಳನ್ನು ತೀರಿಸಿ, ಸಕಲ ದಂಡನೀತಿಶಾಸ್ತ್ರ ಕೋವಿದನೂ, ಜ್ಯೋತಿಃಶಾಸ್ತ್ರ ಪಾರಂಗತನೂ, ತನ್ನ ಸಹಪಾಠಿಯೂ ಆದ ಇಂದುಶರ್ಮನೊಡನೆ ಚಾಣಕ್ಯನು—"ನಾನು ಬಂದ ವಿಷಯವನ್ನು ನಿನ್ನೆಯೇ ನಿನ್ನೊಡನೆ ಹೇಳಿದ್ದೇನೆಯಷ್ಟೆ; ಈಗ ಚಂದ್ರಗುಪ್ತನೂ ನಾನೂ ಅಲ್ಲಿಗೆ ಹೋಗುತ್ತೇವೆ; ಅದಷ್ಟು ಕೆಲಸಗಳು ನಿನ್ನದು; ನಿನ್ನ ಇಬ್ಬರು ಶಿಷ್ಯರನ್ನು ನನ್ನ ವಶಕ್ಕೆ ಕೊಡಬೇಕು" ಎಂದು ಹೇಳಿ ಅವರನ್ನು ಜತೆಯಲ್ಲಿ ಕರೆದುಕೊಂಡು ಚಂದ್ರಗುಪ್ತನೊಡನೆ ಹೊರಟು ಹೋದನು.

ಇತ್ತ ಪರ್ವತರಾಜ್ಯದಲ್ಲಿ ಸಕಲ ಸಾಮಂತಸೇವಿತನಾದ ಪರ್ವತೇಶ್ವರನು ಮಂತ್ರಿಸೇನಾಪರಿವೃತನಾಗಿ ಸಭಾಮಂಟಪದಲ್ಲಿ ಒಂದು ಸಿಂಹಾಸನಾಸೀನನಾಗಿರಲು, ಪ್ರತೀಹಾರಿಯೊಬ್ಬನು ಬಂದು ಕೈಮುಗಿದು—"ಬುದ್ಧೀ! ಮಹಾತೇಜಸ್ವಿಯಾದ ಒಬ್ಬ ಬ್ರಾಹ್ಮಣನು ಸಂಗಡ

ಒಬ್ಬ ಅರಸುಮಗನನ್ನು ಕರೆದುಕೊಂಡು ಬಂದು ತಮ್ಮ ದರ್ಶನಾಪೇಕ್ಷೆ ಯಿಂದ ರಾಜದ್ವಾರದಲ್ಲಿ ನಿಂತಿರುವನು, ಅಪ್ಪಣೆ ಏನು?"ಎಂದು ಬಿನ್ನೈಸಿಕೊಂಡನು.

ಅದಕ್ಕೆ ರಾಜನು ಮಂತ್ರಿಯಾದ ಶಬರವರ್ಮನನ್ನು ನೋಡಿ, ಕಣ್ಣುಸನ್ನೆಯಿಂದ ಕಳುಹಿಸಿದನು. ಮಹಾಪ್ರಸಾದವೆಂದು ಮಂತ್ರಿ ಒಡನೆಯೆ ಎದ್ದು ಬಹು ಸಂಭ್ರಮದಿಂದ ಬಂದು ಎದುರುಗೊಂಡು, ಹಸ್ತ ಲಾಘವವನ್ನು ಕೊಟ್ಟು, ಅವರಿಬ್ಬರನ್ನು ಸಭಾಸ್ಥಾನಕ್ಕೆ ಕರೆದುಕೊಂಡು ಬಂದನು. ಆಗ ಆಸನದಿಂದ ಜಗ್ಗನೆದ್ದು ಬಂದು ಪರ್ವತೇಶ್ವರನು ಬಂದವರನ್ನು ಕೈಹಿಡಿದು ತಾನೆ ಕನಕಮಯವಾದ ಗದ್ದುಗೆಯಲ್ಲಿ ಕುಳ್ಳಿರಿಸಿ, ತಾನೂ ಕುಳಿತು, "ಭೂಸುರೋತ್ತಮರಿಗೂ ರಾಜಕುಮಾರನಿಗೂ ಕ್ಷೇಮವೆ? ಏನು ಕಾರಣ ಇತ್ತ ಕಡೆಗೆ ಬರವಾಯಿತು?" ಎಂದು ಕೇಳಿದನು.

ಚಾಣಕ್ಯ:—ರಾಯನೆ! ನಾವು ಕ್ಷೇಮದಿಂದಲೆ ಬಂದೆವು; ಪ್ರಜಾ ಪರಿವಾರ ಸಹಿತನಾದ ನಿನಗೆ ಕುಶಲವೆ?

ಪರ್ವತೇಶ್ವರ;—ಸ್ವಾಮೀ! ತಮ್ಮಂತಹವರ ಆಶೀರ್ವಾದ ಬಲ ದಿಂದ ನಾವು ಕ್ಷೇಮಿಗಳೆ; ಆದರೆ ತಾವು ಬಂದಿರುವುದನ್ನು ನೋಡಿದರೆ ಏನಾದರೊಂದು ವಿಶೇಷ ಕಾರ್ಯವಿದೆ ಎಂದು ತೋರುವುದು; ದಯ ಮಾಡಿ ಹೇಳಬೇಕು.

ಅದಕ್ಕೆ ಚಾಣಕ್ಯನು—"ನ್ಯಾಯನೀತಿಗಳಿಂದ ರಾಜ್ಯಪಾಲನೆ ಯನ್ನು ಮಾಡುತ್ತಿರುವ ನಿನ್ನನ್ನೂ ನಿನ್ನ ವೈಭವವನ್ನೂ ಒಮ್ಮೆ ನೋಡಿ ಹೋಗಬೇಕೆಂಬ ಕುತೂಹಲದಿಂದ ಇಲ್ಲಿವರೆಗೆ ಬಂದುಬಿಟ್ಟೆವು" ಎಂದು ಹೇಳಿ ಸಭೆಯನ್ನೊಮ್ಮೆ ನೋಡಿ, ಪುನಃ ರಾಯನ ಮುಖವನ್ನು ದಿಟ್ಟಿಸಿ, ಮನಸ್ಸಿನ ಗುಟ್ಟನ್ನು ವ್ಯಕ್ತಪಡಿಸಲು, ರಾಯನು ನಾಲ್ಕು ದಿಕ್ಕುಗಳನ್ನು ನೋಡಿದೊಡನೆಯೆ ಸಭೆಯಲ್ಲಿರುವವರೆಲ್ಲರೂ ಅಲ್ಲಲ್ಲಿಗೆ ಹೊರಟು ಹೋದರು.

ಚಾಣ—"ರಾಯನೆ! ಸಣ್ಣಸಣ್ಣ ನದಿಗಳ ನೀರೆಲ್ಲ ಎಲ್ಲಿಗೆ ಹೋಗಿ ಸೇರುತ್ತದೆ, ಹೇಳು! ಪುಣ್ಯವೊಂದಿದ್ದರೆ ಎಲ್ಲವೂ ತಾನಾಗಿಯೆ ಕಾಲ ಬುಡಕ್ಕೆ ಬರುತ್ತದೆ. ಸ್ವಲ್ಪ ಕಿವಿಯನ್ನೀಚೆಗೆ ಕೊಡಬೇಕು. ನನ್ನ

ಹೆಸರು ಚಾಣಕ್ಯನೆಂದು; ಇವನ ಹೆಸರು ಚಂದ್ರಗುಪ್ತನೆಂದು. ಈಗ ಒಂದು ವಿಶೇಷ ಸಂಗತಿ ನಡೆದಿದೆ; ಕಾರಣವೂ ಇಲ್ಲ, ಒಂದೂ ಇಲ್ಲ; ಬರಿಯ ಒಂದು ಹೊಟ್ಟೆಕಿಚ್ಚಿನಿಂದ ಪಾಪದ ಈ ಹುಡುಗನ ತಂದೆಯನ್ನೂ ಅಣ್ಣತಮ್ಮಂದಿರನ್ನೂ ನಂದರು ನೆಲಮನೆಯಲ್ಲಿ ಹಾಕಿ ಅನ್ನನೀರು ಸಹ ಕೊಡದೆ ಕೊಂದುಬಿಟ್ಟರು. ಇದೂ ಅಲ್ಲದೆ, ಅವರು ಮಾಡುವ ಅಲ್ಲದ ಸಲ್ಲದ ಕೆಲಸಗಳು ಅಷ್ಟಿಷ್ಟೆಂದು ಹೇಳಿ ಪೂರಯಿಸದು. ಆದಕಾರಣ ಅಮಾತ್ಯ ರಾಕ್ಷಸನೊಬ್ಬನ ಹೊರತು ಮಿಕ್ಕವರೆಲ್ಲ ಸಮಯ ಬಂದರೆ ಈ ಚಂದ್ರಗುಪ್ತನ ಕಡೆಗೆ ಬರುವಂತಿದ್ದಾರೆ, ನೋಡು" ಎಂದು ಕಾಗದವನ್ನು ಕೊಟ್ಟನು.

ಪರ್ವತೇಶ್ವರನು ಕಾಗದವನ್ನು ಓದಿನೋಡಿ ಮನಸ್ಸಿನಲ್ಲಿ— "ಮೊದಲು ಗೂಢಚಾರರು ಬಂದು ಹೇಳಿದ ವರ್ತಮಾನವು ಸರಿಯಾಯಿತು. ಹೀಗಿದ್ದರೆ ನಂದನಿಗ್ರಹವೆಂಬುದು ಬಹಳ ಸುಲಭದಲ್ಲಿ ಆಗುವುದು" ಎಂದು ಯೋಚಿಸಿ,—ಸ್ವಾಮಿಾ! ತಮಗೆ ಮಧ್ಯಾಹ್ನಿಕ ಸಮಯವಾಯಿತು ಈ ವಿಷಯವನ್ನು ಮತ್ತೆ ಆಲೋಚಿಸುವ" ಎಂದು ಮಂತ್ರಿಯಾದ ಶಬರ ವರ್ಮನನ್ನು ಅವರೊಡನೆ ಕೂಡಿ ಕೊಟ್ಟು, ತಾನು ಪೀಠದಿಂದೆದ್ದು ಸ್ನಾನಕ್ಕೆ ಹೋದನು.

ಮಂತ್ರಿ ಆ ಅತಿಥಿಗಳನ್ನು ಕರೆದುಕೊಂಡು ಹೋಗಿ, ಪ್ರಮದ ವನದಲ್ಲಿರುವ ಅತಿಥಿಮಂದಿರದಲ್ಲಿಳಿಸಿ, ಅವರಿಗೆ ಬೇಕಾದ ಅನುಕೂಲತೆ ಗಳನ್ನು ಒದಗಿಸಿಕೊಟ್ಟು, ಹಿಂತಿರುಗಿ ಬಂದು ರಾಯನಿಗೆ ತಿಳಿಸಿ ತನ್ನ ಮನೆಗೆ ಹೋದನು.

## ೬. ಪರ್ವತೇಶ್ವರನ ಕಷ್ಟನಿವೇದನೆ.

ಮಧ್ಯಾಹ್ನದ ಮೇಲೆ ಪರ್ವತೇಶ್ವರನು ತನ್ನ ಏಕಾಂತ ಮಂದಿರ ದಲ್ಲಿ ಕುಳಿತು ಉಲೂಕ, ಶಬರವರ್ಮರೆಂಬ ಮಂತ್ರಿಗಳನ್ನು ಕರೆಯಿಸಿ, ಬಳಿಯಲ್ಲಿ ಕುಳ್ಳಿರಿಸಿಕೊಂಡು, ಚಾಣಕ್ಯ ಚಂದ್ರಗುಪ್ತರು ಬಂದ ವಿಷಯ ವನ್ನು ಅವರ ಮುಂದಿಟ್ಟು, 'ಇದಕ್ಕೆ ನಿಮ್ಮ ಅಭಿಪ್ರಾಯವೇನು?' ಎಂದು ಕೇಳಿದನು.

ಅದಕ್ಕೆ ಶಬರವರ್ಮನು:—ಬುದ್ಧೀ' ಈಗ ಒಂದವರು ನಮ್ಮ ಸಹಾಯವನ್ನು ಇದು ವರೆಗೂ ಕೇಳಲಿಲ್ಲ; ಆದರೂ ಕೇಳಲಿಕ್ಕೆಯೆ ಬಂದ ವರೆಂದು ಅವರ ಮಾತಿನಿಂದಲೆ ಸ್ಪಷ್ಟವಾಗುತ್ತದೆ. ಕೇಳಿದರೆ ಮಾತು ಕೊಡುವುದೆ. ಮತ್ತೇನು?

ಉಲೂಕ—ಜೀಯಾ! ಮಾತುಕೊಡುವುದೆಲ್ಲ ಸರಿ; ಆದರೆ ನಮಗೆ ನಂದರಿಂದ ಇದುವರೆಗೆ ಯಾವ ತರದ ಕೆಡುಕೂ ಇಲ್ಲ; ಅಲ್ಲದೆ ಅಮಾತ್ಯ ರಾಕ್ಷಸನು ನಮಗೆ ಸ್ನೇಹಿತನು; ಕಷ್ಟಕಾಲದಲ್ಲಿ ಸಹಾಯ ಮಾಡಿದ್ದಾನೆ. ಇವನೊಬ್ಬ ಹುಡುಗನು; ಇನ್ನು ನಮ್ಮ ಸಹಾಯದಿಂದ ರಾಜನಾಗ ಬೇಕಷ್ಟೆ. ಏನೋ ಏನೊ! ನನ್ನ ಮನಸ್ಸಿನಲ್ಲಿ ಇವರಿಗಾಗಿ ಅವರನ್ನು ಬಿಡುವುದು ಅಷ್ಟು ಹಿತವಾಗಿ ಕಾಣುವುದಿಲ್ಲ.

ಶಬರವರ್ಮ—ರಾಜಕೀಯ ವಿಷಯದಲ್ಲಿ ಸ್ನೇಹವೆಂಬುದಿಲ್ಲ; ಸಮಯಕ್ಕೆ ಸರಿಯಾಗಿ ನಡಿಯುವುದೆ ರಾಜನೀತಿ. ಇಬ್ಬರಿಗೆ ಜಗಳ ವಾದರೆ ಅಲ್ಲ ಮೂರನೆಯವನಿಗೆ ಆದಾಯವಿದೆ; ಸ್ನೇಹಿತರೆಂದು ಸುಮ್ಮನೆ ಕುಳಿತರೆ ಸುಮ್ಮನೆ ಇರಬೇಕಾದೀತು.

ಉಲೂಕ—ನಾವು ಇವರಿಗೆ ಸಹಾಯಮಾಡಿ ಜಯವಾದರೆ ಸರಿ; ಇಲ್ಲದಿದ್ದರೆ 'ಇದ್ದುದೂ ಹೋಯಿತು ಮದ್ದಿನ ಗುಣದಿಂದ' ಎಂಬಂತೆ ನಮಗೂ ನಂದರಿಗೂ ವಿರೋಧವಾಗುವುದೊಂದು ನಿಜ. ಮತ್ತೆ ಇವರೆ ಲ್ಲಿಯೊ ಏನೊ?

ಶಬರವರ್ಮ—ಅದು ಹಾಗೆಯೇ; ಆಲೋಚಿಸದೆ ಕೈಹಾಕಿದರೆ ಬಂದ ನೀರು ಇದ್ದ ನೀರನ್ನೂ ತೆಗೆದುಕೊಂಡು ಹೋಯಿತೆಂದಾಯಿತು. ಆದುದರಿಂದ ಈಗ ಚಾಣಕ್ಯನನ್ನು ಕರೆಯಿಸಿ ಮಾತನಾಡಿ, ನೆರೆನೋಡಿ ಉಳಿಹಾಕುವ.

ಪರ್ವತೇಶ್ವರ—'ಸರಿಸರಿ. ಶಬರವರ್ಮನು ಈಗ ಹೇಳಿದ ಮಾತು ಸಾವಿರಕ್ಕೊಂದು, ಹಾಗೆಯೆ ಮಾಡುವ' ಎಂದು ಆಸ್ಥಾನಕ್ಕೆ ಬಂದು ಕುಳಿತು, ಚಾಣಕ್ಯನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಅವನು ಹೋಗಿ ಚಾಣಕ್ಯನನ್ನು ಕಂಡು, "ಅಪ್ಪಣೆಯಾಗಿದೆ, ದಯೆಮಾಡಿಸಬೇಕು" ಎಂದು ಹೇಳಿ ಕರೆದುಕೊಂಡು ಬಂದನು. ದೂರದಿಂದ ಬರುತ್ತಿರುವ

ಚಾಣಕ್ಯನನ್ನು ನೋಡಿ ಪರ್ವತೇಶ್ವರನು ತಾನೆ ಎದ್ದು ಹೋಗಿ, ಕೈ ಹಿಡಿದು, ಕರೆದುಕೊಂಡು ಬಂದು, ಒಳಿಯಲ್ಲೆ ಇನ್ನೊಂದು ಸಿಂಹಾಸನ ದಲ್ಲಿ ಕುಳ್ಳಿರಿಸಿಕೊಂಡು, ಹೀಗೆಂದು ಆರಂಭಿಸಿದನು.

"ಸ್ವಾಮಿ! ಚಂದ್ರಗುಪ್ತನು ತಮ್ಮ ಒಳಿಗೆ ಬಂದು ಎಷ್ಟು ಸಮಯವಾಯಿತು?"

ಚಾಣ—ರಾಯನೆ! ಚಂದ್ರಗುಪ್ತನು ನಮ್ಮ ಒಳಿಗೆ ಬಂದು ಎಷ್ಟೆ ಸಮಯವಾಗಲಿ; ಈ ಏಕ್ಕೊಂದು ಇರುವ ವರೆಗೆ ಆ ದುಷ್ಟರಿಗೂ ನಮಗೂ ಎಣ್ಣೆ ಸೀಗೆಯೇ ಸರಿ; ನಾವೀಗ ನಿನ್ನ ಬಳಿಗೆ ಬಂದಂತೆಯೆ ಚಂದ್ರಗುಪ್ತನೂ ನಮ್ಮಲ್ಲಿಗೆ ಬಂದನು.

ಪರ್ವತೇಶ್ವರ—ಹಾಗಾದರೆ ನೀವೀಗ ನನ್ನಿಂದೇನಾಗಬೇಕೆಂದು ಅಪೇಕ್ಷಿಸುತ್ತೀರಿ?

ಚಾಣ—ಹಾಗಾದರೆ ಕೇಳು; ಈ ನಂದರು ಚಂದ್ರಗುಪ್ತನಿಗೆ ಎಷ್ಟು ಶತ್ರುಗಳೊ ಅದಕ್ಕಿಂತಲೂ ಹೆಚ್ಚು ನನಗೆ ವೈರಿಗಳು; ನಿರಪರಾಧಿ ಯಾಗಿ ಸಭೆಯಲ್ಲಿ ಅತಿಥಿಯಾಗಿದ್ದ ನನ್ನನ್ನು ಅವಮಾನ ಪಡಿಸಿದರು. ಆಗಲೆ ನನ್ನ ತಪೋಬಲದಿಂದಲೆ ಅವರನ್ನು ಸುಟ್ಟುಬಿಡುತ್ತಿದ್ದೆನು. ಆದರೆ ಅದು ಪೌರುಷವಲ್ಲ; ನನಗೆ ಹೇಗೆ ಅವಮಾನವನ್ನು ಮಾಡಿದರೋ ಹಾಗೆಯೆ ಅವರನ್ನು ಅವಮಾನಿಸಿ ನಿಗ್ರಹಿಸಬೇಕಾಗಿದೆ. ಅದಕ್ಕಾಗಿ ಅನ್ಯ ರಾಜರ ಸೇನೆಯನ್ನು ಅಪೇಕ್ಷಿಸಬೇಕಾಯಿತು. ಇದು ನಿನ್ನಿಂದಾದೀತೆಂದು ನಂಬಿ ಇಲ್ಲಿವರೆಗೆ ಬಂದಿದ್ದೇನೆ. ಈಗ ಅನ್ಯರಿಗಾಗಿ ತನ್ನ ಸೈನ್ಯವನ್ನು ಸುಮ್ಮನೆ ದಣಿಸಬೇಕಲ್ಲಾ! ಎಂದು ನಿನ್ನ ಮನಸ್ಸಿನಲ್ಲಿದ್ದರೆ ಹೆಸರಿಗೆ ಮಾತ್ರ ನಿನ್ನ ಸೇನೆಯನ್ನು ಕಳುಹಿಸಿದರೆ ಸಾಕು; ಗಾಳದ ತುದಿಯಲ್ಲಿರುವ ಎರೆಯನ್ನು ತೋರಿಸಿ, ದೊಡ್ಡ ದೊಡ್ಡ ಮೀನುಗಳನ್ನು ಹೊರಗೆಳೆದು ಬೀಸಿ ನೆಲಕ್ಕೆ ಅಪ್ಪಳಿಸುವಂತೆ ಉಪಾಯದಿಂದಲೆ ಅವರನ್ನು ಮಣ್ಣು ಗೂಡಿಸಿ ಬಿಡುವೆನು; ಆ ಮೇಲೆ ಎಲ್ಲವೂ ನೀನು ಹೇಳಿದಂತೆಯೆ ಆದೀತು. ಮಳೆಗಾಲವು ಕಳೆಯಿತು; ಶರತ್ಕಾಲವು ನಡೆಯುತ್ತಿದೆ; ಅರಸುಗಳಿಗೆ ಇದುವೆ ದಂಡಯಾತ್ರಾಸಮಯವು.

ಪರ್ವ—ನೀವು ಹೇಳಿದುದೆಲ್ಲವೂ ತಿಳಿಯಿತು; ಆದರೆ ಈಗ ಒಂದು ಮೋಸವಾಗಿದೆ; ನಮ್ಮ ಪೂರ್ವವೈರಿಯಾದ ಲಂಪಾಕದೇಶಾಧಿಪನು ನಗ್ನ ದೇಶಾಧಿಪನ ಸಹಾಯವನ್ನು ಪಡೆದುಕೊಂಡು, ಹಿಂದಣ ಹಗೆಯನ್ನು ಸಾಧಿಸುವುದಕ್ಕಾಗಿ ಈಗ ದಂಡೆತ್ತಿ ಬರುತ್ತಾನೆ ಎಂದು ನಮಗೆ ತಿಳಿದು ಬಂದಿದೆ. ಆದಕಾರಣ ಮೊದಲು ಇದೊಂದು ಮುಗಿದ ಮೇಲೆ ನಿಮ್ಮ ಕೆಲಸಕ್ಕೆ ಕೈಹಾಕಬೇಕಾಗಿದೆ. ಅದುವರೆಗೆ ದಯಮಾಡಿ, ತಾವಿಬ್ಬರೂ ಇಲ್ಲಿಯೇ ಇರಬೇಕು.

ಚಾಣ—(ನಗುತ್ತ) ನೀನೀಗ ಹೇಳಿದ ಮಾತೇನೋ ನ್ಯಾಯವೆ; ಆದರೂ ಇದರಲ್ಲೇನಿದೆ? ಇದೊಂದು ಕೆಲಸವೇ ಅಲ್ಲ.

ಪರ್ವ—ಏನು ಸ್ವಾಮೀ! ಶತ್ರುಗಳನ್ನೂ ಅಗ್ನಿಯನ್ನೂ ಅಲ್ಪ ವೆಂದು ಎಣಿಸಕೂಡದಲ್ಲ?

ಚಾಣ—"ಹೌದಪ್ಪಾ! ನೀನು ಇಷ್ಟೆಲ್ಲ ಗಲಿಬಿಲಿ ಮಾಡುವು ದಾದರೂ ಯಾಕೆ? ನಮ್ಮ ಆಲೋಚನೆ ಎಲ್ಲ ಕಡೆಗೆ ತಿಳಿದೀತು; ನಿನಗೆ ಆಪ್ತನಾಗಿಯೂ ಬುದ್ಧಿಶಾಲಿಯಾಗಿಯೂ ಇರುವ ಒಬ್ಬನನ್ನು ನನ್ನ ಸ್ವಾಧೀನಕ್ಕೆ ಕೊಡು; ಮತ್ತೆಲ್ಲ ಮತ್ತೆ," ಎಂದು ಹೊರಟು ಹೋದನು.

## ೭. ಅನಿಷ್ಟನಿವೃತ್ತಿ.

ಅನಂತರ ಪರ್ವತೇಶ್ವರನು ಕಮಲಾಪೀಡನೆಂಬವನನ್ನು ಕರೆದು "ನೀನು ಚಾಣಕ್ಯರು ಹೇಳಿದಂತೆ ನಡೆದುಕೊ" ಎಂದು ನೇಮಿಸಿ ಕಳು ಹಿಸಿದನು. ಅವನು ಬಂದು ಚಾಣಕ್ಯನನ್ನು ಕಂಡು ವಂದಿಸಿ, "ಅಪ್ಪಣೆ ಏನು?" ಎಂದು ಕೇಳಿದನು.

ಆಗ ಚಾಣಕ್ಯನು ಎರಡು ಕಾಗದಗಳನ್ನು ಬರೆಯಿಸಿ, ಅವುಗಳಿಗೆ ರಾಜಮುದ್ರೆಯನ್ನು ಮಾಡಿಸಿ ತರಿಸಿ, ಕಮಲಾಪೀಡನ ಕೈಗೆ ಕೊಟ್ಟು, ಕಿವಿಯಲ್ಲಿ ಹೀಗೆ ಹೀಗೆ ಎಂದು ಹೇಳಿ ಕಳುಹಿಸಿದನು.

ಅವನು ಅಲ್ಲಿಂದ ಹೊರಟು ತನ್ನ ಪರಿವಾರದೊಡನೆ ಕೆಲವು ದಿವಸ ಗಳಲ್ಲಿ ಕಾಮರೂಪ ದೇಶಕ್ಕೆ ಬಂದು ಸೇರಿ, ಒಂದು ಕಾಗದವನ್ನು

ಇಸ್ನೊಬ್ಬನಲ್ಲಿ ಕೊಟ್ಟು, ಅವನಿಗೂ ಬೇಕಾದಂತೆ ಹೇಳಿಕೊಟ್ಟು, ತಾನು ಆ ದೇಶದ ಮುಖ್ಯ ಪಟ್ಟಣವಾದ ಪ್ರಾಗ್‌ಜ್ಯೋತಿಷಪುರದ ಹೊರಗಣ ನಂದನವನದಲ್ಲಿ ಇಳಿದುಕೊಂಡನು. ಇನ್ನೊಬ್ಬನು ಅಲ್ಲಲ್ಲಿ ಹುಡುಕು ತ್ತಲೂ ಕಂಡಕಂಡವರನ್ನು ಕೇಳುತ್ತಲೂ ಹೋಗಿ, ಅಲ್ಲಿನ ಬೇಹಿನವರ ಚಾವಡಿಗೆ ಬಂದು, ಅಲ್ಲಿಯೂ "ಅಯ್ಯಾ! ಪರ್ವತರಾಜ್ಯದ ರಾಯಭಾರಿ ಯೊಬ್ಬನು ಇಲ್ಲಿಗೆ ಬಂದಿದ್ದಾನೆ; ಅವನು ಎಲ್ಲಿ ಇಳಿದುಕೊಂಡಿದ್ದಾನೆ? ಅಗತ್ಯವಾದ ರಾಜಕಾರ್ಯವಿತ್ತು; ಗೊತ್ತಿದ್ದರೆ ದಯೆಮಾಡಿ ಹೇಳಿರಿ" ಎಂದು ಕೇಳಿದನು. ಆಗ ಅವರು ಇವನನ್ನು ನೋಡಿ—"ಇವನು ಪರ ದೇಶದವನು, ರಾಜಕಾರ್ಯಕ್ಕಾಗಿ ಬಂದಿರುವನು, ಏನಾದರೂ ಕಪಟ ವಿದ್ದರೂ ಇರಬಹುದು" ಎಂದು ಅವನ ಅಂಗಪರೀಕ್ಷೆಯನ್ನು ಮಾಡಿ, ಅವನಲ್ಲಿ ಸಿಕ್ಕಿದ ಒಂದು ಲಿಪಾಪೆಯನ್ನು ತೆಗೆದುಕೊಂಡು, ಅವನನ್ನು ಹಿಡಿದುಕೊಂಡು, ರಾಜಸನ್ನಿಧಿಗೆ ಕರೆದುಕೊಂಡು ಹೋಗಿ, ಲಿಪಾಪೆ ಯನ್ನು ಒಪ್ಪಿಸಿ—

"ಬುದ್ಧೀ! ಪರ್ವತರಾಜ್ಯದ ನಿಯೋಗಿಯೊಬ್ಬನು ಬಂದು ನಮ್ಮ ಪಟ್ಟಣದಲ್ಲಿ ಇಳಿದಿರುವನಂತೆ. ಅವನನ್ನು ಹುಡುಕುತ್ತ ಬಂದ ಈ ದೂತನ ಕೈಯಲ್ಲಿ ಸಿಕ್ಕಿದ ಲಕೋಟೆ ಇದು" ಎಂದು ಅರಿಕೆ ಮಾಡಿದರು. ರಾಯನು ಲಿಪಾಪೆಯಲ್ಲಿರುವ ವಿಳಾಸವನ್ನೂ ಮುದ್ರೆಯನ್ನೂ ನೋಡಿ ಅದನ್ನು ತನ್ನ ಬಳಿಯಲ್ಲಿಟ್ಟುಕೊಂಡು, ಕಾಗದವನ್ನು ತಂದ ದೂತನನ್ನು ಕಾವಲಿನಲ್ಲಿಟ್ಟು, "ಆ ಪರ್ವತರಾಜ್ಯದ ರಾಯಭಾರಿ ನಮ್ಮನ್ನು ಬಂದು ಕಾಣಿಸಿಕೊಂಡ ಮೇಲೆ ಇವನನ್ನು ಬಿಟ್ಟುಬಿಡಿರಿ" ಎಂದು ಸೇವಕರಿಗೆ ನೇಮಿಸಿ, "ಆ ಬಂದವನು ಎಲ್ಲಿದ್ದರೂ ಹುಡುಕಿ ಕರೆದುಕೊಂಡು ಬನ್ನಿರಿ" ಎಂದು ಬೇಹಿ ನವರನ್ನು ಕಳುಹಿಸಿದನು.

ಅವರು ಪಟ್ಟಣದ ಒಳಗೂ ಹೊರಗೂ ಹುಡುಕಿ, ಕಡೆಗೆ ಉದ್ಯಾನ ವನದಲ್ಲಿದ್ದ ನಿಯೋಗಿಯನ್ನು ಕಂಡು ಕರೆದುಕೊಂಡು ಬಂದು ಆಸ್ಥಾನ ದಲ್ಲಿ ನಿಲ್ಲಿಸಿದರು. ಆಗ ಆ ನಿಯೋಗಿ ರಾಯನಿಗೆ ಕೈಮುಗಿದು, ತಾನು ತಂದ ವಸ್ತುವಾಹನಗಳನ್ನು ಒಪ್ಪಿಸಿ, "ರಾಜಪರಮೇಶ್ವರರಾದ ಪರ್ವ ತೇಶ್ವರರು ತಮಗೊಂದು ಪತ್ರವನ್ನು ಕಳುಹಿಸಿರುವರು," ಎಂದು ತಂದಿದ್ದ ನಿರೂಪವನ್ನು ಒಪ್ಪಿಸಿದನು. ರಾಯನದನ್ನು ಒಡೆದು ನೋಡಿ—

ಸ್ವಸ್ತಿ, ನಮ್ಮ ಪರಮ ಪ್ರಿಯರಾದ ಕಾಮರೂಪದೇಶಾಧಿಪತಿ ಶ್ರೀಮಾನ್ ಸೂರ್ಯವರ್ಮ ರಾಯರಿಗೆ–ಪರ್ವತೇಶ್ವರನು ಮಾಡುವ ವಿಜ್ಞಾಪನೆ. ನಾವೆಲ್ಲರೂ ಶ್ರೀದೇವರ ಅನುಗ್ರಹದಿಂದ ಕ್ಷೇಮಿಗಳಾಗಿರುತ್ತೇವೆ; ತಮ್ಮ ಕ್ಷೇಮವನ್ನು ಕೇಳಲು ಕುತೂಹಲವುಳ್ಳವರಾಗಿರುತ್ತೇವೆ. ಸಾಂಪ್ರತ–ತಮ್ಮ ಸೀಮಂತ ಪುತ್ರಿಯಿಂದ ನಮ್ಮ ಸೀಮಂತ ಪುತ್ರನಾದ ಮಲಯಕೇತುವಿಗೆ ಗೃಹಸ್ಥಾಶ್ರಮವನ್ನು ಕೊಡಬೇಕೆಂಬ ಅಪೇಕ್ಷೆಯಿಂದ ನಾವು ನಿಮ್ಮಲ್ಲಿ ಬಂಧುತ್ವವನ್ನು ಬಯಸಿ, ಈ ನಿಯೋಗಿಯನ್ನು ತಮ್ಮ ಬಳಿಗೆ ಕಳುಹಿಸಿದ್ದೇವೆ. ಇದಕ್ಕೆ ಸಮ್ಮತಿ ಇದ್ದರೆ ತಮ್ಮ ಮಗಳ ಜಾತಕವನ್ನು ಕೊಟ್ಟು ಬಂದಿರುವ ನಿಯೋಗಿಯೊಡನೆ ನಿಮ್ಮ ಪುರೋಹಿತನನ್ನು ಕಳುಹಿಸಬೇಕು. ಇದುವರೆಗೆ ನಾವು ಸ್ನೇಹಿತರಾಗಿದ್ದುದಕ್ಕೆ ಈ ಶರೀರ ಸಂಬಂಧವೂ ಆಗಿಹೋದರೆ, ಆ ಮೇಲೆ ನಾವೇ ನೀವು, ನೀವೇ ನಾವು; ಮತ್ತೆ ಕೇಳುವುದೇನು?

ಇಂತೀ ತಮ್ಮ ನಿರಂತರ ಕ್ಷೇಮಾಭಿಲಾಷಿ,

ಪರ್ವತೇಶ್ವರ.

ಒಕ್ಕಣೆಗೆ ಸಂತೋಷಪಟ್ಟು ಸಭಿಕರ ಮುಖವನ್ನು ನೋಡಿ— "ಯೋಗ್ಯವಾದ ಸಂಬಂಧವಯ್ಯಾ!" ಎಂದು ಹೇಳಿ, ನಿಯೋಗಿಯನ್ನು ತಕ್ಕ ಮಾನಮರ್ಯಾದೆಗಳಿಂದ ಸತ್ಕರಿಸಿ, ಅವರೊಡನೆ—"ರಾಯಭಾರಿಗಳೇ! ನೀವು ಒಂದು ಕಾಲವಿಳಂಬವಾಯಿತೆಂದೋ, ಏನೋ? ನಿಮ್ಮ ಅರಸರು ನಿಮಗೊಂದು ನಿರೂಪವನ್ನು ಕಳುಹಿಸಿರುವರು, ನೋಡಿರಿ" ಎಂದು ತನ್ನಲ್ಲಿದ್ದ ಲಿಪಾಪೆಯನ್ನು ಕೊಟ್ಟನು.

ಕಮಲಾಪೀಡನು ನಮಸ್ಕರಿಸಿ, ಅದನ್ನು ತೆಗೆದುಕೊಂಡು ಒಡೆದು ನೋಡಿ, ಬಹಳ ಬೇಸರುಗೊಂಡವನಾಗಿ ತಲೆತಗ್ಗಿಸಿ, ಒಳಗಿರುವ ವ್ಯಾಕುಲತೆಯನ್ನು ಹೊರಗೆ ತೋರಿಸಿಕೊಂಡು ನಿಂದಿರುವ ಭಾವವನ್ನು ನೋಡಿ ರಾಯನು—"ಏನಯ್ಯಾ! ಕಾಗದವನ್ನು ನೋಡಿ ಹೀಗೆ ವ್ಯಾಕುಲಪಡುತ್ತೀರಿ? ಏನು ವಿಶೇಷವು?" ಎಂದು ಕೇಳಿದನು. ಅದಕ್ಕವನು— "ಮತ್ತೇನೂ ಇಲ್ಲ" ಎಂದು ಅಷ್ಟಕ್ಕೆಯೆ ಸುಮ್ಮನಾಗಿ ಲಜ್ಜೆಯಿಂದ ನಿಂತುಕೊಂಡನು. ಆಗ ಅರಸನು ಮಂತ್ರಿಯನ್ನು ನೋಡಿ—"ಈ ಕಾಗದದ ಅಭಿಪ್ರಾಯವನ್ನು ಹೇಳುವುದಕ್ಕೆ ಇವರು ಲಜ್ಜಿಸುತ್ತಾರೆ: ನೀನು ನೋಡಿ ಹೇಳು" ಎಂದನು.

ಮಂತ್ರಿ ಅದನ್ನು ತೆಗೆದುಕೊಂಡು ರಹಸ್ಯದಲ್ಲಿ—"ಶ್ರೀಮಾನ್ ಪರ್ವತೇಶ್ವರನು ಕಾಮರೂಪಕ್ಕೆ ಹೋಗಿರುವ ನಿಯೋಗಿಯಾದ ಕಮಲಾಪೀಡನಿಗೆ ಕೊಟ್ಟ

ನಿರೂಪವು. ನೀನು ಹೋದ ಕಾರ್ಯದಲ್ಲಿ ನಿನಗೆ ಅಲ್ಲಿನ ರಾಜರ ದರ್ಶನವಾಯಿತೋ? ಇಲ್ಲವೋ? ಗೊತ್ತಿಲ್ಲ. ಆದರೆ ಮತ್ತೊಂದು ವಿಷಯವು ಈಗ ತಿಳಿದು ಬಂದಿದೆ; ಈಚೆಗೆ ಒಮ್ಮೆ ಲಂಪಾಕರಾಜನ ಸಭೆಯಲ್ಲಿ ಪರರಾಯರ ವಿಷಯವಾಗಿ ಮಾತುಕಥೆಗಳು ಬರುವಾಗ ಆ ಲಂಪಾಕರಾಯನು ತನ್ನ ಮಂತ್ರಿಯೊಡನೆ—"ಕಾಮರೂಪಾಧಿಪನ ಕುಲದಲ್ಲಿ ಈಗೀಗ ಮಿಶ್ರದೋಷವು ಉಂಟಾಗಿದೆ; ಆದುದರಿಂದಲೇ ಅವರ ಕಾರ್ಯದಲ್ಲಿಯೂ ನ್ಯೂನತೆಗಳು ಕಂಡುಬರುತ್ತಿವೆ" ಎಂದು ಹೇಳಿದ ಮಾತುಗಳನ್ನು ಕೇಳಿ, ಅಲ್ಲಿರುವ ನಮ್ಮ ಆಪ್ತರು ಪತ್ರಮುಖೇನ ನಮಗೆ ಹೀಗೆ ತಿಳಿಸಿರುತ್ತಾರೆ:—'ನೀವು ಕಾಮರೂಪಾಧಿಪತಿಯ ಸಂಬಂಧವನ್ನು ಮಾಡುವ ಆಲೋಚನೆಯಲ್ಲಿದ್ದೀರಿ. ಆದುದರಿಂದ ವಿಚಾರಿಸಿಕೊಂಡು ಮಾಡಿರಿ" ಎಂದು. ಆದರೂ ನಾವು ಭೂಮಿದೇವಿಯ ಮೊಮ್ಮಗನಾದ ಭಗದತ್ತನ ವಂಶೋತ್ಪನ್ನರಾದ ಕಾಮರೂಪಾಧಿಪತಿಗಳ ಕುಲದಲ್ಲಿ ಅಂತಹ ಅಕೃತ್ಯವು ಎಂದಿಗೂ ನಡೆಯಲಿಕ್ಕಿಲ್ಲ. ಇದು ಲಂಪಾಕ ರಾಜನ ಮಾತ್ಸರ್ಯದ ಮಾತಾಗಿರಬೇಕೆಂದು ನಿಶ್ಚಯಿಸಿದ್ದೇವೆ. ಆದರೂ ಶರೀರ ಸಂಬಂಧವಲ್ಲವೆ? ಇಂದು ಮಾಡಿ ನಾಳೆಗೆ ಬಿಡುವುದಲ್ಲವಷ್ಟೆ? ಆದುದರಿಂದ ಅವರ ಕುಲಶೀಲಗಳನ್ನು ಚೆನ್ನಾಗಿ ತಿಳಿದುಕೊಂಡು, ನಿನ್ನ ಮನಸ್ಸಿಗೆ ಒಡಂಬಡಿಕೆಯಾದರೆ ಮಾತುಕೊಡು.

ಇತಿ ಪರ್ವತೇಶ್ವರ.

ಎಂದು ಓದಿ ತಿಳಿಸಿದನು.

ಇದನ್ನು ಕೇಳಿದೊಡನೆಯೆ ಕಾಮರೂಪಾಧಿಪನು ಕಲ್ಲೆಸೆದು ಕೆಣಕಿದ ಹೆಬ್ಬುಲಿಯಂತೆ ಬುಸುಬುಸುಗುಟ್ಟಿ, ಹಲ್ಲುಮೊರೆದು, ಮಂತ್ರಿಯನ್ನು ನೋಡಿ—

"ಮಂತ್ರಿ! ನಮ್ಮ ಕುಲದಲ್ಲಿ ಕುಂದನ್ನು ಹೇಳಬೇಕಾದರೆ ಆ ಲಂಪಾಕದವನೆಷ್ಟರವನು? ಅವನ ತಲೆಯನ್ನು ಮಣ್ಣಿಗೆ ಕೂಡಿಸದೆ ಈ ಕಿರೀಟವನ್ನು ಧರಿಸಿದೆನಾದರೆ, ನಾನು ಲೋಕನಾಯಕನಾದ ಆ ನರಕಾಸುರನ ವಂಶದಲ್ಲಿ ಹುಟ್ಟಬಹುದೆ? ಎಲ್ಲಿ ಸೇನಾಧಿಪತಿಗಳು? ಸಾಮಂತ ರಾಜರು? ಸೈನ್ಯವು ಸನ್ನಾಹವಾಗಲಿ; ಡಂಗುರ ಸಾರಲಿ; ನಾಳೆಯೆ ತರಂಗಿಣೀನದಿಯ ತೀರದಲ್ಲಿ ಸೇನೆ ಹೋಗಿ ಇಳಿಯಲಿ" ಎಂದು ಅಪ್ಪಣೆ ಕೊಟ್ಟು ಮಂತ್ರಿಯನ್ನು ಕಳುಹಿದನು.

ಬಳಿಕ ಕಮಲಾಪೀಡನನ್ನು ನೋಡಿ—"ಅಯ್ಯಾ! ಪರ್ವತರಾಯರ ಸಂಬಂಧವನ್ನು ಮಾಡುವ ವಿಷಯದಲ್ಲಿ ನಮಗೆ ಮೂಗಿನ ವರೆಗೆ ಮನಸ್ಸಿದೆ; ಆದರ ಎಡೆಯಲ್ಲಿ ಈ ನೀಚನೊಬ್ಬನು ಅವಲಕ್ಷಣವನ್ನು ಜೊಗಳಿಬಿಟ್ಟನು.

ಆದುದರಿಂದ ಮೊದಲು ಅವನಿಗೆ ತಕ್ಕ ಮದ್ದರೆದು, ಆ ಮೇಲೆ ಮುಂದಣ ಶುಭಕಾರ್ಯಕ್ಕೆ ಕೈಹಾಕುವೆವು; ಹೀಗೆ ನಾವು ಹೇಳಿದ್ದೇವೆಂದು ಪರ್ವತೇಶ್ವರನಿಗೆ ವಿಜ್ಞಾಪಿಸಬೇಕು ' ಎಂದು ಪ್ರಕೃತೋಚಿತವಾಗಿ ಒಂದು ಕಾಗದವನ್ನು ಬರೆದು, ಅವನ ಕೈಯಲ್ಲಿ ಕೊಟ್ಟು, ಅಂತಃಪುರಕ್ಕೆ ಹೊರಟು ಹೋದನು.

ಕಮಲಾಪೀಡನು ಕಾಗದವನ್ನು ತೆಗೆದುಕೊಂಡು ಮೊದಲು ತಾನಿಳಿದುಕೊಂಡಿದ್ದ ಸ್ಥಳಕ್ಕೆ ಬಂದನು. ಮಂತ್ರಿಯು ರಾಜನ ಅಪ್ಪಣೆಯಂತೆ ಸೇನಾಪತಿಗಳಿಗೂ ಸಾಮಂತರಾಜರಿಗೂ ನೇಮಿಸಿ, ಯುದ್ಧ ಸಿದ್ಧತೆಗಳನ್ನು ಮಾಡುತಿದ್ದನು. ಕಮಲಾಪೀಡನು ಮೂರುನಾಲ್ಕು ದಿನ ಅಲ್ಲಿಯೇ ಇದ್ದುಕೊಂಡು, ಆ ರಾಯನು ಯುದ್ಧಕ್ಕೆ ಹೊರಟು ಹೋದುದನ್ನು ನೋಡಿ, ಅಲ್ಲಿಂದ ಹೊರಟು ಬಂದು, ಗುಟ್ಟಾಗಿ ತಾನು ಹೋದ ಮತ್ತು ಆದ ಕಾರ್ಯಭಾಗಗಳನ್ನು ಪರ್ವತೇಶ್ವರನಿಗೆ ಅರಿಕೆಮಾಡಿ ತಂದಿದ್ದ ಲೇಖನವನ್ನು ಒಪ್ಪಿಸಿದನು.

ಅರಸನು ಅದನ್ನು ನೋಡಿ ಆಶ್ಚರ್ಯಪಟ್ಟು, ತಲೆದೂಗಿ, ಮಂತ್ರಿಯನ್ನು ಕರೆದು—"ಇದೇನಯ್ಯ, ಈ ಬ್ರಾಹ್ಮಣನ ಬುದ್ಧಿಚಾತುರ್ಯವು! ಅಬ್ಬಾ! ಬುದ್ಧಿಯ ಬಲವೇ ಬಲವು. ನಾವು ಚಂದ್ರಗುಪ್ತನಿಗೆ ಉಪಕಾರವನ್ನು ಮಾಡಬೇಕೆಂಬುದು ಹೋಗಿ ಈಗ ಪ್ರತ್ಯುಪಕಾರವನ್ನು ಮಾಡಬೇಕೆಂದಾಯಿತು; ಮುಂದೇನು?" ಎಂದು ಕೇಳಿದನು.

ಆದಕ್ಕೆ ಮಂತ್ರಿ—"ಜೀಯಾ! ನಮ್ಮ ಸೇನೆಯನ್ನು ಮಾತ್ರ ಕಳುಹಿಸಿದರೂ ಆ ಚಾಣಕ್ಯರ ಮಹಿಮೆಯಿಂದ ಚಂದ್ರಗುಪ್ತನ ಕಾರ್ಯವಾಗುತ್ತದೆ ಎಂಬುದಕ್ಕೆ ಸಂಶಯವೇ ಬೇಡ. ಆದರೂ ತಾವೆ ಸೈನ್ಯಸಮೇತರಾಗಿ ಹೋದರೆ ಇನ್ನಷ್ಟು ಒಳ್ಳೆಯದು. ಇದರಲ್ಲಿ ಗುಟ್ಟಿದೆ," ಎಂದು ಅರಸನ ಮೋರೆಯನ್ನು ನೋಡಿ ನಕ್ಕನು. ಅರಸನೂ ನಕ್ಕು ತಲೆಯನ್ನಾಡಿಸಿದನು.

---

## ೮. ಒಡಂಬಡಿಕೆ.

ಮರುದಿನ ಎಂದಿನಂತೆ ಪರ್ವತೇಶ್ವರನು ಒಡ್ಡೋಲಗಗೊಟ್ಟು, ಚಾಣಕ್ಯನನ್ನು ಕರೆಯಿಸಿ, ಉಚಿತವಾದ ಮರ್ಯಾದೆಗಳಿಂದ ಸತ್ಕರಿಸಿ, ಕುಳ್ಳಿರಿಸಿಕೊಂಡು, ಹೀಗೆಂದನು!—

"ಸ್ವಾಮಿಾ! ಈ ನಿಮ್ಮ ಉಪಾಯದ ಬಲದಿಂದ ನಾವು ಮಾಡ ಬೇಕಾಗಿದ್ದ ಪ್ರಯತ್ನಸಾಧ್ಯವಾಗಿದ್ದ ಕಾರ್ಯವು ಹೊರಗಿನಿಂದ ಹೊರ ಗೆಯೆ ಆಗಿಹೋಯಿತು. ನಿಮ್ಮಂತಹವರು ಒಂದು ಕಾರ್ಯಕ್ಕೆ ಕೈ ಹಾಕಿದ ಮೇಲೆ ಮತ್ತದು ಸುಮ್ಮನೆಯಾಗುವುದುಂಟೆ? ಈ ಸಂತೋಷದ ಸುದ್ದಿಯನ್ನು ಹೇಳಲಿಕ್ಕೆಂದೆ ತಮ್ಮನ್ನು ಕರೆಯಿಸಿದೆನು. ಇನ್ನು ನಿಮ್ಮ ಕೆಲಸದ ವಿಷಯವಾಗಿ ಆಲೋಚಿಸಬೇಕಾಗಿದೆ; ಈಗ ತಮಗೆ ಆಹ್ನಿಕದ ಸಮಯವಾಗಿ ಹೋಯಿತು. ತಾವು ಬಿಡಾರಕ್ಕೆ ದಯಮಾಡಿಸಬಹುದು. ನಾವೆಲ್ಲರೂ ಇದ್ದೇವೆಯಷ್ಟೆ? ನೋಡುವ; ನೀವೂ ಇನ್ನಷ್ಟು ಆಲೋಚಿ ಸಿರಿ. ಹಾಗಾದರೆ ಈಗ ಅಪ್ಪಣೆಗೊಡುತ್ತೀರೇನು?" ಎಂದು ಕೈಮುಗಿದು ಅವನನ್ನು ಬಿಡಾರಕ್ಕೆ ಕಳುಹಿಸಿ, ಎದ್ದು ಒಳಗೆ ಹೋದನು.

ಸಂಧ್ಯಾಕಾಲದಲ್ಲಿ ಪರ್ವತರಾಯನು ಮಗನಾದ ಮಲಯಕೇತು ವನ್ನು ಕರೆದು, "ನೋಡು! ನಮ್ಮ ಸಹಾಯದಿಂದ ನಂದರನ್ನು ಬಗ್ಗು ಬಡಿದು ರಾಜ್ಯವನ್ನು ಸಾಧಿಸಿಕೊಳ್ಳಬೇಕೆಂದು ಚಂದ್ರಗುಪ್ತನು ಚಾಣಕ್ಯ ರೊಡನೆ ಇಲ್ಲಿಗೆ ಬಂದಿದ್ದಾನೆ. ನಮ್ಮ ಸಹಾಯವಿಲ್ಲದೆ ಅವರಿಗೀಗ ನಿವೃತ್ತಿ ಇಲ್ಲ; ಮತ್ತೆ 'ಮುಮ್ಮುಮ್ಮು' ಎಂದು ಹೇಳುವುದಕ್ಕಿಂತ ಈಗಲೆ ನಿಶ್ಚಯಿಸಿ ಕೊಳ್ಳುವುದು ಒಳ್ಳೆಯದು. ನನಗೆ ಬಾಯಿಬಿಟ್ಟು ಹೇಳಲಿಕ್ಕಾಗುವುದಿಲ್ಲ. ಆದಕಾರಣ ನೀನೀಗಲೆ ಹೋಗಿ, ನಮ್ಮಿಂದ ಅವರ ಕಾರ್ಯವು ನೆರವೇರಿ ದರೆ, ಆ ವಿಷಯದಲ್ಲಿ ಅವರ ಮುಂದಣ ಆಲೋಚನೆ ಏನು ಎಂದು ತಿಳಿದು ಕೊಂಡು ಬಾ," ಎಂದು ಕಳುಹಿಸಿದನು.

ತಂದೆಯ ಮಾತನ್ನು ತಲೆಯಲ್ಲಿ ಧರಿಸಿ, ಮಲಯಕೇತು ತನ್ನ ಒಡ ನಾಡಿಗಳೊಂದಿಗೆ ಹೊರಟು ಹಿಂದೆ ಮುಂದೆ ದೀವಟಿಗೆಗಳನ್ನು ಹಿಡಿಸಿ ಕೊಂಡು ಚಾಣಕ್ಯನಿರುವ ಬಿಡಾರದ ಬಳಿಗೆ ಬರುತಿದ್ದನು. ರಾಜ ಕುಮಾರನು ಬರುವುದನ್ನು ದೂರದಿಂದಲೆ ಕಂಡು ಚಂದ್ರಗುಪ್ತನು ಎದ್ದು ಬಂದು, ಎದುರುಗೊಂಡು, ಸಮ್ಮಾನದೊಡನೆ ಕರೆದುಕೊಂಡು ಹೋಗಿ ಕುಳ್ಳಿರಿಸಿಕೊಂಡು ಯೋಗಕ್ಷೇಮಗಳನ್ನು ವಿಚಾರಿಸುತಿದ್ದನು.

ಆಗ ಚಾಣಕ್ಯನು ಬಂದು ಮಲಯಕೇತುವಿನ ಬೆನ್ನುತಟ್ಟಿ, "ಏನಯ್ಯಾ! ರಾಜಕುಮಾರನೆ? ಹೊಸ ಜವ್ವನದ ಮೋಹರವು? ಒಂದು

ಕೈನೋಡಿ ಬಿಡಬೇಕಲ್ಲವೆ? ಬೇಕಯ್ಯಾ! ಹಾಗೆ ಬೇಕು; ನಿಮ್ಮ ಹಾಗಿರುವ ಯೌವನಸ್ಥರೆಲ್ಲ ಯುದ್ಧ ಮಾಡದೆ ಮತ್ತೆ ಯಾರು? ನಿಮ್ಮ ಹಾಗಿರುವ ಮುದುಕರಿಂದೆಲ್ಲಾ ಏನಾದೀತು?" ಎಂದು ಒಂದೆರಡು ವಿನೋದದ ಮಾತುಗಳನ್ನಾಡಿ, ಕಡೆಗೆ—"ಈ ಪರಿಹಾಸವೆಲ್ಲ ಇರಲಿ," ಎಂದು ಅತ್ತಿತ್ತ ನೋಡಿ, "ಎಲ್ಲಿ ಚಂದ್ರಗುಪ್ತ, ಬಾ! ಇಲ್ಲಿ ಕುಳಿತುಕೊ," ಎಂದು ಮೂವರೂ ಕುಳಿತುಕೊಂಡು, ಅನಂತರ ಚಾಣಕ್ಯನು ಚಂದ್ರಗುಪ್ತನೊಡನೆ:-

ಈಗ ಪರ್ವತೇಶ್ವರನಿಂದ ನಿನ್ನ ಕೆಲಸವಾಗಬೇಕಾಗಿದೆ; ಅವರು ರಾಜಾಧಿರಾಜರು; ತಲೆ ಇರುವ ವರೆಗೆ ಸಿಂಬಳವಿದೆ ಎಂಬಂತೆ ರಾಜರಿಗೆ ರಾಜಕಾರ್ಯವು ಮುಗಿಯಿತೆಂದು ಎಂದಿಗೂ ಆಗಲಿಕ್ಕಿಲ್ಲ; ಅವರವರ ತಾಪತ್ರಯ ಅವರವರಿಗೆ; ಅದೇನೂ ಇನ್ನೊಬ್ಬರಿಗೆ ತಿಳಿಯಲಿಕ್ಕಿಲ್ಲ: ನಿನಗಾದರೆ ಒಮ್ಮೆ ನಿನ್ನ ಕೈಬಿಟ್ಟು ಹೋದ ರಾಜ್ಯವು ಅದರಲ್ಲಿಯೂ ಸಂಪೂರ್ಣವಾದ ಒಡೆತನವು ನಿನಗೆ ಬರುವುದೆಂದರೆ, ಪ್ರಕೃತಕ್ಕೆ ಧರ್ಮಕ್ಕೆ ಸಿಕ್ಕಿದಂತೆಯೆ ಸರಿ; ಅವರಿಗೀಗ ತಮ್ಮ ಕೆಲಸಗಳನ್ನು ಬಿಟ್ಟು ನಿನಗಾಗಿ ಪ್ರಯತ್ನಿಸಬೇಕು. ಇಂತಹ ವಿಷಯಗಳಲ್ಲಿ ಪ್ರತಿಫಲವಿಲ್ಲದೆ ಯಾರೂ ಮುಂದೆ ಬರಲಿಕ್ಕಿಲ್ಲ; ಬರಬೇಕೆಂದು ಹೇಳುವುದಾದರೂ ಅಷ್ಟು ಸರಿ ಎಂದು ನನ್ನ ಮನಸ್ಸಿಗೂ ಕಾಣುವುದಿಲ್ಲ: ಆದುದರಿಂದ ಈ ವಿಷಯದಲ್ಲಿ ನಿನ್ನ ಆಲೋಚನೆ ಏನು?

ಚಂದ್ರ—ಸ್ವಾಮಿ! ತಾವು ಹೇಳಿದುದಕ್ಕೆ ಎಳ್ಳಿನೇಳಷ್ಟಾದರೂ ನನ್ನ ಆಕ್ಷೇಪವಿಲ್ಲ! ಅಪ್ಪಣೆ ಹೇಗಾಯಿತೊ ಹಾಗೆ.

ಚಾಣ—ಹಾಗಾದರೆ ಕೇಳು; ನಿನ್ನ ಕೆಲಸವಾದ ಕೂಡಲೆ ಅರ್ಧ ರಾಜ್ಯವನ್ನು ಪರ್ವತೇಶ್ವರನಿಗೆ ಕೊಡಬೇಕು. ಇಂತಹ ಕಾರ್ಯಗಳಲ್ಲೆಲ್ಲ ಬಾಯಿದೆರೆ ಮಾತಿಗೆ ಬೆಲೆಯಿಲ್ಲ; ಬರಹಮೂಲಕವೆ ಆಗಬೇಕು. ಯಾಕೆಂದರೆ ಅದು ರಾಜ್ಯವು! ಕೈಗೆ ಬಂದ ಮೇಲೆ 'ಕೊಡಬೇಕಲ್ಲಾ! ಎಂದು ತೋರೀತು; ಎಲ್ಲಿ ಮಸಿ ಕಾಗದಗಳು? ಬರಲಿ, ಈಗಲೆ ಬರೆದು ಕೊಡಬೇಕು, ಎಷ್ಟಾದರೂ ಮನುಷ್ಯಾವಸ್ಥೆ".

ಚಂದ್ರಗುಪ್ತನು ಬರವಣಿಗೆಯ ಉಪಕರಣಗಳನ್ನು ಸಿದ್ಧಪಡಿಸಿಕೊಂಡು ಬಳಿಯಲ್ಲಿ ಕುಳಿತು, "ಅಪ್ಪಣೆಯಾಗಲಿ" ಎಂದನು.

ಚಾಣ—“ಶ್ರೀಮಾನ್ ಪರ್ವತೇಶ್ವರರಿಗೆ – ಕುಸುಮಪುರದ ಮೌರ್ಯಪುತ್ರನಾದ ಚಂದ್ರಗುಪ್ತನು ಬರೆದುಕೊಟ್ಟ ಒಡಂಬಡಿಕೆಯ ಪತ್ರದ ಕ್ರಮವೆಂತೆಂದರೆ:—

ನಿಮ್ಮ ಸಹಾಯದಿಂದ ನಂದರಾಜ್ಯವು ನನ್ನ ಕೈವಶವಾದರೆ, ಆಗ ಅದರಲ್ಲಿ ಅರ್ಧವನ್ನು ಏನೊಂದು ಅಡ್ಡಿ ಹೇಳದೆ ನಿಮಗೆ ಬಿಟ್ಟುಕೊಟ್ಟೇನು. ಎಂದು ಈ ಮೂಲಕ ದೃಢಪಡಿಸುತ್ತೇನೆ.

ಇತಿ ಮೌರ್ಯಪುತ್ರ ಚಂದ್ರಗುಪ್ತ.

ಎಂದು ಬರೆಯಿಸಿ, “ಕೊಡು” ಎಂದು ಹೇಳಲು, ಚಂದ್ರಗುಪ್ತನು ಎದ್ದು ಮಲಯಕೇತುವಿನ ಕೈಯಲ್ಲಿ ಕಾಗದವನ್ನು ಕೊಟ್ಟು ಕುಳಿತುಕೊಂಡನು.

ಚಾಣ—ರಾಜಕುಮಾರನೆ! ಕೆಲಸವೆಂದರೆ, ಕಡಲೆ ತಿಂದು ಕೈ ತೊಳೆದಂತೆ ಇರಬೇಕು. ಮತ್ತೆ ಚಕಾರ ಶಬ್ದವನ್ನಾದರೂ ಎತ್ತಬಾರದು; ಈಗ ನೀನು ಹೋಗಿ ಈ ಕೈಕಾಗದವನ್ನು ನಿನ್ನ ತೀರ್ಥರೂಪರವರ ಸನ್ನಿಧಿಯಲ್ಲಿ ಒಪ್ಪಿಸಿ, ಮುಂದಣ ಸಿದ್ಧತೆಗೆ ಆದಷ್ಟು ಜಾಗ್ರತೆ ಮಾಡಬೇಕೆಂದು ನಾವು ಹೇಳಿದ್ದೇವೆಂದು ಹೇಳು.

ಮಲಯಕೇತು ಪತ್ರವನ್ನು ತೆಗೆದುಕೊಂಡು ಮಹಾ ಸಂತೋಷದಿಂದ ಚಾಣಕ್ಯನಿಗೆ ಕೈಮುಗಿದು, ಹೊರಟು ಬಂದು, ತಂದೆಯನ್ನು ಕಂಡು ಅಭಿವಂದಿಸಿ—“ಅಪ್ಪಾ! ಈ ಲೋಕದಲ್ಲಿ ಬುದ್ಧಿವಂತರಾದವರು ಮೋರೆ ನೋಡಿದೊಡನೆಯೆ ಒಳಗಣ ಗುಟ್ಟನ್ನು ತಿಳಿದು ಬಿಡುತ್ತಾರೆ. ನಾನು ಕೇಳಲೂ ಇಲ್ಲ, ಏನೂ ಇಲ್ಲ, ಅವರಾಗಿಯೆ ಒಂದೆರಡು ಮಾತುಗಳನ್ನಾಡಿ, ಕಡೆಗೆ ಚಂದ್ರಗುಪ್ತನಿಂದ ಈ ಕಾಗದವನ್ನು ಬರೆಯಿಸಿ ಕೊಟ್ಟರು” ಎಂದು ಎಲ್ಲವನ್ನೂ ವಿವರಿಸಿ ಹೇಳಿ, ತಂದಿದ್ದ ಒಡಂಬಡಿಕೆಯ ಪತ್ರವನ್ನು ಮುಂದಿಟ್ಟನು.

ಅದನ್ನು ಓದಿ ನೋಡಿ ಅರಸನು—“ಹೀಗೆಯೆ ಇನ್ನೊಬ್ಬರ ಗುಟ್ಟನ್ನು ಕಂಡುಹಿಡಿಯುವುದರಲ್ಲಿ ಚಾಣಾಕ್ಷರಾದ ಚಾಣಕ್ಯರು ಹಿಡಿದ ಕೆಲಸವು ಕಡೆಹೊಂದುವುದರಲ್ಲಿ ಏನೇನೂ ಸಂಶಯವಿಲ್ಲ; ಚಂದ್ರಗುಪ್ತನು ಒಳ್ಳೆಯ ಗುಣಶಾಲಿ, ಅವನ ಕೆಲಸಕ್ಕೆ ನಾವೇ ಹೋಗಬೇಕು” ಎಂದು ಸರ್ವಾಧಿಕಾರಿಯೂ ತನ್ನ ತಮ್ಮನೂ ಆದ ವಿರೋಚನನನ್ನು ಕರೆದು—

"ತಮ್ಮಾ! ನಮಗೀಗ ರಾಜ್ಯಕಾರ್ಯದ ಮೇಲೆ ಗೌಡದೇಶಕ್ಕೆ ದಂಡೆತ್ತಿ ಹೋಗಬೇಕಾಗಿದೆ: ಆದುದರಿಂದ ಸೇನೆಗಳೆಲ್ಲ ಸಿದ್ಧವಾಗಲಿ" ಎಂದು ಹೇಳಿ, ನಡುವಿರುಳು ಕಳೆಯಿತೆಂದು ಅಂತಃಪುರಕ್ಕೆ ನಡೆದನು. ಎಲ್ಲರೂ ಅವರವರ ಸ್ಥಳಗಳಿಗೆ ಸೇರಿಕೊಂಡರು.

## ೮. ಯುದ್ಧ ಪ್ರಯಾಣ.

ಮರುದಿನ ಅರುಣೋದಯಕ್ಕೆ ಮೊದಲೆ ಪರ್ವತೇಶ್ವರನು ಎದ್ದು ತನ್ನ ನಿತ್ಯವಿಧಿಗಳನ್ನು ತೀರಿಸಿ, ಆಲೋಚನೆಯ ಕೋಣೆಗೆ ಬಂದು, ಮಂತ್ರಿಯಾದ ಶಬರವರ್ಮನನ್ನೂ ಸರ್ವಾಧಿಕಾರಿಯಾದ ವಿರೋಚನನನ್ನೂ ಕರೆಯಿಸಿ ಕುಳ್ಳಿರಿಸಿಕೊಂಡು, ಮುಂದಣ ಯುದ್ಧದ ಸಿದ್ಧತೆಗಳನ್ನು ಕಲ್ಪಿಸಿದರು.

ಸಾಮಂತರಾಜನಾದ ಮಗಧಪತಿ ಮಾಗಧನು ವ್ಯೂಹವನ್ನು ರಚಿಸಿಕೊಂಡು ಮುಂದುಗಡೆಯಲ್ಲಿ ನಡೆಯಬೇಕು, ಗಾಂಧಾರ, ಶಕ, ಚೀನ, ಹೂಣ ದೇಶಾಧಿಪತಿಗಳು ಸಸೈನ್ಯರಾಗಿ ಚಂದ್ರಗುಪ್ತನ ಅಂಗರಕ್ಷೆಗಿರಬೇಕು, ಕುಬೂತಪತಿ ಚಿತ್ರವರ್ಮನೂ, ಮಲಯಪತಿ ಸಿಂಹನಾದನೂ, ಮಲಯಕೇತುವಿನ ಎಡಬಲಗಳಲ್ಲಿ ಸಪರಿವಾರರಾಗಿ ಬರಬೇಕು, ಕಾಶ್ಮೀರಪತಿ ಪುಷ್ಕರಾಕ್ಷನು ಅವನ ಮುಂಭಾಗದಲ್ಲಿಯೂ, ಸಿಂಧುಪತಿ ಸಿಂದುಸೇನನು ಹಿಂಭಾಗದಲ್ಲಿಯೂ ನಡೆಯುತ್ತಿರಬೇಕು; ಪಾರಸೀಕಪತಿಯಾದ ಮೇಘನಾದನು ಶತ್ರುಗಳ ಗಡಿಗಳಲ್ಲಿರುವ ಕೋಟೆಕೊತ್ತಳಗಳನ್ನು ಕೈವಶಮಾಡಿಕೊಳ್ಳುತ್ತಲೂ, ಸೈನ್ಯಕ್ಕೆ ಬೇಕಾದ ಸಾಮಾನುಗಳನ್ನು ಒದಗಿಸಿಕೊಡುತ್ತಲೂ ಇರಬೇಕು; ನಮ್ಮ ಸೋದರಮಾವ ಅಂಗಾರವರ್ಮರು ಅರ್ಧಸೈನ್ಯವನ್ನು ನಿಲ್ಲಿಸಿಕೊಂಡು ಪುರರಕ್ಷಣೆಯನ್ನು ಮಾಡುತ್ತಿರಬೇಕು; ನೀವಿಬ್ಬರು ನನ್ನ ಸಂಗಡವೆ ಇರಬೇಕು. ಈಗ ಈಶಾನ್ಯದಿಕ್ಕಿನಲ್ಲಿರುವ ನಮ್ಮ ಧ್ವಜವು ಅಘನಾಶಿನೀತೀರದಲ್ಲಿ ಹೋಗಿ ನಿಲ್ಲಲಿ" ಎಂದು ನಿಶ್ಚಯಿಸಿದರು. ಕೂಡಲೆ ಎಲ್ಲವೂ ಸಿದ್ಧವಾಗಿ ರಣಭೇರಿ ಮೊಳಗಿತು; ದಿಕ್ತಟವೆಲ್ಲ ಅಲ್ಲೋಲಕಲ್ಲೋಲವಾಯಿತು. ಪಟ್ಟಣಿಗರೆಲ್ಲ ಈ ಕ್ಷಣ ಕುತೂಹಲದಿಂದಿದ್ದರು. ಅದನ್ನು ಕೇಳಿ ನಗುತ್ತ ಚಾಣಕ್ಯನು ಚಂದ್ರಗುಪ್ತನ ಮೋರೆಯನ್ನು ನೋಡಿ—"ಬೆಲ್ಲಹಾಕಿದಷ್ಟು ಸಿಹಿಯಾಗುತ್ತದೆ"

ಎಂದನು. ಅದಕ್ಕೆ ಚಂದ್ರಗುಪ್ತನು—"ಬೆಲ್ಲವನ್ನು ತೋರಿಸಿದ ಮಾತ್ರಕ್ಕೆ ಸಿಹಿಯಾಗುವುದೆ?" ಎಂದು ಕೇಳಿದನು.

ಇವರು ಹೀಗೆ ಮಾತನಾಡಿಕೊಂಡು ಬಳಿಕ ತಮ್ಮ ತಮ್ಮ ನಿತ್ಯದ ವಿಧಿಗಳನ್ನು ತೀರಿಸಿಕೊಂಡು, ಅಲಂಕೃತರಾಗಿ ಮುಂದಣ ಸಮಯವನ್ನು ನಿರೀಕ್ಷಿಸುತಿದ್ದರು. ಅಷ್ಟರೊಳಗೆ ರಾಜದೂತರು ಬಂದು ಕೈಮುಗಿದು "ರಾಯರ ಅಪ್ಪಣೆಯಾಗಿದೆ, ದಯಮಾಡಿಸಬೇಕಂತೆ" ಎಂದು ಅರಿಕೆ ಮಾಡಿಕೊಂಡರು. ಒಡನೆಯೆ ಚಂದ್ರಗುಪ್ತ ಚಾಣಕ್ಯರು ಹೊರಟು ಆಸ್ಥಾನಕ್ಕೆ ಬಂದು, ರಾಯನನ್ನು ಕಾಣಿಸಿಕೊಂಡು, ಸನ್ಮಾನಿತರಾಗಿ, ಉಚಿತಾಸನಗಳಲ್ಲಿ ಕುಳಿತುಕೊಂಡರು. ಅನಂತರ ಶುಭಮುಹೂರ್ತವು ಸನ್ನಿಹಿತವಾಗಲು, ಪರ್ವತೇಶ್ವರ ಚಾಣಕ್ಯರು ಅಂದಳಗಳಲ್ಲಿಯೂ, ಮಲಯಕೇತು ಚಂದ್ರಗುಪ್ತರು ಆನೆಗಳ ಮೇಲೂ, ಮುಕ್ಯ ಸಾಮಂತ ರಾಜರೂ ಸೇನಾನಾಯಕರೂ ತಮ್ಮ ತಮ್ಮ ವಾಹನಗಳನ್ನೇರಿಯೂ, ಉಳಿದವರು ಕಾಲುನಡೆಯಿಂದಲೂ ಹೊರಡಲು, ಸೇನಾಪದ ಸಂಘಾತಕ್ಕೆ ಭೂಮಿ ಕುಸಿಯುತ್ತಿರಲು, ಧ್ವಜ ಪಂಜ್ತಿಗಳ ಏರಿಕೆಗೆ ಸೂರ್ಯಚಂದ್ರರು ಮಿಣಿಮಿಣಿಗುಟ್ಟುತ್ತಿರಲು, ರಣದುಂದುಭಿಯ ಪ್ರಚಂಡ ನಿನಾದಕ್ಕೆ ದಿಗ್ಭಿತ್ತಿಗಳು ಬಿರಿಯುತ್ತಿರಲು, ಮಹಾಕೋಲಾಹಲದಿಂದ ಬಂದು, ಅಘನಾಶಿನೀತೀರದಲ್ಲಿರುವ ವನಪ್ರದೇಶದಲ್ಲಿಳಿದು, ಅಲ್ಲಿ ಗುಡಿಗುಡಾರ ಬೀಡಾರಗಳನ್ನು ರಚಿಸಿ, ಅವುಗಳೊಳಗೆ ವಿಶ್ರಮಿಸಿಕೊಂಡರು.

## ೧೦. ರಾಜ್ಯಕ್ರಾಂತಿ.

ಈ ರೀತಿ ಸೇನೆ ವಿಶ್ರಮಿಸಿಕೊಂಡಿರಲು, ಸೈನ್ಯದ ಬೇಹುಕಾರರು ಅತ್ತಿತ್ತ ತಿರುಗುತಿದ್ದು, ಹೀಗೆ ನೋಡಿ, ಇಬ್ಬರನ್ನು ಹಿಡಿದು ತಂದು ಚಂದ್ರಗುಪ್ತನ ಮುಂದೆ ನಿಲ್ಲಿಸಿದರು. ಅವನವರನ್ನು ಬಿರಬಿರನೆ ನೋಡಿ ಜಗ್ಗನೆದ್ದು ಹತ್ತಿರಕ್ಕೆ ಬಂದು ನಿಂತು, "ನಿಮಗೆ ನಿಮ್ಮ ಜೀವದ ಮೇಲೆ ಇಷ್ಟಾದರೂ ಆಸೆ ಇದೆಯೆಂದಾದರೆ ಸತ್ಯವನ್ನು ಹೇಳಿರಿ" ಎಂದು ದಟ್ಟಿಸಿ ಹೇಳಿದನು.

ಅದಕ್ಕವರು ಗಡಗಡನೆ ನಡುಗಿ "ಬುದ್ಧೀ! ಹೇಳುತ್ತೇವೆ. ನಾವು ಪಾಟಲೀಪುರದವರು, ಅಮಾತ್ಯ ರಾಕ್ಷಸರ ಗೂಢಚಾರರು, ಹೊಟ್ಟೆಗಾಗಿ ಕೆಲಸಮಾಡುತ್ತೇವೆ, ಕ್ಷಮಿಸಬೇಕು, ದಮ್ಮಯ್ಯಾ!" ಎಂದು ಅಡ್ಡ ಬಿದ್ದರು.

ಚಂದ್ರಗುಪ್ತನು ಬಳಿಯಲ್ಲಿರುವ ದೂತರನ್ನು ನೋಡಿ "ಇವರಿಗೆ ನಮ್ಮ ಸೇನೆಗಳನ್ನೆಲ್ಲ ತೋರಿಸಿ ಕಸೆಗಳಿಂದ ಹತ್ತು ಹತ್ತು ಚಡಿಗಳನ್ನು ಕೊಟ್ಟು ಬಿಟ್ಟುಬಿಡಿರಿ" ಎಂದು ನೇಮಿಸಿದನು. ಆ ದೂತರು ಅವರನ್ನು ಹಿಡಿದು, ಜಡಿದು, ಅಮುಕಿ, ದರದರನೆ ಎಳೆದುಕೊಂಡು ಹೋಗಿ, ಸೈನ್ಯಗಳನ್ನೆಲ್ಲ ತೋರಿಸಿ, "ನೋಡಿರಿ, ಸಾಕೊ?" ಎಂದು ಕೇಳಿ, ಕೊರಡೆಗಳಿಂದ ಬಲವಾದ ಚಡಿಗಳನ್ನು ಬಾರಿಸಿ, ಹೋಗಿರೆಂದು ನೂಕಿಬಿಟ್ಟರು. ಗೂಢಚಾರರು ಬೆನ್ನುಗಳನ್ನೊರಸಿಕೊಳ್ಳುತ್ತ ಅಲ್ಲಿಂದ ಹೊರಟು ಬಂದು, ಗುಪ್ತವಾದ ಸ್ಥಳದಲ್ಲಿ ಕಟ್ಟಿದ್ದ ತಮ್ಮ ತಮ್ಮ ಕುದುರೆಗಳನ್ನೇರಿ, ಜೀವವಿದ್ದರೆ ಬೇಡಿತಿಂದೇವೆಂದು ಓಡಿಹೋದರು.

ಇತ್ತ ಪಾಟಲೀಪುರದಲ್ಲಿ ಅಮಾತ್ಯರಾಕ್ಷಸನು "ಏನೋ ಮನಸ್ಸಿಗೆಯೆ ಬಹಳ ಬೇಸರು? ಸುಲಕ್ಷಣವಾಗಿ ತೋರುವುದಿಲ್ಲ!" ಎಂದು ಗಡ್ಡಕ್ಕೆ ಕೈಹಿಡಿದುಕೊಂಡು ಕುಳಿತಿದ್ದನು. ಆ ಸಮಯದಲ್ಲಿ ಚಾರನೊಬ್ಬನು ಬಂದು, "ಬುದ್ಧೀ! ನಮ್ಮ ಕಾಡುಸೀಮೆಯ ಪ್ರಜೆಗಳು ಮ್ಲೇಚ್ಛರ ಹಾವಳಿಯಿಂದ ಸಂಪೂರ್ಣವಾಗಿ ಮುಳುಗಿ ಹೋದರಂತೆ" ಎಂದು ಅರಿಕೆ ಮಾಡಿದನು. ಇದನ್ನು ಕೇಳಿ ರಾಕ್ಷಸನು ಹೀಗೆ ಆಲೋಚಿಸುತ್ತಿರುವಾಗ, ಮತ್ತೊಬ್ಬ ಚಾರನು ಬಂದು ಕೈಮುಗಿದು, "ಜೀಯ! ನಮ್ಮ ದೇಶದ ಎಲ್ಲೆಕಟ್ಟೆನಲ್ಲಿರುವ ಐದು ಕೋಟೆಗಳು ಪಾರಸೀಕರ ವಶವಾದುವಂತೆ" ಎಂದು ಗಡಿಬಿಡಿಯಿಂದ ಬಿನ್ನವಿಸಿದನು. ಅವನು ಹೇಳಿ ಬಾಯಿಮುಚ್ಚುವುದರೊಳಗೆ ಇನ್ನೊಬ್ಬನು ಬಂದು, "ಸ್ವಾಮಿ! ಕಾಶಿಪ್ರಸ್ತದಲ್ಲಿದ್ದ ನಮ್ಮ ಕುದುರೆ ಸವಾರರಿಗೂ ಶಕಸೇನೆಗೂ ಘೋರಯುದ್ಧವಾಗಿ ನಮ್ಮ ಕಡೆಯ ಕುದುರೆಗಳೆಲ್ಲ ಹೋದುವು; ಮಾತ್ರವಲ್ಲ, ಸರದಾರ ರಾಮಸಿಂಗನ ಗತಿ ಆಯಿತು" ಎಂದನು. ಸ್ವಲ್ಪ ಸಮಯದೊಳಗೆ ಬೇರೊಬ್ಬ ದೂತನು ಬಂದು, "ಹೋಯಿತು! ನಮ್ಮ

ಕ್ರೌಂಚಪ್ರಸ್ಥದ ಕೋಟೆಯನ್ನು ಸಿಂಧುದೇಶದವರು ಬಂದು ಆಕ್ರಮಿಸಿ ಕೊಂಡರು'' ಎಂದನು.

ಹೀಗೇ ಒಂದರ ಮೇಲೊಂದು ಅನರ್ಥದ ವರ್ತಮಾನವೆ ಬರುವು ದನ್ನು ಕೇಳಿ ಅಮಾತ್ಯ ರಾಕ್ಷಸನು "ನಾನು ಮಂತ್ರಿಪದಕ್ಕೆ ಬಂದು ಇದುವರೆಗೆ ಹೀಗಾಗಲಿಲ್ಲ; ಏನು ಗ್ರಹಚಾರವಿದು? ಇರಲಿ, ಇದನ್ನು ಕೂಲಂಕಷವಾಗಿ ತಿಳಿದುಕೊಳ್ಳದೆ ಒಂದಕ್ಕೂ ದುಡುಕಬಾರದು'' ಎಂದು ಯೋಚಿಸಿಕೊಂಡಿದ್ದನು. ಆ ಸಮಯದಲ್ಲಿ ಇಬ್ಬರು ರಾವುತರು ಕುದುರೆ ಗಳನ್ನೋಡಿಸಿಕೊಂಡು ಬಂದು, ಬಲು ಬೇಗನೆ ನಗರದ ಹೆಬ್ಬಾಗಿಲನ್ನು ಹೊಕ್ಕು, ಅಮಾತ್ಯನೆದುರಿನಲ್ಲಿ ಕುದುರೆಗಳಿಂದ ಹಾರಿ, "ನೀರು'' ಎಂದೊಂದು ಶಬ್ದವನ್ನು ಮಾತ್ರ ಹೇಳಿ ನೆಲದ ಮೇಲೆ ದೊಪ್ಪನೆ ಬಿದ್ದರು. ಇದನ್ನು ನೋಡಿ ಅಲ್ಲಿದ್ದ ಸೇವಕರು ಅವರ ಮೇಲೆ ನೀರು ತಳಿದು, ಬಾಯಿಗೆ ಸ್ವಲ್ಪಸ್ವಲ್ಪ ತಿಳಿನೀರನ್ನು ಬಿಟ್ಟರು. ಕೆಲವು ಹೊತ್ತಿನ ಮೇಲೆ ಅವರು ಹಾಗೆ ಕಣ್ಣುಗಳನ್ನು ಬಿಟ್ಟು ಅತ್ತಿತ್ತ ನೋಡಿ, ಚೇತರಿಸಿಕೊಂಡು ಎದ್ದು ನಿಂದು, ಅಮಾತ್ಯನ ಎದುರಿಗೆ ಬಂದು, "ಸ್ವಾಮಿಾ! ನಾವು ಪರ್ವತರಾಜ್ಯಕ್ಕೆ ಹೋಗಿದ್ದ ಗೂಢಚಾರರು'' ಎಂದು ವಿಜ್ಞಾಪಿಸಿದರು.

ಆಗ ಅಮಾತ್ಯನು ಅವರನ್ನು ಒಂದು ಗುಪ್ತವಾದ ಕೋಣೆಯೊಳಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿಕೊಂಡು "ಏನು ನಿಮಗಿಷ್ಟು ಆಯಾ ಸವು? ಹೀಗೆ ಉಸಿರುಬ್ಬಸದಿಂದ ಓಡಿ ಬರಲು ಕಾರಣವೇನು?'' ಎಂದು ನಿಧಾನವಾಗಿ ವಿಚಾರಿಸಿದನು.

ದೂತರು—ಸ್ವಾಮಿಾ! ನಾವು ಶತ್ರುಗಳ ದಂಡಿನಿಂದ ಹೊರಟು ಇಂದಿಗೆ ಹನ್ನೆರಡು ದಿನಗಳಾದುವು. ನಿದ್ರೆಯೂ ಇಲ್ಲ, ಆಹಾರವೂ ಇಲ್ಲ. ಹಗಲು ಇರುಳೆಂದು ನೋಡದೆ ಓಡಿಯೋಡಿ, ತಮ್ಮನ್ನು ನೋಡುವ ಖುಣ ವಿದ್ದುದರಿಂದ ಇಲ್ಲಿಗೆ ಬಂದು ಮುಟ್ಟಿದೆವಲ್ಲದೆ ಮತ್ತೆ ಏನೊಂದೂ ಹೇಳ ಲಿಕ್ಕಾಗುವುದಿಲ್ಲ; ಪರ್ವತೇಶ್ವರನು ಅನೇಕ ರಾಯರೊಡನೆ ಲೆಕ್ಕವಿಲ್ಲದ ಬಲಗಳನ್ನು ಕೂಡಿಕೊಂಡು ಅಘನಾಶಿನೀ ತೀರದಲ್ಲಿ ಬಂದು ಇಳಿದಿರು ವನು; ಅವನ ಕಡೆಯ ಪಾಳೆಯಗಾರರು ನಮ್ಮ ದೇಶದ ಗಡಿಗಳನ್ನು ಒಂದೊಂದಾಗಿ ಒತ್ತುತ್ತಲಿದ್ದಾರೆ; ಇಷ್ಟು ನಾವು ಕಣ್ಣಾರೆ ಕಂಡ ವಿಷಯವು.

ರಾಕ್ಷಸ—ಪರ್ವತೇಶ್ವರನಿಗೂ ಲಂಪಾಕದೇಶಾಧಿಪತಿಗೂ ಹಿಡಿದು ಬರುವ ಸಂಭವವಿದೆ ಎಂದು ಏನೊ ಒಂದು ಗಾಳಿಸುದ್ದಿ ಇತ್ತು.

ದೂತರು—"ಅದು ಹೌದು, ಆದರೆ ಆ ಸಮಯದಲ್ಲಿ ನಮ್ಮ ಚಂದ್ರಗುಪ್ತನೂ ತಲೆಬಿಚ್ಚಿಕೊಂಡಿರುವ ಒಬ್ಬ ಬ್ರಾಹ್ಮಣನೂ ಅಲ್ಲಿಗೆ ಬಂದು ಪರ್ವತೇಶ್ವರನೊಡನೆ ಏನೇನೊ ಮಾತನಾಡಿಕೊಂಡಿದ್ದರು ಕಡೆಗೆ ಒಬ್ಬ ರಾಯಭಾರಿ ಕಾಮರೂಪದೇಶಕ್ಕೆ ಹೋದನು. ಮತ್ತೆ ವರ್ತಮಾನ ವಾಯಿತು, ಲಂಪಾಕರಾಜನಿಗೂ, ಕಾಮರೂಪಾಧಿಪತಿಗೂ ಯುದ್ಧ ವೆಂದು; ಪರ್ವತೇಶ್ವರನ ಸೈನ್ಯವು ಈಚೆಗೆ ಹೊರಟಿತು; ಇವರ ನಡುವೆ ನಾವು ತಿರುಗಾಡುತ್ತಲೆ ಇದ್ದೆವು: ಅವನ ಬೇಹುಕಾರರು ಬಹಳ ಗಟ್ಟಿ ಗರು; ಆದರೂ ಚಂದ್ರಗುಪ್ತನು ದಯಾಳುವಪ್ಪ!" ಎಂದು ಬೆನ್ನನ್ನು ತೋರಿಸಿ, "ನಮ್ಮ ಜೀವವನ್ನು ಮಾತ್ರ ಬಿಟ್ಟನು" ಎಂದು ಹೇಳಿದರು.

ರಾಕ್ಷಸ—"ನೀವಿದನ್ನು ಅರಸರ ಸನ್ನಿಧಿಯಲ್ಲಿ ಅರಿಕೆಮಾಡಿರಿ" ಎಂದು ಅವರನ್ನು ಕಳುಹಿಸಿ, ಕಾಗದ ಮಸಿ ಲೇಖಣಿಗಳನ್ನು ತರಿಸಿ, ಎರಡು ಪತ್ರಗಳನ್ನು ಬರೆದು, ಅವುಗಳಿಗೆ ರಾಜಮುದ್ರೆಗಳನ್ನು ಮಾಡಿಸಿ ಇಬ್ಬರು ದೂತರನ್ನು ಕರೆದು, ಅವರೊಡನೆ ಅಂತರಂಗದಲ್ಲಿ ಹೇಳಬೇಕಾದುದನ್ನೆಲ್ಲ ಹೇಳಿ ಕಳುಹಿಸಿದನು. ಕೂಡಲೆ ಅವರು ಕುದುರೆಗಳನ್ನೇರಿ ಹೊರಟು ಹೋದರು. ಅಮಾತ್ಯನು ಅಲ್ಲಿಂದ ಎದ್ದು ಆಸ್ಥಾನಕ್ಕೆ ಬಂದು ನಂದರೊಡನೆಯೂ ಮಿಕ್ಕ ಸಾಮಂತರಾಯರೊಡನೆಯೂ ಹೇಳಬೇಕಾದು ದನ್ನೆಲ್ಲ ಹೇಳಿ, ತನ್ನ ಮನೆಗೆ ಬಂದು ಕುಳಿತು—"ನಂದರ ಅದೃಷ್ಟವು ಹೇಗಿ ದೆಯೋ? ಒಮ್ಮೆ ಬುದ್ಧಿವಂತರಾದ ಜೋಯಿಸರೊಡನೆ ಅವರ ಜಾತಕಗಳ ನ್ನೆಲ್ಲ ತೋರಿಸಿದರಾಗುತ್ತಿತ್ತು" ಎಂದು ಯೋಚಿಸಿಕೊಂಡಿದ್ದನು.

## ೧೧. ಶತ್ರುಪಲಾಯನ ಹೋಮ.

ಅಮಾತ್ಯ ರಾಕ್ಷಸನು ತನ್ನ ಮನೆಯಲ್ಲಿ ಕುಳಿತುಕೊಂಡು ಒದಗಿದ ಅನಿಷ್ಟದ ವಿಷಯವನ್ನೂ, ಅದರ ನಿವಾರಣೆಗೆ ತಕ್ಕ ಹಂಚಿಕೆಯನ್ನೂ ಹುಡುಕುತಿದ್ದನು. ಆಗ ದೂತನೊಬ್ಬನು ಒಳಗೆ ಬಂದು—"ಬುದ್ಧೀ! ಮಹಾತ್ಮರಾದ ಕ್ಷಪಣಕರು ಬಂದಿದ್ದಾರೆ" ಎಂದು ಅರಿಕೆ ಮಾಡಿದನು.

**ರಾಕ್ಷಸ**— ಒಳಗೆ ಕರೆದು ತನ್ನಿರಿ.

ದೂತರು ಹೋಗಿ ಕರೆಯಲು, ಕ್ಷಪಣಕನು—"ಜೈ ಬುದ್ಧದೇವ!" ಎಂದು ಒಳಗೆ ಬಂದು "ಧರ್ಮಾತ್ಮರಿಗೆ ಶ್ರೇಯೋಸ್ತು" ಎಂದು ಆಶೀರ್ವದಿಸಿ, ನೆಲದ ಮೇಲೆ ವೀರಾಸನವನ್ನು ಜಲಿದು ಕುಳಿತುಕೊಂಡನು.

**ರಾಕ್ಷಸ**—ಕ್ಷಪಣಕರೆ! ನೆನಸಿದಂತೆಯೆ ಒಳ್ಳೆಯ ಸಮಯದಲ್ಲಿ ಬಂದಿರಿ!

**ಕ್ಷಪಣಕ**—ಮಹಾರಾಜ! ಕಾಡುಗುಡ್ಡೆಗಳಲ್ಲಿ ಸಂಚರಿಸುವ ನಾವು ನಿಮ್ಮ ಒಂದು ಆದರಣೆಯಿಂದ ನಮ್ಮ ಮೌನಗಿವುನಗಳನ್ನೆಲ್ಲ ಬಿಟ್ಟು, ನಿಮ್ಮನ್ನು ಬಿಡಲಾರದೆ ಇಲ್ಲಿ ಬಂದು ಕುಳಿತಿದ್ದೇವೆ. ನಾಲ್ಕಾರು ದಿನಗಳಿಂದ ತಮ್ಮ ದರ್ಶನವೆ ಇಲ್ಲ; ಮತ್ತೆ ನಾವು ಯಾಕೆ ಇಲ್ಲಿರಬೇಕು?

**ರಾಕ್ಷಸ**—ಸ್ವಾಮಿ! ರಾಜಕಾರ್ಯವು ಬಹಳವಾಗಿದ್ದುದರಿಂದ ನಿಮ್ಮನ್ನು ಕರೆಯಿಸಲಿಕ್ಕಾಗಲಿಲ್ಲ; ಈಗ ನೀವಾಗಿಯೆ ಬಂದು ಬಿಟ್ಟಿರಿ; ಒಳ್ಳೆದಾಯಿತು; ಒಂದು ಪ್ರಶ್ನೆಯನ್ನು ಹೇಳಬೇಕಾಗಿದೆ.

**ಕ್ಷಪಣಕ**—ಕಣ್ಣುಮುಚ್ಚಿ—"ಬುದ್ಧಾ!" ಎಂದು ತೆರೆದು—ಅಮಾತ್ಯರೆ! ನೀವು ಕೇಳಿದ ಪ್ರಶ್ನೆ ರಾಜ್ಯಸಂಬಂಧವಾದುದು; ಶತ್ರುಗಳ ವಿಷಯವು ತೋರುತ್ತದೆ! ಈ ಲಗ್ನಕ್ಕೆ ಶತ್ರುಸ್ಥಾನದಲ್ಲಿರುವ ಗ್ರಹವನ್ನು ಶತ್ರುಗ್ರಹವು ನೋಡುತ್ತಿರುವುದರಿಂದ ದಂಡೆತ್ತಿ ಬರುವ ವೈರಿ ಸರಿಯಾಗಿ ಹಿಂದಿರುಗಲಾರನು; ಮೊದಲು ಮೊದಲು ಅಲ್ಪ ಸ್ವಲ್ಪ ಕಷ್ಟವಾಗಿ ಕಂಡರೂ ಕೊನೆಗೆ ನಮಗೆ ಜಯವಾಗುವುದು ಖಂಡಿತವೆ. ಬುಧಾದಿ ಪಂಚಗ್ರಹಗಳು ಲಗ್ನಕ್ಕೆ ಭೇದಫಲಗಳನ್ನು ಕೊಡುವುವಾದುದರಿಂದ ಶತ್ರುಸಹಾಯಕರು ಭೇದೋಪಾಯಕ್ಕೆ ಒಳಗಾದಾರು; ಆಗ ದಂಡೋಪಾಯದಿಂದ ಶತ್ರುಸಂಹಾರವಾದೀತು; ಒಂದೆರಡು ಅಲ್ಪಗ್ರಹಗಳು ವಕ್ರ ದೃಷ್ಟಿಯಿಂದ ನೋಡುತ್ತಿವೆ, ಇದಕ್ಕೆ ನಿಮ್ಮ ರಾಜ್ಯದ ಮೇರೆಯಲ್ಲಿರುವ ನದೀತೀರದಲ್ಲಿ ಉತ್ತಮರಾದ ಬ್ರಾಹ್ಮಣರಿಂದ ಶತ್ರುಪಲಾಯನ ಹೋಮವನ್ನು ಮಾಡಿಸಿದರೆ ಸರಿ.

**ರಾಕ್ಷಸ**—ಕ್ಷಪಣಕರೆ! ಜ್ಯೋತಿಷದಲ್ಲಿ ನಿಮ್ಮನ್ನು ಬಿಟ್ಟರೆ ಮತ್ತೆ ಯಾರೂ ಇಲ್ಲ; ನೀವು ಹೇಳಿದುದೆಲ್ಲ ತಿಳಿಯಿತು; ತಾವು ಯಾವಾ

ಗಲೂ ಇಲ್ಲಿಯೆ ಇರಬೇಕು; ನಿಮಗೆ ನನ್ನಿಂದೇನಾದರೂ ಆಗಬೇಕಾದು ದಿದ್ದರೆ ಹೇಳಿರಿ.

ಕ್ಷಪಣಕ—"ಅಯ್ಯಾ! ಈ ಲೌಕಿಕ ವಿಷಯಗಳಲ್ಲೆಲ್ಲ ನಮಗೆ ಏನಿದೆ? ಇರಬೇಕಾದರೆ ಪಟ್ಟಣದ ಹೊರಗೊಂದು ಎಲೆಮನೆಯನ್ನು ಕಟ್ಟಿಸಿ ಕೊಡಿರಿ; ನಮ್ಮ ವಿಧಿ ಹಿಡಿದುಕೊಂಡು ಇದ್ದುಬಿಡುತ್ತೇವೆ" ಎಂದು ಧ್ಯಾನದಲ್ಲಿ ಕಣ್ಣುಮುಚ್ಚಿದನು.

ರಾಕ್ಷಸ—ಸೇನಾಪತಿ ಬಾಗುರಾಯಣ! ತಿಳಿಯಿತಲ್ಲ? ಈ ಕೆಲಸಗಳನ್ನು ನೀನೆ ಮಾಡಿಸಬೇಕು; ಮತ್ತೇನಾದರೂ ವಿಶೇಷ ಸಂದರ್ಭವು ಒದಗಿದರೂ ನೀನೆ ನೋಡಿಕೊಳ್ಳಬೇಕಾಗುವುದು. ಹೋಗು.

ಬಾಗುರಾಯಣನು "ಅಪ್ಪಣೆ" ಎಂದು ಹೊರಟು ಬಂದು ಉತ್ತಮರೂ ಜಪಶೀಲರೂ ಆದ ಬ್ರಾಹ್ಮಣರನ್ನು ಹುಡುಕುತಿದ್ದನು. ಆಗ ಅವನ ಗೃಹವೈದ್ಯನಾದ ಸಿದ್ಧಾರ್ಥಕನು—

"ಸೇನಾಪತಿಗಳೇ! ಗಂಗಾಸರಯೂ ನದಿಗಳ ಸಂಗಮದ ಪೂರ್ವಭಾಗವು ಜಪತಪಯಜ್ಞ ಹೋಮಾದಿಗಳಿಗೆ ಮುಖ್ಯ ಸ್ಥಳವೆಂದು ಅನೇಕರು ಹೇಳುವುದನ್ನು ನಾನು ಕೇಳಿದ್ದೇನೆ. ಆದುದರಿಂದ ಶತ್ರುಪಲಾಯನ ಹೋಮಕ್ಕೆ ಅದುವೆ ಯೋಗ್ಯಸ್ಥಳವೆಂದು ತೋರುತ್ತದೆ" ಎಂದನು. ಆ ಸಮಯದಲ್ಲಿ ಒಬ್ಬ ಮುನಿ ಬೀದಿಯಲ್ಲಿ ಹೋಗುತಿದ್ದನು. ಸಿದ್ಧಾರ್ಥಕನು ಅವನನ್ನು ಕಂಡು—"ಇದೇನಾಶ್ಚರ್ಯವು! ಇವರೆಲ್ಲಿಂದ ಬಂದರಪ್ಪಾ!" ಎಂದು ದೂರದಿಂದಲೆ ಬಗ್ಗಿ ಕೈಮುಗಿದನು.

ಬಾಗುರಾಯಣ—ಏನಯ್ಯಾ! ಅದು ಯಾರು?

ಸಿದ್ಧಾ—ಸ್ವಾಮಿ! ಇವರೆ ಮಾಸೋಪವಾಸಿಗಳೆಂದರೆ; ಇಲ್ಲಿಗೆ ಯಾಕೆ ಬಂದರೊ! ಆದರೆ ಈ ಸಮಯದಲ್ಲಿ ಇವರು ಇಲ್ಲಿಗೆ ಬಂದುಬಿಟ್ಟುದು ಬಹಳ ಉತ್ತಮವಾಯಿತು; ಇವರನ್ನು ನಾವು ಹಿಡಿದುಬಿಟ್ಟರೆ ಕೆಲಸವಾಯಿತು; ಮತ್ತೇನೂ ಹೆದರಿಕೆಯಿಲ್ಲ.

ಇದನ್ನು ಕೇಳಿ ಬಾಗುರಾಯಣನು ಹೋಗಿ ನಾನಾ ವಿಧದಿಂದ ಅವನನ್ನು ಒಡಂಬಡಿಸಿ, ಕರೆದುಕೊಂಡು ಬಂದು ಸಿದ್ಧಾರ್ಥಕನು ಸೂಚಿಸಿದ ಸ್ಥಳದಲ್ಲಿಯೆ ಜಪಶಾಲೆಯನ್ನು ಕಟ್ಟಿಸಿ, ಮಾಸೋಪವಾಸಿಯನ್ನು

ಆಚಾರ್ಯರನ್ನಾಗಿ ನೇಮಿಸಿ, ಅವನು ಹೇಳಿದ ಬ್ರಾಹ್ಮಣರನ್ನು ಕರೆಯಿಸಿ ಕೊಟ್ಟು, ಜಪವನ್ನು ಮಾಡಿಸುವಂತೆ ತನ್ನ ಕಡೆಯವರೊಡನೆ ಹೇಳಿದನು. ಮಾಸೋಪವಾಸಿ ನಾಲ್ಕು ಮಂದಿ ಋತ್ವಿಜರೊಡಗೂಡಿ ಜಪಹೋಮ ಗಳನ್ನು ಆರಂಭಿಸಿದನು.

## ೧೭. ಭೇದೋಪಾಯಭಂಗ.

ಜೀರಾಸನದಲ್ಲಿ ಕುಳಿತು ಯೋಗಸಿದ್ಧಾಭರದಿಂದಿರುವ ಕ್ಷಪಣಕ ನನ್ನು ನೋಡಿ ರಾಕ್ಷಸನು, ಆಚೆಗೆ ಹೋಗೆಂದು ಹೇಳಲಿಕ್ಕೆ ದಾಕ್ಷಿಣ್ಯ ಗೊಂಡು, "ಇವನೊಬ್ಬ ಬೈರಾಗಿ, ನಮ್ಮ ಮೇಲಿರುವ ಪ್ರೀತಿಯಿಂದ ನಮ್ಮಲ್ಲಿ ಹೊರತು ಬೇರೊಬ್ಬನಲ್ಲಿ ಇವನಿಗೆ ಮೌನವು, ಮತ್ತು ಇಂತಹ ಲೌಕಿಕ ವ್ಯವಹಾರಗಳಲ್ಲಿ ಈತನಿಗೆ ಪ್ರಯೋಜನವೂ ಇಲ್ಲ; ಆದುದರಿಂದ ಒಂದು ವೇಳೆ ಇಲ್ಲಿದ್ದರೂ ಬಾಧಕವಿಲ್ಲ" ಎಂದು ನಿಶ್ಚಯಿಸಿ, ರಾಯಸ ದವನನ್ನು ಕರೆದು—"ಕುಲೂತಪತಿಯಲ್ಲಿರುವ ಧನಗುಪ್ತನಿಗೂ, ಮಲಯ ಪತಿಯಲ್ಲಿರುವ ಕೃಷ್ಣದಾಸನಿಗೂ, ಕಾಶ್ಮೀರಪತಿಯಲ್ಲಿರುವ ಶಾರಿಕ ಸೆಟ್ಟಿಗೂ, ಸಿಂಧುಪತಿಯಲ್ಲಿರುವ ಜೀರಾದಾಸನಿಗೂ, ಪಾರಸೀಕರಾಜನಲ್ಲಿ ರುವ ಮುಕುಂದದಾಸನಿಗೂ, ಗಾಂಧಾರರಾಜನಲ್ಲಿರುವ ವಜ್ರಲಾಲನಿಗೂ, ಕಾಂಭೋಜದಲ್ಲಿರುವ ಜಾಲದಾಸನಿಗೂ ನಮ್ಮ ಹೆಸರಿನಿಂದ ಹೀಗೆ ಒಂದೊಂದು ಕಾಗದವನ್ನು ಬರೆಯಬೇಕು—ಎಷ್ಟು ಧನವ್ಯಯವಾದರೂ ಚಿಂತೆಯಿಲ್ಲ, ನಿಮ್ಮ ಆಶ್ರಯದಾತರುಗಳಾದ ಅರಸುಗಳನ್ನು ಯಾವ ರೀತಿ ಯಿಂದಲಾದರೂ ಕಂಕುಳಲ್ಲಿ ಹಾಕಿ, ಏನಾದರೂ ಒಂದು ಉಪಾಯ ದಿಂದ ಚಂದ್ರಗುಪ್ತನನ್ನು ಸಂಹರಿಸಿದರೆ ಬಹಳ ಒಳ್ಳೆಯದು; ಒಂದು ವೇಳೆ ಅದು ಸಾಧ್ಯವಾಗದೆ ಹೋದರೆ, ಪರ್ವತೇಶ್ವರನನ್ನು ಒಳಗೆ ಹಾಕಿದರೂ ಆದೀತು. ಅದು ಸಹ ಆಗದಿದ್ದರೆ ಪರ್ವತರಾಯನಿಗೂ ನಮಗೂ ಯುದ್ಧವಾಗುವಾಗ ಮಿಕ್ಕ ಅರಸರೆಲ್ಲರೂ ತಟಸ್ಥರಾದರೂ ಆದೀತು. ಇವುಗಳಲ್ಲಿ ಯಾವುದಾದರೂ ಸರಿಯೆ, ಒಂದನ್ನು ಮಾಡಿಸಿ ಬಿಡಿರಿ. ಈ ವಿಷಯದಲ್ಲಿ ನೀವು ಅವರಿಗೆ ಬೇಕಾದಂತೆ ಮಾತುಕೊಡಬಹುದು" ಎಂದು ಬೇರೆ ಬೇರೆ ಕಾಗದಗಳನ್ನು ಬರೆಯಿಸಿ, ಮುದ್ರೆಗಳನ್ನೊತ್ತಿ, ನಾಲ್ಕು ಮಂದಿ

ಚಾರರನ್ನು ಕರೆದು ಅವರ ಕೈಗಳಲ್ಲಿ ಕೊಟ್ಟು, "ಶೀಘ್ರಗಲೆ ಕುದುರೆಗಳ ನ್ನೇರಿ, ವೇಷಾಂತರದಿಂದ ಹೋಗಿ ಆಯಾ ಶಿಳಾಸದಾರರಿಗೆ ಕೊಟ್ಟು ಬರಬೇಕು" ಎಂದು ಕಳುಹಿಸಿದನು.

ಸ್ವಲ್ಪ ಹೊತ್ತಿನ ಮೇಲೆ ಕ್ಷಪಣಕನು ಸಮಾಧಿಯನ್ನಿಳಿಸಿ "ಭಗವಾನ್ ಬುದ್ಧಾ" ಎಂದು ಕಣ್ಣುತೆರೆದನು. ಆಗ ರಾಕ್ಷಸನು— "ಸ್ವಾಮಿ! ತಮಗೆ ಭಿಕ್ಷದ ಸಮಯವು ಸನ್ನಿಹಿತವಾಯಿತು. ದಯ ಮಾಡಿಸಿರಿ" ಎಂದು ಎದ್ದುನಿಂದು ನಮಸ್ಕರಿಸಿ ಕಳುಹಿಸಿದನು.

ಕ್ಷಪಣಕನು ಅಲ್ಲಿಂದ ಹೊರಟುಬರುತ್ತ ದಾರಿಯಲ್ಲಿ ಕಂಡ ಒಬ್ಬ ಯುವಕನೊಡನೆ ಕ್ಷಣಹೊತ್ತು ಪಿಸಿಪಿಸಿ ಮಾತನಾಡಿ, ಒಂದು ಕಾಗದ ವನ್ನು ಬರೆದುಕೊಟ್ಟು ತನ್ನ ಪರ್ಣಶಾಲೆಗೆ ಬಂದನು. ಯುವಕನು ಆಗಲೆ ಒಂದು ಕುದುರೆಯನ್ನೇರಿ ವೇಗವಾಗಿ ಹೋದನು.

ಅತ್ತ ಚಾಣಕ್ಯನಿರುವಲ್ಲಿಗೆ ಒಬ್ಬ ಸವಾರನು ಬಂದು ಒಂದು ಕಾಗದವನ್ನು ಕೊಟ್ಟು, ಕಿವಿಯಲ್ಲಿ ಏನೇನೊ ಹೇಳಿದನು. ಚಾಣಕ್ಯನು ಕಾಗದವನ್ನು ನೋಡಿ, ತಲೆಯನ್ನಲ್ಲಾಡಿಸಿ, ಪರ್ವತರಾಯನಿದ್ದಲ್ಲಿಗೆ ಬಂದು "ರಾಯನೆ! ವೈರಿಗಳ ಗೂಢಚಾರರು ನಮ್ಮ ಸೇನೆಯಲ್ಲಿ ತಿರುಗುತಿದ್ದಾರೆ ಎಂದು ನನಗೊಂದು ಸ್ವಪ್ನವಿತ್ತು; ಆದುದರಿಂದ ಸ್ವಲ್ಪ ಪರಿಶೋಧಿಸ ಬೇಕು" ಎಂದನು.

ಅದೇ ಸಮಯದಲ್ಲಿ ಹೊರಗಿನಿಂದ "ಅಯ್ಯೋ! ಅಯ್ಯಯ್ಯೋ!" ಎಂಬ ಕೂಗು ಕೇಳಿತು. ಆಗ ರಾಯನು ದೂತರ ಮೋರೆಯನ್ನು ನೋಡಲು, ಅವರು ಹೋಗಿ, ಜೋಗಿವೇಷವನ್ನು ಧರಿಸಿಕೊಂಡಿದ್ದ ಆ ಚಾರನ ಚೀಲದಲ್ಲಿದ್ದ ಕಾಗದಗಳನ್ನು ತಂದು ಅರಸನ ಮುಂದಿಟ್ಟು— "ಬುದ್ಧಿ! ಈಗ ಕೂಗಿದವನು ಪಾಟಲೀಪುರದ ಗೂಢಚಾರನು, ನಮ್ಮ ಬೇಹಿನವರು ಹಿಡಿದಿರುವರು" ಎಂದರು.

ರಾಯನು ಕಾಗದಗಳನ್ನೋದಿ ಚಾಣಕ್ಯನಿಗೆ ತೋರಿಸಿದನು. ಆಗ ಚಾಣಕ್ಯನು—"ಈ ಕಾಗದಗಳು ಕುಲೂತಪತಿಯಲ್ಲಿರುವ ಧನಗುಪ್ತನಿಗೂ, ಕಾಶ್ಮೀರಪತಿಯಲ್ಲಿರುವ ಶಾರಿಕಸೆಟ್ಟಿಗೂ ರಾಕ್ಷಸನು ಬರೆದವುಗಳು;

ಆದರೆ ಇದೊಂದು ಕಾಗದವನ್ನು ನೋಡು'' ಎಂದು ತನ್ನಲ್ಲಿರುವ ಕಾಗದ ವನ್ನು ಕೊಟ್ಟನು.'

ಪರ್ವತೇಶ್ವರನು ಕಾಗದವನ್ನು ನೋಡಿದಾಕ್ಷಣವೆ ಚಿತ್ರವರ್ಮಾದಿ ಗಳನ್ನು ಕರೆಯಿಸಿ, ಅವರಿಗೂ ಆ ಕಾಗದವನ್ನು ತೋರಿಸಿ, ಚಾಣಕ್ಯನ ಹೇಳಿಕೆಯಂತೆ ಆ ಎಂಟು ಮಂದಿ ವರ್ತಕರನ್ನೂ ದಂಡಿಸದೆ ಕಾವಲಿಟ್ಟು, ಹಿಂದೆ ಕಳುಹಿಸಿದನು. ಜೋಗಿ ವೇಷಧಾರಿಯ ಮೂಗನ್ನು ಕೊಯಿಸಿ, ದಂಡಿಸಲ್ಲೆಲ್ಲ ಮೆರವಣಿಗೆ ಮಾಡಿಸಿದನು. ಇದೆಲ್ಲವನ್ನು ನೋಡಿ ಉಳಿ ದವರು ತಮ್ಮ ತಮ್ಮ ಕೈಗಳಲ್ಲಿರುವ ಕಾಗದಗಳನ್ನು ಹರಿದು ನುಂಗಿ, ಪಲಾಯನ ಸೂಕ್ತವನ್ನು ಪಠಿಸಿದರು,

ಚಾಣಕ್ಯ—''ರಾಯನೆ! ಕಂಡೆಯಾ ರಾಕ್ಷಸನ ತಂತ್ರವನ್ನು! ಇಲ್ಲಿ ಮಾತ್ರ ಅದು ಮಳಲ ಸೇತುವೆಯಾಯಿತು; ಇರಲಿ. ಇನ್ನು ಹೀಗೆಯೇ ಇರಬಾರದು; ಆ ನಂದರ ಸ್ನೇಹಿತನಾದ ಕಾಶೀರಾಜನಿಗೂ, ಮಿಥಿಲೇಶ ನಿಗೂ, ಮತ್ಸ್ಯಪತಿಗೂ, ನೀವು ಬಂದು ನಮಗೆ ಸಹಾಯ ಮಾಡಬೇಕೆಂದು ಒಂದೊಂದು ನಿರೂಪವನ್ನು ಬರೆಯಿಸಿಕೊಟ್ಟು, ರಾಯಭಾರಿಗಳನ್ನು ಕಳು ಹಿಸು; ಇದರಿಂದಾಗುವ ಲಾಭವು ಮುಂದೆ ತಿಳಿದೀತು'' ಎಂದು ತಾನೆ ಒಕ್ಕಣೆ ಹೇಳಿ ಬರೆಯಿಸಿ, ಅರಸನ ಮುದ್ರೆಯನ್ನೊತ್ತಿ, ರಾಯಭಾರಿಗಳ ಕೈಯಲ್ಲಿ ಕೊಟ್ಟು, ಕಾಶೀದೇಶಕ್ಕೆ ಹೋಗುವ ಕಮಲಾಪೀಡನನ್ನು ಕರೆದು ಕಿವಿಯಲ್ಲಿ 'ಹೀಗೆ ಹೀಗೆ' ಎಂದು ಹೇಳಿ ಕಳುಹಿಸಿ ತನ್ನ ಸ್ಥಾನಕ್ಕೆ ಬಂದು, ತುರಗಾರೂಢನಾಗಿ ಬಂದ ವೇಗಶರ್ಮನೊಡನೆ ಗುಟ್ಟಿನಲ್ಲಿ ಹೇಳ ಬೇಕಾದುದನ್ನೆಲ್ಲ ಹೇಳಿ ಕಳುಹಿಸಿದನು.

## ೧೩. ಕೌಟಿಲ್ಯನ ಕುಟಿಲತೆ.

ಕಮಲಾಪೀಡನು ಸಪರಿವಾರನಾಗಿ ಕಾಶೀಪಟ್ಟಣಕ್ಕೆ ಬಂದು, ತನ್ನ ದೂತರಿಬ್ಬರನ್ನು ಕಾಶಿಯಿಂದ ಪಾಟಲೀಪುರಕ್ಕೆ ಹೋಗುವ ದಾರಿ ಯಲ್ಲಿ ನಿಲ್ಲಿಸಿ, ರಥದಿಂದಿಳಿದು ಬಂದು ಕಾಶೀರಾಜನನ್ನು ಕಂಡು, ಸನ್ಮಾ ನಿತನಾಗಿ, ತಂದಿದ್ದ ಕೈಕಾಣಿಕೆಗಳನ್ನೊಪ್ಪಿಸಿ, ಕ್ಷೇಮಸಮಾಚಾರಗಳನ್ನು ಕುರಿತು ಮಾತನಾಡಿ, ಅನಂತರ ಕಾಗದವನ್ನು ಕೊಟ್ಟನು.

ಅದರಲ್ಲಿ—ಶ್ರೀಮಾನ್ ಪರಮ ಪ್ರಿಯರಾದ ಕಾಶೀರಾಜರಿಗೆ—ಪರ್ವತೇಶ್ವರನ ವಿಜ್ಞಾಪನೆ. ಈಗ ನಾವು ಚಂದ್ರಗುಪ್ತನ ಸಹಾಯಕ್ಕಾಗಿ ನಂದರ ಮೇಲೆ ದಂಡೆತ್ತಿ ಬಂದಿರುತ್ತೇವೆ; ಈ ಸಮಯದಲ್ಲಿ ನೀವು ಸೇನಾಸಮೇತರಾಗಿ ಬಂದು, ನಮಗೆ ಸಹಾಯವನ್ನು ಮಾಡಿದರೆ, ಅದನ್ನು ಎಂದೆಂದಿಗೂ ಮರೆಯಲಾರೆವು; ಬೇರೆ ವಿಷಯವೇನಿದ್ದರೂ ನಾವೂ ನೀವೂ ಮುಖತಃ ಕಂಡು, ಆ ಮೇಲೆ ನಿಮ್ಮ ಇಷ್ಟದಂತೆಯೆ ಮಾಡಿಕೊಳ್ಳಬಹುದು

ಇತಿ ಪರ್ವತೇಶ್ವರ.

ಕಾಶೀರಾಜನದನ್ನು ಓದಿನೋಡಿ—"ಇವನು ಬಂದ ವಿಷಯವು ನಮ್ಮ ನಂದರಿಗೆ ಮೊದಲಾಗಿ ತಿಳಿದರೆ ಅವರಿಗೆ ನಮ್ಮ ಮೇಲಿದ್ದ ವಿಶ್ವಾಸವು ತಪ್ಪಿ ಹೋದೀತು: ಇದರಿಂದ ನಾವು ಅವರ ಕೋಪಕ್ಕೆ ಪಾತ್ರರಾದೇವು: ಆದುದರಿಂದ ಇದನ್ನು ಈಗಲೆ ನಂದರಿಗೆ ತಿಳಿಸುವುದು ಉತ್ತಮವು" ಎಂದು ನಿಶ್ಚಯಿಸಿ, ರಾಯಭಾರಿಯನ್ನು ಕುರಿತು—"ಇದಕ್ಕೆ ಉತ್ತರವನ್ನು ನಾಳೆ ಹೇಳುತ್ತೇನೆ; ನೀವು ಹೋಗಿ ಬಿಡಾರದಲ್ಲಿ ಉಳಿದುಕೊಳ್ಳಿರಿ" ಎಂದು ಅವನನ್ನು ಕಳುಹಿಸಿದನು. ಕಮಲಾಪೀಡನು ತನ್ನ ಕಡೆಯ ಒಬ್ಬನನ್ನು ಅಲ್ಲಿಯೇ ನಿಲ್ಲಿಸಿ ಹೊರಟು ಬಂದನು.

ಕಾಶೀರಾಜನು ಕೂಡಲೆ ನಂದರ ಹೆಸರಿಗೊಂದು ಕಾಗದವನ್ನು ಬರೆದು, ಅದಕ್ಕೆ ಕಮಲಾಪೀಡನು ತಂದುಕೊಟ್ಟ ಕಾಗದವನ್ನು ಜೋಡಿಸಿ, ಮುದ್ರೆಮಾಡಿಸಿ, ಇಬ್ಬರು ಸವಾರರನ್ನು ಕರೆದು ಅವರ ಕೈಯಲ್ಲಿ ಕೊಟ್ಟು, ಹೇಳಬೇಕಾದುದನ್ನೆಲ್ಲ ಹೇಳಿ ಕಳುಹಿಸಿದನು. ಅವರು ನೆಟ್ಟನೆ ಪಾಟಲೀಪುತ್ರಕ್ಕೆ ಹೋಗಿ ರಾಕ್ಷಸನಿಗೆ ಕಾಗದವನ್ನು ಕೊಟ್ಟರು. ಅಮಾತ್ಯನು ಅದನ್ನು ಒಡೆದು ನೋಡಿದನು.

ಅದರಲ್ಲಿ—ರಾಜಾಧಿರಾಜರಾದ ನಂದಸಾರ್ವಭೌಮರಿಗೆ—ತಮ್ಮ ಆಶ್ರಿತ ಕಾಶೀರಾಜನು ಮಾಡುವ ವಿಜ್ಞಾಪನೆ.

ನಾನೂ ತಾವೂ ಒಂದೆ ಎಂಬುದನ್ನರಿಯದೆ ಪರ್ವತೇಶ್ವರನು ತನಗೆ ಸಹಾಯ ಮಾಡಬೇಕೆಂದು ತನ್ನ ರಾಯಭಾರಿಯೊಡನೆ ನನಗೊಂದು ಕಾಗದವನ್ನು ಬರೆದು ಕಳುಹಿಸಿದ್ದಾನೆ. ಅದನ್ನು ಇದರೊಂದಿಗೆ ಇಟ್ಟು ತಮಗೆ ಕಳುಹಿಸಿರುತ್ತೇನೆ, ಈ ವಿಷಯದಲ್ಲಿ ಮುಂದೆ ಹೇಗೆ ನಡೆದುಕೊಳ್ಳಬೇಕು ಎಂಬುದಕ್ಕೆ ಕೂಡಲೆ ಈ ಕಾಗದವನ್ನು ತಂದವರ ಕೈಯಲ್ಲೇ ಉತ್ತರವನ್ನು ಕೊಟ್ಟು ಕಳುಹಿಸಬೇಕು.

ಇತಿ ತಮ್ಮ ವಿಧೇಯ ಕಾಶೀರಾಜ.

ಕಾಗದವನ್ನು ನೋಡಿ ನಕ್ಕು, ರಾಕ್ಷಸನು ತಲೆಯನ್ನಾಡಿಸಿ, ಆಗಲೆ ಒಂದು ಕಾಗದವನ್ನು ಬರೆದು ಮುದ್ರೆಹಾಕಿ ಆ ದೂತರ ಕೈಯಲ್ಲಿ ಕೊಟ್ಟು, "ಇದನ್ನು ಈ ದಿನವೆ ನಿಮ್ಮ ಅರಸರ ಕೈಗೆ ಮುಟ್ಟಿಸಿರಿ", ಎಂದು ಹೇಳಿ ಕಳುಹಿಸಿದನು.

ಕಮಲಾಪೀಡನು ತನ್ನ ಗೂಢಚಾರನ ಮುಖದಿಂದ ಆಸ್ಥಾನದಿಂದ ತಾನು ಹೊರಟು ಬಂದ ಮೇಲೆ ನಡೆದ ವಿಷಯಗಳನ್ನು ತಿಳಿದುಕೊಂಡು, ತಿಳಿಯದವನಂತೆ ಸುಮ್ಮನೆ ಇದ್ದನು.

ಪಾಟಲೀಪುರಕ್ಕೆ ಹೋಗಿದ್ದ ದೂತರು ಒಂದು ಕಾಶೀರಾಜನ ಸನ್ನಿಧಿಯಲ್ಲಿ ತಂದಿದ್ದ ಕಾಗದವನ್ನು ಒಪ್ಪಿಸಿದರು; ಅದರಲ್ಲಿ—

ಪರಮ ಪ್ರಿಯರಾದ ಕಾಶೀರಾಜರಿಗೆ ನಂದರು ಮಾಡುವ ನಮಸ್ಕಾರಗಳು.

ನೀವು ಕಳುಹಿಸಿದ ಕಾಗದಗಳು ಕೈಸೇರಿ ಅಭಿಪ್ರಾಯವಾಯಿತು. ನಮ್ಮೊಳಗಣ ಮಿತ್ರತ್ವವನ್ನು ಪರ್ವತೇಶ್ವರನು ತಿಳಿಯದೆ ಹೀಗೆ ನಿಮ್ಮ ಸಹಾಯವನ್ನು ಕೇಳಿದುದು ಉತ್ತಮವಾಯಿತು: ಇದೊಂದು ನಮಗೆ ಅನುಕೂಲವೆ. ನೀವು ಪರ್ವತೇಶ್ವರನ ಅಭಿಪ್ರಾಯಕ್ಕೆ ಒಪ್ಪಿ ಮಧ್ಯಮಾರ್ಗದಲ್ಲಿ ಹೋಗಿ ಇಳಿದುಕೊಳ್ಳಿರಿ. ನಿಮ್ಮನ್ನು ಎದುರುಗೊಳ್ಳಲಿಕ್ಕೆ ಚಂದ್ರಗುಪ್ತನು ಬಂದಾನು; ಆಗಲೆ ಅವನನ್ನು ಸರಿಮಾಡಿಬಿಡಿರಿ. ಅಲ್ಲದೆ ಮಲಯಕೇತು ಬಂದನೆಂದಾದರೆ ಸೆರೆಹಿಡಿದು ನಮ್ಮ ಕಡೆಗೆ ಕಳುಹಿಸಿರಿ: ಬೇರೆ ಯಾರಾದರೂ ಬಂದರೆ, ಒಡಂಬಟ್ಟು ಹೋಗಿ ಪರ್ವತರಾಯನ ಸೇನೆಯಲ್ಲಿದ್ದುಕೊಂಡು, ಸಮಯವನ್ನು ನೋಡಿ ಚಂದ್ರಗುಪ್ತನನ್ನು ಕೊಂದುಬಿಡಿರಿ. ನಿಮಗೆ ನಾವು ಹೆಚ್ಚು ಬರೆಯಬೇಕಾದುದಿಲ್ಲವಷ್ಟೆ!

ಇತಿ ನಂದ ಸಾರ್ವಭೌಮ.

ಹೀಗೆ ಬರೆದಿರುವುದನ್ನು ನೋಡಿ ಕಾಶೀರಾಜನು ಮಂತ್ರಿಯೊಡನೆ ಆಲೋಚಿಸಿ, ಬಳಿಕ ಕಮಲಾಪೀಡನನ್ನು ಕರೆಯಿಸಿ—"ರಾಯಭಾರಿಗಳೆ! ಸರ್ವಗುಣಸಂಪನ್ನರೂ ನಮ್ಮ ಪರಮ ಆಪ್ತರೂ ಆದ ಪರ್ವತೇಶ್ವರರೆ ಈ ರೀತಿಯಾಗಿ ಕಾಗದವನ್ನು ಬರೆದ ಮೇಲೆ ನಾವು ಅದರಂತೆಯೆ ನಡೆದುಕೊಳ್ಳಬೇಕಷ್ಟೆ? ಸೇನಾಸಮೇತರಾಗಿ ನಾಳೆಯೆ ಹೊರಡುತ್ತೇವೆ; ಇದನ್ನು ನೀವು ನಿಮ್ಮ ರಾಯರಿಗೆ ತಿಳಿಸಬಹುದು" ಎಂದನು.

"ಈ ವಿಷಯವಾಗಿ ನಾನು ಈಗಲೆ ಕಾಗದವನ್ನು ಬರೆಯುತ್ತೇನೆ; ಉತ್ತರ ಬಂದ ಕೂಡಲೆ ಬಂದು ತಿಳಿಸುತ್ತೇನೆ" ಎಂದು ರಾಯಭಾರಿ

ಹೊರಟು ಬಿಡಾರಕ್ಕೆ ಬಂದು, ಅಲ್ಲಿ ನಡೆದ ವಿಷಯಗಳನ್ನೆಲ್ಲ ಒಂದು ಕಾಗದದಲ್ಲಿ ಬರೆದು ಒಬ್ಬ ಚಾರನ ಕೈಯಲ್ಲಿ ಕೊಟ್ಟು ಚಾಣಕ್ಯನಿಗೆ ಕಳುಹಿಸಿದನು. ಮರುದಿನ ಕಾಶೀರಾಜನು ಕಮಲಾಪೀಡನನ್ನು ಕರೆದು—"ಏನಯ್ಯಾ! ಉತ್ತರವು ಬಂತೆ?" ಎಂದು ಕೇಳಿದನು. ಅದಕ್ಕವನು—"ನಾಳೆನಾಡಿದು ಬಂದೀತು; ಬಂದ ಕೂಡಲೆ ಅರಿಕೆಮಾಡುತ್ತೇನೆ" ಎಂದನು. ಹಾಗೆಯೆ ಇನ್ನೊಂದು ದಿನ ಕೇಳಲು—"ಬರಲಿಲ್ಲ; ಏನೊ ಹೆಚ್ಚು ಕೆಲಸದಲ್ಲಿ ಬಿದ್ದಿರುವರೆಂದು ತೋರುತ್ತದೆ; ಬಂದೀತು, ಬಂದೀತು" ಎಂದು ಅವನನ್ನು ಹೊರಡಲಿಕ್ಕೆ ಬಿಡದೆ ಕಾಲಹರಣ ಮಾಡುತಿದ್ದನು.

ಕಮಲಾಪೀಡನ ದೂತರು ಬಂದು ಚಾಣಕ್ಯನಿಗೆ ಕಾಗದವನ್ನು ಕೊಟ್ಟರು. ಅವನು ಅದನ್ನು ಒಡೆದು ನೋಡಿ, ತಲೆಯನ್ನು ಅಲ್ಲಾಡಿಸಿ—"ಇದರಿಂದ ನಂದರಿಗೆ ಒಂದು ಸಹಾಯವು ತಪ್ಪಿದಹಾಗಾಯಿತು; ಹೂಂ! ಈ ನಂದರು ಎಲ್ಲಿ ಹೋದಾರು?" ಎಂದನು.

## ೧೪. ಕ್ಷಪಣಕನ ಪರೀಕ್ಷೆ.

ಅಮಾತ್ಯ ರಾಕ್ಷಸನು ತನ್ನ ಮನೆಯಲ್ಲಿ ಕುಳಿತುಕೊಂಡು ಏನೋ ಆಲೋಚಿಸುತಿದ್ದನು. ಆಗ ಪರ್ವತರಾಯನ ಸೇನೆಯಿಂದ ತಲೆತಪ್ಪಿಸಿಕೊಂಡು ಹೊರಟ ಗೂಢಚಾರರು ಬಂದು, ಜೋಗಿವೇಷಧಾರಿಯ ಮೂಗು ಕೊಯಿದುದನ್ನೂ, ಎಂಟು ಮಂದಿ ವರ್ತಕರನ್ನು ಕಾವಲಿಟ್ಟು ಹೊರಡಿಸಿದುದನ್ನೂ ಅರಿಕೆ ಮಾಡಿದರು.

ಇದನ್ನು ಕೇಳಿ ಅಮಾತ್ಯನು "ಅಃ! ಇದುವರೆಗೆ ನನ್ನ ಭೇದೋಪಾಯವು ಹೀಗಾದುದಿಲ್ಲ! ಈಗ ಮಾತ್ರ ಹೀಗಾಗಲು ಕಾರಣವೇನು?" ಎಂದು ಹೀಗೆ ಯೋಚಿಸಿ ನೋಡಿ, "ಹೂಂ!" ಎಂದು ಅಲ್ಲಿಂದ ಎದ್ದು ಹೋಗಿ ಒಬ್ಬ ಬ್ರಾಹ್ಮಣನನ್ನು ಕರೆದು ಗುಟ್ಟಾಗಿ ಏನೇನೊ ಹೇಳಿ ಕಳುಹಿಸಿದನು.

ಇತ್ತಲಾಗೆ ತನ್ನ ಎಲೆಮನೆಯ ಜಗುಲಿಯ ಮೇಲೆ ಕ್ಷಪಣಕನು ಮೂಗಿನ ತುದಿಯಲ್ಲಿ ದೃಷ್ಟಿಗಳನ್ನಿಟ್ಟುಕೊಂಡು ಕುಳಿತಿದ್ದನು. ಆ

ಸಮಯದಲ್ಲಿ ಒಬ್ಬನು ಬಂದು, "ಇವನು ಎಲ್ಲಿಗೆ ಹೋಗುತ್ತಾನೆ? ಏನು ಮಾಡುತ್ತಾನೆ? ಇಲ್ಲಿಗೆ ಯಾರು ಬರುತ್ತಾರೆ?" ಎಂಬುದನ್ನು ತಿಳಿಯಬೇಕೆಂದು ಅಡಗಿ ನಿಂದು ನೋಡುತಿದ್ದನು. ಒಂದು ದಿನವಾಯಿತು, ಎರಡು ದಿನಗಳಾದುವು, ಮೂರು ದಿನಗಳಾದುವು; ಸನ್ಯಾಸಿ ಕದಲುವುದೆ ಇಲ್ಲ! ಅನ್ನ ನೀರೂ ಇಲ್ಲ!

ನೋಡುತ್ತಾನೆ: ಮನಸ್ಸಿನಲ್ಲೆ ಹೇಳುತ್ತಾನೆ—"ಇವನು ಎಲ್ಲವರ ಹಾಗೆ ಸಾಮಾನ್ಯನಲ್ಲ: ಬಹುಶಃ ಆರೂಢ ಸನ್ಯಾಸಿಯಾಗಿರಬೇಕು. ಆದರೂ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು" ಎಂದು ನಿಶ್ಚಯಿಸಿ ಬುದ್ಧಮತದವರ ವೇಷವನ್ನು ಧರಿಸಿ ಹೋಗಿ, ಸನ್ಯಾಸಿಗೆ ಪ್ರದಕ್ಷಿಣೆ ಬಂದು ಸಮಸ್ಕರಿಸಿ, ಕೈಜೋಡಿಸಿ ನಿಂತುಕೊಂಡನು.

ಸ್ವಲ್ಪ ಸಮಯದಲ್ಲಿ ಕ್ಷಪಣಕನು ಸಮಾಧಿಯನ್ನಿಳಿಸಿ ಬಂದವನನ್ನು ನೋಡಿ, ತನ್ನ ಮಯೂರಪಿಂಛದಿಂದ—"ಕುಳಿತುಕೊ, ಏನು ಬಂದೆ?" ಎಂದು ಸನ್ನೆಯಿಂದ ಕೇಳಿದನು.

ಅವನು—"ಗುರುವೆ! ಈ ಸಂಸಾರವೆಂಬೊಂದು ಕಣ್ಣಿಬಲೆಯಲ್ಲಿ ಸಿಕ್ಕಿಬಿದ್ದು ಒದೆದಾಡಿಯೊದೆದಾಡಿ ಸಾಕುಸಾಕಾಯಿತು; ಪಾದವನ್ನು ಆಶ್ರಯಿಸಿದರೆ ಏನಾದರೂ ಬಿಡುಗಡೆಯ ದಾರಿಯಾದೀತು ಎಂದು ಬಂದೆನು; ದಯಮಾಡಿ ಮೌನವನ್ನು ಬಿಟ್ಟು ಉಪದೇಶವನ್ನು ಕೊಟ್ಟು, ನನ್ನನ್ನು ಉದ್ಧರಿಸಬೇಕು" ಎಂದು ಕಾಲುಗಳನ್ನು ಹಿಡಿದುಕೊಂಡನು.

ಕ್ಷಪಣಕನು ಅವನ ಮೋರೆಯನ್ನು ನೋಡಿ, ಹಣೆಯಲ್ಲಿ ಬೊಟ್ಟಿನ ಕಲೆ ಇರುವುದನ್ನು ಕಂಡು, "ಹೋ! ಇವನು ಬ್ರಾಹ್ಮಣನು, ಬುದ್ಧಮತಸ್ಥನಲ್ಲ, ರಾಕ್ಷಸನಿಂದ ಕಳುಹಿಸಲ್ಪಟ್ಟವನು" ಎಂದು ತಿಳಿದುಕೊಂಡು—"ಎಲೈ ಆಗಂತುಕನೆ! ನಿನ್ನನ್ನು ನೋಡಿದರೆ ಮಹಾಗುರುಭಕ್ತನಂತೆ ತೋರುತ್ತಿರುವೆ; ನೀನು ದಿಗಂಬರ ಸಿದ್ಧಾಂತೋಪದೇಶವನ್ನು ಹೊಂದುವುದಕ್ಕೆ ಯೋಗ್ಯನು; ಆದಿಸಂಸ್ಕಾರದಲ್ಲಿ ನಿನಗೆ ಯಾವ ಸಂಪ್ರದಾಯದಿಂದ ಉಪದೇಶವನ್ನು ಮಾಡಿದ್ದಾರೆ?" ಎಂದು ಕೇಳಿದನು. ಅದಕ್ಕವನು ತಬ್ಬಿಬ್ಬಾಗಿ ಏನೇನೊ ಹೇಳಿಬಿಟ್ಟನು.

ಕ್ಷಪಣಕನು "ಸರಿ" ಎಂದು ಒಪ್ಪಿದವನಂತೆ ತೋರಿಸಿಕೊಂಡು, ತನ್ನ ಪಿಂಛಸಮ್ಮಾರ್ಜನೆಯಿಂದ ಅವನ ದೇಹವನ್ನು ಅಭಿಮಂತ್ರಿಸಿ, ತಲೆಯನ್ನು ಬೋಳಿಸಿ, ಇದ್ದ ಬಟ್ಟೆಬರೆಗಳನ್ನೆಲ್ಲ ದಾರಿಹೋಕರಿಗೆ ದಾನ ಕೊಡಿಸಿ, ಅವನ ಒಂದೊಂದು ಕೈಗೂ ಒಂದು ನವಿಲುಗರಿಯ ದೊಂದೆಯನ್ನು ಕೊಟ್ಟು, ಅನ್ನಪಾನಗಳಿಗಾಗಿ ಹಳೆಯದೊಂದು ಕಪ್ಪರೆಯನ್ನು ನೀಡಿ,—"ಮನಸ್ಸು ನೆಲೆನಿಲ್ಲುವ ವರೆಗೆ ಇಲ್ಲಿಯೆ ಇದ್ದು ಚೈತ್ಯವಂದನಾದಿಗಳನ್ನು ಮಾಡಿಕೊಂಡು ಪುನೀತನಾದರೆ ಮುಂದೆ ನೀನೆ ಈ ಪೀಠಕ್ಕೆ ಬರುವೆ: ಪ್ರತಿದಿನವೂ ಬೆಳಗ್ಗೆ ಎದ್ದು ನಮಗೆ ಹನ್ನೆರಡು ಬಾರಿ ವಂದನೆಗಳನ್ನು ಮಾಡಬೇಕು; ನೂರೆಂಟುಬಾರಿ ಚೈತ್ಯವಂದನೆಗಳನ್ನು ಮಾಡಬೇಕು; ಆ ಮೇಲೆ ಭಿಕ್ಷೆ. ಇದುವೆ ರೀತಿಯಾಗಿ ಎರಡು ಹೊತ್ತು ಮಾಡುತ್ತ ಬರಬೇಕು" ಎಂದು ಉಪದೇಶಿಸಿ ಧ್ಯಾನಾಸಕ್ತನಾದನು.

ಇದನ್ನೆಲ್ಲ ನೋಡಿ ಅವನು—"ಅಯ್ಯಯ್ಯೋ! ನನಗೆ ಹಿಡಿದ ಶನಿಯೇ! ಈ ಕೆಲಸವು ಯಾಕೆ ಬೇಕಾಗಿತ್ತು?" ಎಂದು ನೆನಸಿ, "ಆಗಲಿ, ನೋಡುವೆನು" ಎಂದು ಒಂದೆರಡು ದಿನ ಮಾಡಿದನು. ಕಡೆಗೆ ಅವನಿಗೆ ಸಾಕುಸಾಕಾಗಿ ಹೋಯಿತು; ಅತ್ತಿತ್ತ ನೋಡಿದನು. ಹೇಳದೆಯೆ ಜಾರಿದನು. ಆದರೆ ಮಾಡುವುದೇನು? ಬಟ್ಟೆಯೂ ಇಲ್ಲ; ಏನೂ ಇಲ್ಲ; ಊರಿಗೆ ಬರುವುದಕ್ಕೆ ನಾಚಿಕೆಯಾಯಿತು: ಕಾಡಿಗೆ ಓಡಿಹೋದನು. ಬಳಿಕ ಸಾಯಂಕಾಲವಾದ ಮೇಲೆ ತನ್ನ ಮನೆಗೆ ಬಂದು, ಉಡಿಗೆತೊಡಿಗೆಗಳನ್ನು ಧರಿಸಿಕೊಂಡು ರಾಕ್ಷಸನಲ್ಲಿಗೆ ಹೋಗಿ, ನಡೆದ ವಿಷಯಗಳನ್ನೆಲ್ಲ ಹೇಳಿ, "ಎಳ್ಳಿನಷ್ಟಾದರೂ ಅವನಲ್ಲಿ ಕಪಟವಿಲ್ಲ; ನಿಜವಾಗಿಯೂ ವಿರಕ್ತನೆ ಸರಿ" ಎಂದು ವಿಜ್ಞಾಪಿಸಿದನು.

ಇದನ್ನು ಕೇಳಿ ಅಮಾತ್ಯನಿಗೆ ಕ್ಷಪಣಕನ ಮೇಲಿದ್ದ ಸದ್ಯದ ಅನುಮಾನವು ಹೋಗಿ ಮೊದಲಿಗಿಂತಲೂ ನಂಬುಗೆ ಹೆಚ್ಚಾಯಿತು. "ಇನ್ನು ಏನಾದರೂ ಬೇರೆ ಉಪಾಯವನ್ನು ನೋಡಬೇಕು" ಎಂದು ಯೋಚಿಸುತಿದ್ದನು.

## ೧೫. ನಂದರ ವಿಜಯ ಪ್ರಯಾಣ.

ಅಮಾತ್ಯನು ಆಲೋಚನೆಯ ಮೇಲೆ ಆಲೋಚನೆಯಿಂದ "ಹಾಗೆ ಮಾಡಿಬಿಡುವುದೊ? ಹೀಗೆ ಮಾಡಿಬಿಡುವುದೊ?" ಎಂದು ಯೋಚಿ

ಸುತ್ತಿರುವಾಗ ರಾಜದೂತರು ಓಡಿ ಬಂದು—"ಬುದ್ಧೀ! ಇನ್ನು ನಿಧಾನ ವನ್ನು ಮಾಡಿದರಾಗದು; ವೈರಿಗಳ ಸೈನ್ಯವು ನಮ್ಮ ಗಡಿಸೀಮೆಯಲ್ಲಿ ಬಂದು ದೂಡುತ್ತಿದೆ; ಬೇಗನೆ ಮುಂದಣ ಆಲೋಚನೆಯನ್ನು ಮಾಡ ಬೇಕು" ಎಂದು ವಿಜ್ಞಾಪಿಸಿಕೊಂಡನು.

ರಾಕ್ಷಸನದನ್ನು ಕೇಳಿ, ಹೀಗೆ ಮೇಲೆ ನೋಟಿ, ಕೂಡಲೆ ಎದ್ದು ನಂದರ ಬಳಿಗೆ ಬಂದು, ಯುದ್ಧದ ವಿಷಯವನ್ನು ನಿಶ್ಚಯಿಸಿ, ಕ್ಷಪಣಕನ ಬಳಿಗೆ ಹೋಗಿ ಅವನನ್ನು ಕಂಡು—"ಸ್ವಾಮಿ! ನಾಳೆ ತುಲಾಲಗ್ನದಲ್ಲಿ ವಿಜಯಪ್ರಯಾಣವೆಂದು ನಿಶ್ಚಿತವಾಗಿದೆ; ಆ ದಿನ ನಂದರಿಗೆ ತಾರಾಬಲ ಗಳು ಹೇಗಿವೆ?" ಎಂದು ಕೇಳಿದನು.

ಕ್ಷಪಣಕನು ಗುಣಿಸಿ ನೋಡಿ—"ಅಮಾತ್ಯರೆ! ಇದಕ್ಕಿಂತಲೂ ವೃಶ್ಚಿಕ ಲಗ್ನವು ಒಳ್ಳೆಯದು; ಯಾಕೆಂದರೆ, ಲಗ್ನಾಧಿಪತಿ ಶತ್ರುಸ್ಥಾನ ವನ್ನು ನೋಡುತ್ತಿರುವುದರಿಂದ ಅಂದು ಹೊರಟರೆ ಶತ್ರುಕ್ಷಯವಾದೀತು." ಎಂದನು.

ರಾಕ್ಷಸನು ಪುರೋಹಿತನ ಮೋರೆಯನ್ನು ನೋಡಿ—"ಅದುವೆ ಆದೀತು; ಹಾಗೆಯೆ ಮಾಡಿಸಿರಿ," ಎಂದು ಹೇಳಿ, ರಾತ್ರಿ ಬಹಳವಾಯಿ ತೆಂದು ಶಯನಗೃಹಕ್ಕೆ ಹೋದನು.

ಅರುಣೋದಯ ಸಮಯದಲ್ಲಿ ಶತಘ್ನಿಗಳ ಝಾಂಕಾರವು ಕಿವಿ ಗಳನ್ನು ಕಿವುಡು ಮಾಡುತಿರುವದನ್ನು ಕೇಳಿ ರಾಕ್ಷಸನು ನಿದ್ದೆಯಿಂದೆದ್ದು "ಹೋ! ಸುಂದರಗಡದಿಂದ ಶತಘ್ನಿಗಳ ಶಬ್ದವು ಕೇಳಿಸುತ್ತಿದೆ! ಶತ್ರುಸೇನೆ ಬಂದಂತೆ ತೋರುತ್ತಿದೆ!" ಎಂದು ತ್ವರಿತದಿಂದೆದ್ದು ನಂದರ ಬಳಿಗೆ ಬಂದನು. ಆಗ ಕೆಲವರು ಸವಾರರು ಓಡಿಬಂದು ಕುದುರೆಗಳಿಂದ ಹಾರಿ, ತಮ್ಮ ತಮ್ಮಲ್ಲಿರುವ ಕಾಗದಗಳನ್ನು ಒಪ್ಪಿಸಿದರು. ರಾಕ್ಷಸನು ಅವುಗಳನ್ನು ಓದಿಕೊಂಡು ನಂದರೊಡನೆ—"ಇದು ಡಿಂಗಿರಾತ ಭದ್ರಭಟರುಗಳಿಂದ ಬಂದ ಕಾಗದಗಳು. ಶಕ ಸೇನೆಗೂ ನಮ್ಮ ಸೇನೆಗೂ ಯುದ್ಧವಾಗಿ ನಮ್ಮ ಸೇನೆಯೆ ಮೇಲ್ಗೈಯಾಯಿತಂತೆ; ಆದುದರಿಂದ ಮೂಲಬಲ ಸಮೇತರಾಗಿ ನಾವೀಗಲೆ ಹೊರಟು ಶತ್ರುಗಳ ಮೇಲೆ ಬಿದ್ದು ಸಂಹರಿಸು ವುದಕ್ಕೆ ಇದುವೆ ತಕ್ಕ ಸಮಯವು" ಎಂದನು. ಇದನ್ನು ಕೇಳಿ ನಂದರು

ತಮ್ಮ ತಮ್ಮ ನಿತ್ಯವಿಧಿಗಳನ್ನೆಲ್ಲ ಬೇಗಬೇಗನೆ ತೀರಿಸಿಕೊಂಡು ಸಿದ್ಧರಾಗು ತಿದ್ದರು.

ಬಳಿಕ ಚತುರಂಗ ಸೇನೆಯೊಡನೆ ನವನಂದರೂ, ರಾಕ್ಷಸನೂ, ಸೇನಾನಾಯಕರೂ, ರಾಜಪುತ್ರರೂ, ಸಾಮಂತರೂ ಹೊರಟು, ತಮ್ಮ ತಮ್ಮ ವಾಹನಗಳನ್ನೇರಿ ಬರುತ್ತಿರಲು, ರಣಭೇರೀಕಹಳಾನಿನಾದಗಳು ಭೋರಿಡಲು, ಸೇನಾಪದ ಸಂಘಾತ ಸಂಜಾತ ರೇಣುಜಾತವು ಅಂಬರ ವನ್ನು ತುಂಬಲು, ಕುಂತ ತೋಮರ ಪತಾಕೆಗಳ ತುದಿಗಳು ಚಂದ್ರ ಸೂರ್ಯ ಬಿಂಬಗಳನ್ನು ಕುಟುಕುತ್ತಿರಲು, ಭೂಲೋಕವೆ ಕಂಪಿಸುವಂತೆ ಬಂದು, ಗಂಗಾನದಿಯೂ ಸಂಗಮದಲ್ಲಿಳಿದರು. ಅಮಾತ್ಯನು ಅಲ್ಲಲ್ಲಿ ಸೇನಾಪತಿಗಳು ಮಾಡಿದ ಸಿದ್ಧತೆಗಳನ್ನು ತಾನೆ ಪ್ರತ್ಯಕ್ಷವಾಗಿ ಹೋಗಿ ನೋಡುತ್ತಲೂ, ಬೇಕಾದುವುಗಳನ್ನು ಹೇಳಿಕೊಡುತ್ತಲೂ, ಅಲ್ಲಲ್ಲಿ ಸಂಚರಿ ಸುತ್ತಿದ್ದನು. ಆಗ ನಂದರು ದಕ್ಷಿಣದಿಕ್ಕಿನೊಂದು ಮೂಲೆಯಿಂದ ಏಳು ತ್ತಿರುವ ಹೊಗೆಯನ್ನು ನೋಡಿ, ಅಲ್ಲಿರುವವರನ್ನು ಕರೆದು ಅದೇನೆಂದು ಕೇಳಿದರು. ಅದಕ್ಕಾ ದೂತರು ಕೈಮುಗಿದು, "ಸ್ವಾಮಿ! ಅದು ಅಮಾತ್ಯರ ಅಪ್ಪಣೆಯಂತೆ ರಚಿಸಿದ ಜಪಶಾಲೆ; ಅಲ್ಲಿನ ಬ್ರಾಹ್ಮಣರು ಫಲ ಮಂತ್ರಾಕ್ಷತೆಗಳನ್ನು ಹಿಡಿದುಕೊಂಡು ತಮ್ಮನ್ನು ಕಾಣಬೇಕೆಂದು ಬಂದು ನಿಂದಿರುವರು" ಎಂದು ವಿಜ್ಞಾಪಿಸಿದರು.

ಆಗ ನಂದರು ಆ ಬ್ರಾಹ್ಮಣರನ್ನು ಒಳಗೆ ಕರೆಯಿಸಿ—"ಅಯ್ಯಾ! ಬ್ರಾಹ್ಮಣರೇ! ಎಲ್ಲವನ್ನೂ ಸರಿಯಾಗಿ ಮಾಡಿರಿ; ನಿಮ್ಮ ಜಪದಿಂದ ಬಂದಿ ರುವ ಶತ್ರುಗಳು ಓಡಿಹೋದರೆ ಮುಂದೆ ನಿಮಗೆ ಏನೂ ಕಡಿಮೆಯಿಲ್ಲ" ಎಂದರು. ಅಷ್ಟರಲ್ಲಿಯೆ ನಲದಲ್ಲಿ ಉಡುಗುತ್ತಿರುವ ಜಡೆಗಳಿಂದಲೂ, ಬೆರಳುಗಳಿಗೆ ಸುತ್ತಿಕೊಂಡಿರುವ ಜಪಸರದಿಂದಲೂ, ಮುಖದಲ್ಲಿ ಮೂರು ಗೆರೆಯ ಭಸ್ಮದಿಂದಲೂ ಶೋಭಿಸುತ್ತ ಪವಿತ್ರಧಾರಿಯಾದ ಮುನಿಯೊಬ್ಬನು ಶಿಷ್ಯರಿಂದೊಡಗೂಡಿ ಬರುತಿದ್ದನು.

ನಂದರು ಬರುವವರನ್ನು ನೋಡಿ—'ಅವರು ಯಾರು?' ಎಂದು ಕೇಳಿದರು. ಅದಕ್ಕೆ ಆ ಬ್ರಾಹ್ಮಣರು—"ಇವರೆ ಮಾಸೋಪವಾಸಿ ಗಳೆಂದರೆ; ದತ್ತಾತ್ರೇಯ ಋಷಿಗಳು ಪ್ರಯಾಗಕ್ಕೆ ಬರುತ್ತಾರೆ ಎಂಬ

ಸುದ್ದಿ ಕೇಳಿ, ಅಲ್ಲಿಗೆ ಹೋಗಿ, ಅವರನ್ನು ದರ್ಶನಮಾಡಿಕೊಂಡು ಹಿಂದಕ್ಕೆ ಬರುತ್ತಿರುವಾಗ ನಿಮ್ಮ ಸೇನಾಪತಿ ಬಾಗುರಾಯಣನು ಬಹಳವಾಗಿ ಒತ್ತಾಯಪಡಿಸಿದನು; ಆದುದರಿಂದ ಇಲ್ಲಿ ಈ ಶತ್ರುಪಲಾಯನ ಹೋಮಕ್ಕೆ ಆಚಾರ್ಯರಾಗಿ ನಿಲ್ಲಬೇಕಾಯಿತು'' ಎಂದರು.

ನಂದರು ಕೇಳಿ ಪೂಜ್ಯಭಾವದಿಂದ ಎದ್ದು ಬಂದು ಆ ಮುನಿಗೆ ನಮಸ್ಕರಿಸಿ—''ಸ್ವಾಮಿ! ನಾವು ಜಪಶಾಲೆಗೆ ಬಂದು ದೇವತಾದರ್ಶನ ಮಾಡಬಹುದೆ?'' ಎಂದು ಕೇಳಿದರು. ಅದಕ್ಕೆ ಮಾಸೋಪವಾಸಿ— ''ಬರಬಹುದು! ಪೂರ್ಣಾಹುತಿಯಾಗುವಾಗ ತಿಳಿಸುತ್ತೇವೆ'' ಎಂದು ಫಲ ಮಂತ್ರಾಕ್ಷತೆಗಳನ್ನು ಕೊಟ್ಟು, 'ಜಪಶಾಲೆಯ ಸುತ್ತುಮುತ್ತಲೂ ಶೂದ್ರರು ಬಾರದಂತೆ ಸ್ವಲ್ಪ ಜಾಗ್ರತೆ ತೆಗೆದುಕೊಳ್ಳಬೇಕು' ಎಂದು ಹೇಳಿ, ಆಶೀರ್ವದಿಸಿ, ಪುನಃ ಹೋಮದ ಶಾಲೆಗೆ ಹಿಂದಿರುಗಿದರು. ನಂದರು ಹಾಗೆಯೆ ತಮ್ಮ ಕಡೆಯವರಿಗೆ ನೇಮಿಸಿದರು.

ಆಗ ಸಿದ್ಧಾರ್ಥಕನು ಬಾಗುರಾಯಣನೊಡನೆ—''ಸೇನಾಪತಿಗಳೆ! ಇಂದು ನಾಳೆಯೊಳಗೆ ಘೋರ ಯುದ್ಧವಾಗುವುದೇನೊ ಸಿದ್ಧವು: ಆದರೆ ಮುಂದಣ ಜಯಾಪಜಯಗಳ ವಿಷಯವನ್ನು ದೇವರೆ ಬಲ್ಲನು. ಯಾಕೆಂದರೆ, ಆ ಕಡೆಯಲ್ಲಿ ಚಾಣಕ್ಯನೊಬ್ಬನು ಬಲವಾಗಿದ್ದಾನೆ. ನಮ್ಮ ಅಮಾತ್ಯರೇನೂ ಸಾಮಾನ್ಯರಲ್ಲ; ಆದರೂ ತೂಗಿ ನೋಡಿದರೆ ಅವನೆ ಒಂದು ತೂಕ ಬಲವು. ಈಗ ನಾನೊಂದು ವರ್ತಮಾನವನ್ನು ಕೇಳಿದ್ದೇನೆ. 'ನಂದರಿಗೆ ಅಮಾತ್ಯನು ಹೇಗೊ ಹಾಗೆ ನನಗೆ ಬಾಗುರಾಯಣನು' ಎಂದು ಚಂದ್ರಗುಪ್ತನು ಪರ್ವತರಾಯನೊಡನೆ ಹೇಳಿದ್ದಾನೆ ಎಂದು ವರ್ತಮಾನವಿದು ನಿಜವೆ. ಬಹುಶಃ ರಾಜ್ಯವು ತನ್ನ ಸ್ವಾಧೀನವಾದ ಮೇಲೆ ನಿಮ್ಮನ್ನೆ ತನ್ನ ಮಂತ್ರಿಪದದಲ್ಲಿ ನೇಮಿಸಬೇಕೆಂದು ಅವನ ಮನಸ್ಸಿನಲ್ಲಿದೆ ಎಂದು ತೋರುತ್ತದೆ; ನೀವಾದರೂ ಸಿಕ್ಕುವುದನ್ನು ಬಿಡುವುದು ಯಾಕೆ? ರಾಕ್ಷಸನು ಎಷ್ಟೆ ಗಟ್ಟಿಗನಾಗಿರಲಿ; ಚಾಣಕ್ಯನ ಎದುರಿಗೆ ಇವನ ಬೇಳೆ ಬೇಯಲಾರದು ಎಂಬುದು ಇದುವರೆಗೆ ನಡೆದ ವಿಷಯಗಳಿಂದಲೆ ತಿಳಿದು ಬರುತ್ತಿದೆಯಲ್ಲ? ನನ್ನ ಮನಸ್ಸಿಗೆ ಕಂಡುದನ್ನು ಹೇಳಿಬಿಟ್ಟೆನು; ಕೋಪಿಸಬೇಡಿರಿ; ನಮ್ಮ ಹಾಗಿರುವ ಮದ್ದುಗುದ್ದುವವರಿಗೆಲ್ಲ ಈ ಪಂಚಾಯತಿ ಯಾದರೂ ಯಾಕೆ?'' ಎಂದು ಹೇಳಿದನು.

ಬಾಗುರಾಯಣನು ಮನಸ್ಸಿನಲ್ಲಿ—"ಇವನು ನಮ್ಮ ಗೃಹವೈದ್ಯನಾದರೂ ಆ ಕಡೆಯ ಗುಟ್ಟೆಲ್ಲ ಇವನಿಗೆ ಗೊತ್ತಿದ್ದಂತೆ ತೋರುತ್ತದೆ" ಎಂದು ಆಲೋಚಿಸಿ, ಪ್ರಕಾಶವಾಗಿ—"ವೈದ್ಯನೆ! ನಾವು ರಾಕ್ಷಸನಂತೆ ಚಂದ್ರಗುಪ್ತನಿಗೆ ವೈರಿಗಳಲ್ಲ; ಈಗ ನಾವು ಪ್ರಕಟವಾಗಿ ಅವನಿಗೆ ಸಹಾಯ ಮಾಡಿದರೆ, ನಾಳೆ ಲೋಕವು ನಮ್ಮನ್ನು ಏನೆಂದು ಹೇಳೀತು? ನಾವೆಲ್ಲರೂ ತೋರಿಕೆಗೆ ಯುದ್ಧಮಾಡುವವರಂತೆ ತೋರಿಸಿಕೊಂಡು ನಮ್ಮ ನಮ್ಮಷ್ಟಕ್ಕೆ ಇದ್ದುಬಿಡುತ್ತೇವೆ; ನನ್ನ ವಿಷಯವೆಲ್ಲ ಚಂದ್ರಗುಪ್ತನಿಗೆ ಗೊತ್ತಿದೆ" ಎಂದು ಹೇಳಿ, ಉಳಿದ ಸೇನಾಪತಿಗಳಿಗೂ ತಿಳಿಸಿ, ಎಲ್ಲರನ್ನೂ ಸಮಾಧಾನಪಡಿಸಿದನು. ಈ ವರ್ತಮಾನವು ಕೂಡಲೆ ಚಾಣಕ್ಯನಿಗೆ ಮುಟ್ಟಿತು. ಇದುವೆ ಸಮಯವೆಂದು ಪರ್ವತೇಶ್ವರನು ಚೀನ, ಹೂಣ, ಕಿರಾತಬಲಗಳನ್ನೂ, ತನ್ನ ಸೇನೆಯನ್ನೂ ವೈರಿಗಳ ದುರ್ಗದ ಮೇಲೆ ದಾಳಿಮಾಡಿರೆಂದು ಅಪ್ಪಣೆ ಕೊಟ್ಟು ಕಳುಹಿಸಿದನು.

## ೧೬. ರಾಕ್ಷಸ ಯುದ್ಧ.

ನಂದಸೇನಾಮಧ್ಯದಲ್ಲಿ ಅಮಾತ್ಯ ರಾಕ್ಷಸನು ಅಲ್ಲಲ್ಲಿಗೆ ಹೋಗಿ ಆಯಾ ಸೇನಾಪತಿಗಳನ್ನೂ ಆಶ್ರಿತರಾಜರನ್ನೂ ಹುರಿದುಂಬಿಸುತ್ತಲೂ, ಶತ್ರುಗಳು ಈ ಈ ರೀತಿಯಲ್ಲಿ ಮೇಲೆ ಬಿದ್ದರೆ, ನೀವು ಈ ಈ ರೀತಿಯಲ್ಲಿ ಅವರೊಡನೆ ಹೋರಾಡಬೇಕೆಂದೂ ನೇಮಿಸಿ, ನಂದರ ಬಳಿಗೆ ಬಂದನು.

ಆ ಸಮಯದಲ್ಲಿ ಹೊರಗಣಿಂದ 'ಕೋ!' ಎಂದು ಕೂಗಿ, "ಸ್ವಾಮಿ! ತಡಮಾಡಿದರೆ ಕೆಲಸವು ಕೆಟ್ಟೀತು, ಈಗಲೆ ಹೊರಡಬೇಕು" ಎಂಬ ಕೂಗೊಂದು ಕೇಳಿಸಿತು. ರಾಕ್ಷಸನು ಕೂಡಲೇ ಅದೇನೆಂದು ದೂತರನ್ನು ವಿಚಾರಿಸಲು, ಅವರು ಹೋಗಿ ರಕ್ತದಿಂದ ಒದ್ದೆಯಾದ ವಸ್ತ್ರಗಳನ್ನುಟ್ಟು ಭೂತಗಳಂತೆ ತೋರುತ್ತಿರುವ ಚಾರರಿಬ್ಬರನ್ನು ಬಳಿಗೆ ಕರೆದು ತಂದು ನಿಲ್ಲಿಸಿದರು. ಅವರೊಡನೆ ಅಮಾತ್ಯನು ಏನೆಂದು ಕೇಳಲು—"ಬುದ್ಧೀ! ಹೋಯಿತು! ಸುಂದರಗಡದಲ್ಲಿ ಬೆಳಗಿನಿಂದ ಇದುವರೆಗೂ ನಮ್ಮ ಸೇನೆಗೂ ಶತ್ರುಸೇನೆಗೂ ಮಾರಾಮಾರಿಯಾಗಿ ಹಾಣಾಹಾಣಿ

ಯಾಯಿತು. ಈ ವರೆಗೆ ಎಂಟು ಬಾರಿ ಹೊಯ್ಕೈಯಾಯಿತು! ನೆತ್ತರ ಹಳ್ಳ ಹರಿಯಿತು! ಇನ್ನೂ ಮುಗಿಯಲಿಲ್ಲ! ಆಃ! ಹಾ!'' ಎಂದು ಕಣ್ಣು ಬಿಟ್ಟು ಅಲ್ಲಿಯೆ ಕುಳಿತುಬಿಟ್ಟರು.

ಅಷ್ಟರೊಳಗೆ 'ಓ' ಓ!' ಎಂದು ಕೂಗುತ್ತ ಕುದುರೆಗಳನ್ನೇರಿದ ರಾವುತರಿಬ್ಬರು ಓಡಿ ಬಂದು—''ಅರಸುಗಳೆಲ್ಲಿದ್ದಾರೆ? ಬಂತು! ಬಂತು! ಪಟ್ಟಣಕ್ಕೆ ಬಂತು!'' ಎಂದು ಚೀರಿದರು.

ಆಗ ನಂದರು ಮಂತ್ರಿಯನ್ನು ನೋಡಿ—''ಏನಯ್ಯಾ ಇದು?'' ಎಂದು ಕೇಳಲು; ಅಮಾತ್ಯನು ''ರಾಯರೆ! ಗಲಿಬಿಲಿಯಾಗಬೇಡಿರಿ: ಮುಂದೆ ಬಂದು ಯುದ್ಧಮಾಡುವಂತೆ ತೋರಿಸಿಕೊಂಡು, ಹಿಂದಣಿಂದ ಮೋಸಕೊಡುವ ಆಲೋಚನೆಯಿದು: ಚಿಂತಿಸಬೇಡಿರಿ, ನೀವು ಮೂಲಬಲ ಸಮೇತರಾಗಿ ನಿಂತುಕೊಂಡು ನಾನು ಮಾಡುವ ಯುದ್ಧವನ್ನು ನೋಡಿರಿ; ನಾನು ಸ್ವಾಮಿಭಕ್ತನು ಹೌದಾಗಿದ್ದರೆ, ಇದುವರೆಗೆ ನಿಮ್ಮ ಉಪ್ಪನ್ನ ದಿಂದ ಜೀವಿಸಿದ ಕೃತಜ್ಞತೆ ನನ್ನಲ್ಲಿ ಇರುವುದಾದರೆ, ಅಮಾತ್ಯರಾಕ್ಷಸ ನೆಂಬ ಬಿರುದು ನನಗೆ ಒಪ್ಪುವುದಾದರೆ, ಈಗಲೆ ಶತ್ರುಗಳ ಮೇಲೆ ಎತ್ತಿ ನಡೆದು, ಈ ಕೈಯ ಕರವಾಳವನ್ನು ವೈರಿಗಳ ಎದೆಗುಂಡಿಯ ಬಿಸುನೆತ್ತರಿಂದ ತೊಳೆದು, ವೀರಶ್ರೀಯನ್ನೂ ಜಯಶ್ರೀಯನ್ನೂ ಹಿಡಿದೆಳೆದು ತರುವುದನ್ನು ನೀವು ನೋಡುವಿರಿ'' ಎಂದು ಉಕ್ಕಿನ ಕವಚವನ್ನು ಧರಿಸಿ, ಕಬ್ಬಿಣದ ಕುಲಾವಿಯನ್ನಿಟ್ಟು, ಕೈಯ ಕರವಾಳವನ್ನು ಝಳಪಿಸಿ, ತನ್ನ ಪ್ರೀತಿಯ ಪಂಚವರ್ಣದ ಕುದುರೆಯನ್ನೇರಿ ನಡೆದನು.

ಶತ್ರುಸೈನ್ಯವು ಪ್ರಳಯಕಾಲದ ಮೇಘಪಟಲದಂತೆ ಮೂರು ದಿಕ್ಕುಗಳಿಂದಲೂ ಆಕ್ರಮಿಸಿಕೊಂಡು ಬರುತಿತ್ತು. ರಾಕ್ಷಸನದನ್ನು ನೋಡಿದನು. ಕಣ್ಣುಗಳು ಕೆರಳಿದುವು, ಮೀಸೆಗಳು ಕುಣಿದುವು, ಭುಜ ಗಳು ಹೊಡಕರಿಸಿದುವು. ಒಡನೆಯೆ ಕಟಕಟನೆ ಹಲ್ಲಗಡಿದು, ಸಸೈನ್ಯರಾಗಿ ಶತ್ರುಸೇನೆಯ ಮೇಲೆ ಬಿದ್ದು, ಕಡಿದೂ, ಬಡಿದೂ, ಹೊಡೆದೂ ಕುತ್ತಿ ಯೂ, ಚೆತ್ತಿಯೂ, ಒತ್ತಿಯೂ, ತರಿದೂ, ಇರಿದೂ, ಅರೆದೂ, ಗುದ್ದಿಯೂ, ತಿದ್ದಿಯೂ, ಖಂಡಿಸಿಯೂ, ತುಂಡಿಸಿಯೂ ರಣಭೈರವನಂತೆ ಖಾಡಾ ಖಾಡಿಯಿಂದ ಶತ್ರುವಾಹಿನಿಯನ್ನು ಸಂಹರಿಸುತಿದ್ದನು. ಒಮ್ಮೆ ಹಾರು

ವುದೂ, ಮತ್ತೊಮ್ಮೆ ಅಮರುವುದೂ, ಇನ್ನೊಮ್ಮೆ ಪರಿಬರುವುದೂ, ಮೇಣೊಮ್ಮೆ ಬೀದಿವರಿವುದೂ ಹೀಗೆ ಸಿಮುಷಾರ್ಥದಲ್ಲಿ ಶತ್ರುಸೈನಿಕರ ಕಣ್ಣುಗಳಿಗೆ ಎಲ್ಲಿ ನೋಡಿದರೂ ರಾಕ್ಷಸನೆ ರಾಕ್ಷಸನು!

ಹೇಳುವುದೇನು? ಪೈರಸೈನ್ಯದಲ್ಲಿ ದಿಕ್ಕುಪಾಲಾಗಿ ಕಂಡ ಕಡೆ ಗೋಡುವವರು ಕೆಲವರು, 'ರಾಕ್ಷಸಾ! ಎಂದು ನಿಂದಲ್ಲಿಂದಲೆ ಬಿದ್ದು ಮೂರ್ಛಿತರಾಗುವವರು ಕೆಲವರು, 'ಪ್ರಾಣದಾನಾ' ಎಂದು ಕೂಗುವವರು ಕೆಲವರು, ಕೆಲವರು ಹರಿದಲೆಯವರು, ಕೆಲವರು ಇಳಿನಾಲಗೆಯವರು, ಕೆಲವರು ಪರಿಪೆಯವರು, ಮೂಗಿಲ್ಲದವರು, ಕೈಯಿಲ್ಲದವರು, ಕಾಲಿಲ್ಲದವರು ಹಲಕೆಲವರು; ಹೀಗಾಗಿ ಅಮಿತ್ರಭಟರ ಸೇನೆ ಕಣ್ಮುಚ್ಚಿ ತೆರೆಯುವುದರೊಳಗೆ ಕಣ್ಮಾಯವಾಗಿ ಹೋಯಿತು.

ಈ ಪ್ರಕಾರವಾಗಿ ರಣರಂಗವು ಘೋಷಿಪಟವಾಗಲು ಅಮಾತ್ಯನು ಕುದುರೆಯಿಂದಿಳಿದು ರಣಭೂಮಿಯ ಮಧ್ಯದಲ್ಲಿ ನಿಂದು, ಹಗೆಗಳ ಎದೆಗುಂಡಿಗೆಗಳಿಂದ ಹರಿಯುತ್ತಿರುವ ಕೆನ್ನೆತ್ತರಿಂದ ತಿಲಕವನ್ನಿಟ್ಟು, ಸದ್ಯಕ್ಕೆ ಯುದ್ಧವು ಸಾಕೆಂದು ತನ್ನ ದಂಡಿನೊಡನೆ ನಿಂದಿರುಗಿದನು.

ಜಯಲಕ್ಷ್ಮಿಯನ್ನು ಕೈಸೆರೆಹಿಡಿದುಕೊಂಡು ಬರುತ್ತಿರುವ ಅಮಾತ್ಯನನ್ನು ನೋಡಿ, ನಂದರು ಆನೆಗಳಿಂದ ಇಳಿದು ಬಂದು, ದೂರದಿಂದಲೆ ಕೈಮುಗಿಯುತ್ತಿರುವ ರಾಕ್ಷಸನನ್ನು ಆಲಿಂಗಿಸಿಕೊಂಡು—"ಅಮಾತ್ಯರೆ! ನೀವಿಂದು ಬಹಳ ಕೆಲಸ ಮಾಡಿದಿರಿ; ನಮ್ಮ ಪುಣ್ಯದಿಂದಲೆ ನೀವು ನಮಗೆ ದೊರಕಿದಿರಿ, ನೀವೊಬ್ಬರಿದ್ದರೆ ನಮಗೆ ಯಾವ ಭಯವೂ ಇಲ್ಲ," ಎಂದು ಹೇಳಿ, ತಾವೇ ಕವಚವನ್ನು ಬಿಚ್ಚಿ, ದೇಹದಲ್ಲಾದ ಶಸ್ತ್ರದ ಗಾಯಗಳಿಗೆ ಔಷಧಗಳನ್ನು ಲೇಪಿಸಿ, "ನೀವೀಗ ಸ್ವಲ್ಪ ವಿಶ್ರಮಿಸಿಕೊಳ್ಳಬೇಕು; ಬಂದುವೇಳೆ ಪುನಃ ಶತ್ರುಗಳು ಈಗಲೆ ಬಂದು ಬಿಟ್ಟರೆ ನಾವೇ ಹೋಗುತ್ತೇವೆ" ಎಂದರು.

ರಾಕ್ಷಸನದಕ್ಕೆ—ಅಲ್ಲ! ಅಲ್ಲ! ಶತ್ರುಗಳು ಓಡಿಹೋದರು ಎಂದು ಎಣಿಸಕೂಡದು. ಇದರಲ್ಲಿ ಏನಾದರೂ ಒಂದು ಕುಹಕವು ಇದ್ದರೂ ಇರಬಹುದು; ಆದುದರಿಂದ ನಾನೇ ಹೋಗಬೇಕಾಗುತ್ತದೆ.

ನಂದರು—ನೀವಿಲ್ಲದೆ ಯಾವುದೂ ಇಲ್ಲ; ಆದರೆ ತತ್ಕಾಲಕ್ಕೆ ಮಾಡುವ ಕಾರ್ಯವನ್ನು ಸೇನಾನಾಯಕರಿಗೆ ನೇಮಿಸಿ, ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಬೇಕು.

ರಾಕ್ಷಸನು 'ಆಗಲಿ' ಎಂದು ಸಮ್ಮತಿಸಿ ತನ್ನ ಶಿಬಿರಕ್ಕೆ ಹೋದನು. ಬಹಳ ಆಯಾಸವಾದುದರಿಂದ ಅಂದು ಸಂಧ್ಯಾಕಾಲದಲ್ಲಿ ಎಂದಿಗಿಂತಲೂ ಬೇಗನೆ ಊಟಗೀಟಗಳನ್ನೆಲ್ಲ ಮುಗಿಸಿ. ಸೇನಾಪತಿಗಳಿಗೆ ಎಚ್ಚರಿಕೆಯನ್ನು ಹೇಳಿ ತಾನು ನಿದ್ರಾಸಕ್ತನಾದನು.

## ೧೭. ಸಂಧಿಯ ಪ್ರಸ್ತಾಪ.

ಪರ್ವತರಾಜನು ತನ್ನ ಗೂಡಾರದಲ್ಲಿ ಇರುತ್ತಿರಲು, ಇಬ್ಬರು ದೂತರು ತುರಗಾರೂಢರಾಗಿ ಬಂದು, ಕುದುರೆಗಳಿಂದಿಳಿದು, ಕೈಮುಗಿದು ಕಾಗದವನ್ನು ಮುಂದಿಟ್ಟರು.

ಅದರಲ್ಲಿ—ಚಿರಂಜೀವಿ ಪರ್ವತೇಶ್ವರನಿಗೆ—ಅಂಗಾರವರ್ಮನು ಮಾಡುವ ಆಶೀರ್ವಾದಂಗಳು.

ಈಗ ದಶಾರ್ಣ ಮತ್ತು ಶೂರಸೇನಾಧಿಪತಿಗಳಿಂದ ನಮ್ಮ ದೇಶವು ಆಕ್ರಮಿಸಲ್ಪಟ್ಟಿದೆ; ಸಾವಕಾಶ ಮಾಡಿದರೆ ಮೋಸವಾಗಿ ಹೋದೀತು; ನಂದರೊಡನೆ ಸಂಧಿಮಾಡಿಯಾದರೂ ಕೂಡಲೆ ಹಿಂದಕ್ಕೆ ಬರಬೇಕು; ಹೆಚ್ಚಿಗೆ ಬರೆಯಲಿಕ್ಕೆ ಈಗ ನನ್ನ ಮನಸ್ಸೆಂಬುದು ಮರದ ತುದಿಯಿಂದ ಕೈಕಾಲುಗಳನ್ನು ಬಿಟ್ಟವರ ಮನಸ್ಸಿನಂತಿದೆ.

**ಇತಿ ಅಂಗಾರವರ್ಮನು ಮಾಡುವ ಆಶೀರ್ವಾದ**

ಎಂದು ಇತ್ತು.

ಕಾಗದವನ್ನು ನೋಡಿ ಪರ್ವತೇಶ್ವರನು ಮಂತ್ರಿಯೊಡನೆ— "ನೋಡು, ನಮ್ಮ ಪೂರ್ವ ವೈರಿಗಳಾದ ಆ ಅರಸರು ಸಮಯವನ್ನು ಸಾಧಿಸಿ, ಈಗ ನಮ್ಮ ಮೇಲಣ ಹಗೆಯನ್ನು ತೀರಿಸಿಕೊಳ್ಳಲಿಕ್ಕೆ ಬಂದಿದ್ದಾರೆ. ಚಾಣಕ್ಯನ ಮಾತಿನ ಮೇಲೆ ಅರ್ಧರಾಜ್ಯದ ಆಸೆಯಿಂದ ನಾವು ಇಲ್ಲಿಗೆ ಬಂದು ಸಿಕ್ಕಿಬಿದ್ದು ಹೋದೆವು; ಇದರಲ್ಲಿ 'ಇದ್ದುದೂ ಹೋಯಿತು ಮದ್ದಿನ ಗುಣದಿಂದ' ಎಂಬಂತೆ ಆಗದಿದ್ದರೆ ಸಾಕು" ಎಂದು ಹೇಳುತಿದ್ದನು.

ಆ ಕಾಲದಲ್ಲಿ ಪಾಟಲೀಪುರದಿಂದ ವಿಷ್ಣುದಾಸನೆಂಬ ರಾಯಭಾರಿ ಬಂದು, ಪರ್ವತರಾಯನ ಸಮಯವನ್ನು ವಿಚಾರಿಸಿ, ಒಳಹೊಕ್ಕು, ಸತ್ಕೃತನಾಗಿ ಕುಳಿತುಕೊಂಡು—"ರಾಯರೆ! ಈಗ ನಂದ ಸಾರ್ವಭೌಮರು ನಿಮ್ಮಲ್ಲಿಗೆ ನನ್ನನ್ನು ಕಳುಹಿಸಿದರು; ಅವರು ಹೇಳಿದ ಮಾತುಗಳನ್ನು ಹೇಳುತ್ತೇನೆ, ಕೇಳಿರಿ, ಮತ್ತೆ ನಿಮ್ಮ ಇಷ್ಟವಿದ್ದಂತೆ ಮಾಡಿರಿ."

"ಚಂದ್ರಗುಪ್ತನೆಂದರೆ ಒಬ್ಬ ಶೂದ್ರ ಸ್ತ್ರೀಯ ಮಗನು; ಅವನಿಗೆ ಮೊದಲೂ ಇಲ್ಲ, ಇನ್ನೂ ಇಲ್ಲ. "ಹೋದರೊಂದು ಕಲ್ಲು, ಸಿಕ್ಕಿದರೊಂದು ಹಣ್ಣು" ಎಂದು ನಿಮ್ಮನ್ನು ತಂದು ಎದುರಿಗೆ ಹಾಕಿದ್ದಾನೆ. ಮತ್ತೆ ಚಾಣಕ್ಯ—ಅಡಿಹಿಡಿದರೂ ಬೋಳು, ಮುಡಿಹಿಡಿದರೂ ಬೋಳು; ಅವನಿಗೇನು? ನಾಳೆಗೆ ಕಾಡುಗುಡ್ಡೆ ಹತ್ತಿ ಓಡಿಹೋಗಿಯಾನು. ಇದರಲ್ಲಿ ಕಷ್ಟವು ನಿಮಗೆ, ಸ್ವಲ್ಪ ನಮಗೂ. ಜಯವಾದರೆ ಚಂದ್ರಗುಪ್ತನು ಅರ್ಧ ರಾಜ್ಯವನ್ನು ಕೊಡುತ್ತಾನಂತೆ; ಹೌದಯ್ಯಾ! ಈ ಪರ್ವತವನ್ನು ನೀವು ಚಿನ್ನ ಮಾಡಿಕೊಟ್ಟರೆ ನಾನು ನಿಮಗೆ ಅರ್ಧ ಪರ್ವತವನ್ನೆ ಕೊಟ್ಟು ಬಿಡುತ್ತೇನೆ."

"ಅದೆಲ್ಲ ಇರಲಿ; (ಎಂದು ಕಿವಿಯಲ್ಲಿ)—ನೀವು ಆ ಚಂದ್ರಗುಪ್ತನನ್ನು ತಂದು ಒಪ್ಪಿಸಿಕೊಟ್ಟರೆ ಆ ಅರ್ಧರಾಜ್ಯವನ್ನು ತೆಗೆದುಕೊಳ್ಳಿರಿ" ಎಂದನು.

ಪರ್ವತೇಶ್ವರನು—"ರಾಯಭಾರಿಗಳೆ! ಚಂದ್ರಗುಪ್ತನನ್ನು ನಿಮಿತ್ತಕ್ಕೆ ಇಟ್ಟುಕೊಂಡು, ನಂದರಲ್ಲಿದ್ದುದನ್ನೆಲ್ಲ ಅಪಹರಿಸಿಕೊಂಡು ಹೋಗಬೇಕೆಂದು ನಾವು ಬಂದವರಲ್ಲ; ಮರೆಹೊಕ್ಕವನನ್ನು ಉದ್ಧರಿಸುವುದಕ್ಕಾಗಿ ಬಂದಿದ್ದೇವೆ; ನೀವು ಚಂದ್ರಗುಪ್ತನಿಗೆ ಅರ್ಧರಾಜ್ಯವನ್ನು ಕೊಡುವುದಾದರೆ ಈಗಲೆ ಯುದ್ಧವನ್ನು ನಿಲ್ಲಿಸಿಬಿಡುವೆವು; ಇದನ್ನು ನಿಮ್ಮ ಅಮಾತ್ಯರಿಗೂ ತಿಳಿಸಿರಿ" ಎಂದು ಅವನನ್ನು ಆಚೆಗೆ ಕಳುಹಿಸಿ, ಮಂತ್ರಿಯಾದ ಶಬರವರ್ಮನನ್ನು ನೋಡಿ—"ಏನು? ನಂದರು ನಯಭಯಪೂರ್ವಕವಾಗಿ ನಮಗೆ ಹೇಳಿ ಕಳುಹಿಸಿದ್ದಾರೆ; ರಾಕ್ಷಸನ ಈಗಿನ ಉಪಾಯವನ್ನು ನೋಡಿದರೆ ನಾಳೆ ನಾವೇ ಸಂಧಿಗೆ ಹೋಗಬೇಕಾಗಿ ಬರುವಂತೆ ತೋರುತ್ತಿದೆ. ಅತ್ತ ದಶಾರ್ಣ ಮತ್ತು ಶೂರಸೇನಾಧಿಪತಿಗಳು ನಮ್ಮ ದೇಶವನ್ನು ಮುತ್ತಿಕೊಂಡಿದ್ದಾರೆ; ಇತ್ತ ನಂದರೊಡನೆ ಯುದ್ಧವು. ಇದರಲ್ಲಿ ಮುಂದೆ

ಏನಾದೀತೆಂದು ಹೇಳಲಿಕ್ಕಾಗುವುದಿಲ್ಲ! ಮೊದಲು ನಮ್ಮ ಸ್ಥಿತಿಯನ್ನು ನೋಡಿಕೊಂಡು, ಆ ಮೇಲೆ ಬೇರೆಯವರಿಗೆ ಸಹಾಯಮಾಡಬೇಕು. ಪ್ರಕೃತಕ್ಕೆ ಸಂಧಿಗೆ ಒಪ್ಪಿಕೊಳ್ಳದೆ ನಿವೃತ್ತಿಯಿಲ್ಲ'' ಎಂದನು.

ಮಂತ್ರಿ—''ಅಪ್ಪಣೆಯಾದುದು ಸದ್ಯಕ್ಕೆ ಸರಿಯಾಗಿ ಕಂಡರೂ ಚಾಣಕ್ಯರಲ್ಲಿ ವಿಚಾರಿಸಿಕೊಂಡು ಮಾಡಬಹುದು; ಅಲ್ಲದಿದ್ದರೆ ಇಷ್ಟ ವಿದ್ದಂತೆ''.

''ಹಾಗೆಯೆ ಮಾಡುವೆನು'' ಎಂದು ಪರ್ವತೇಶ್ವರನು ಚಾಣಕ್ಯ ನನ್ನು ಕರೆಯಿಸಿ ಕುಳ್ಳಿರಿಸಿಕೊಂಡು, ನಂದ ರಾಯಭಾರಿ ಹೇಳಿದ ಮಾತುಗಳನ್ನೂ ತನ್ನ ಉತ್ತರವನ್ನೂ ತಿಳಿಸಿ, ''ಸ್ವಾಮಿಾ! ಈಗ ಸಂಧಿಯ ಪ್ರಸ್ತಾಪವನ್ನು ಅವರಾಗಿಯೆ ಎತ್ತಿದ್ದಾರೆ; ಅರ್ಧರಾಜ್ಯವು ಸಿಕ್ಕಿದರೆ ಅದಕ್ಕೆ ಚಂದ್ರಗುಪ್ತನೆ ಅರಸನಾಗಲಿ; ಹೇಗಾದರೂ ಈ ಯುದ್ಧವನ್ನು ಒಮ್ಮೆ ಇಲ್ಲಿಗೆ ಮುಗಿಸಿಬಿಟ್ಟು, ನಮ್ಮ ಊರಿಗೆ ಹೋದರೆ ಸಾಕಾಗಿದೆ; ಹಾಗೆ ಮಾಡದಿದ್ದರೆ 'ನಿಂತ ಕೊಂಬೆ ಮುರಿಯಿತು ಮೇಲಣ ಕೊಂಬೆ ಎಟಕ ಲಿಲ್ಲ' ಎಂದು ಆಗುವುದೆ ಸರಿ,'' ಎಂದು ಅಂಗಾರವರ್ಮನು ಬರೆದ ಕಾಗದ ವನ್ನು ಕೊಟ್ಟನು.

ಚಾಣಕ್ಯನು ಅದನ್ನು ನೋಡಿ ಮನಸ್ಸಿನಲ್ಲಿ—''ಶಹಭಾಸ್! ರಾಕ್ಷಸನೆ! ನಿನ್ನ ಹಾಗಿರುವ ಮಂತ್ರಿ ಯಾರಿಗಿರುವನೊ, ಅವರಿಗೆ ಕಡಮೆ ಏನು? ನಿನ್ನಿಂದಲೆ ನಂದರು ಇದುವರೆಗೂ ಅರಸರಾಗಿದ್ದಾರೆ; ಆಗಲಿ, ನಿನ್ನ ಈ ಉಪಾಯವು ಎಲ್ಲರಲ್ಲಿಯೂ ನಡೆಯದು'' ಎಂದು ಪ್ರಕಾಶವಾಗಿ ರಾಯನಿಗೆ—''ಏನಯ್ಯಾ! ಗುಮ್ಮ ಬಂತೆಂದು ಮಕ್ಕಳನ್ನು ಹೆದರಿಸುವಂತೆ ರಾಕ್ಷಸನು ನಿನ್ನನ್ನು ಹೆದರಿಸಿಬಿಟ್ಟನಲ್ಲವೆ? ಮಂಜು ಮುಸುಕಿದರೆ ಬೆಟ್ಟವು ಕರಗೀತೆ? ಶತ್ರುಗಳನ್ನು ಸೋಲಿಸಲಿಕ್ಕೆ ನಿನ್ನ ಇಷ್ಟು ದೊಡ್ಡ ಸೈನ್ಯವೂ ಬೇಕೇ? ನೀನೇ ಬೇಕುಬೇಕೆಂದು ಯುದ್ಧದ ಕುತೂಹಲದಿಂದ ಅನೇಕ ಜೀವಿಗಳನ್ನು ಹಾಳುಮಾಡಿದೆ; ಪ್ರಕೃತದಲ್ಲಿ ನಿನ್ನ ದೇಶಕ್ಕೆ ದೋಷಬಾರ ದಂತೆ ಒಂದು ಉಪಾಯವನ್ನು ಮಾಡಿಬಿಡು;

ಏನೆಂದರೆ—ತೀರ್ಥರೂಪಸಮಾನರೂ, ಪುರರಕ್ಷಕರೂ ಆಗಿರುವ ಮಾವಯ್ಯ ನವರಾದ ಅಂಗಾರವರ್ಮರಿಗೆ—ಪರ್ವತೇಶ್ವರನ ವಿಜ್ಞಾಪನೆ.

ನೀವು ಬರೆದು ಕಳುಹಿಸಿದ ಕಾಗದವು ಕೈಸೇರಿ ಅಭಿಪ್ರಾಯವು ತಿಳಿಯಿತು. ಇಲ್ಲಿ ನಿನ್ನೆಯ ಯುದ್ಧದಲ್ಲಿ ನಂದರು ಸತ್ತುಹೋದರು; ಪಾಟಲೀಪುರವು ನಮ್ಮ ವಶವಾಯಿತು. ಅಮಾತ್ಯ ರಾಕ್ಷಸನೊಬ್ಬನು ತಪ್ಪಿಸಿಕೊಂಡು ಓಡಿಹೋಗಿದ್ದಾನೆ; ಎಷ್ಟು ಹುಡುಕಿದರೂ ಎಲ್ಲಿಯೂ ಸಿಗಲಿಲ್ಲ; ಅವನನ್ನು ಹುಡುಕಿ ತಂದುಕೊಟ್ಟವರಿಗೆ ಉಂಬಳಿಗಳನ್ನು ಕೊಡುತ್ತೇವೆಂದು ಪಟ್ಟಣದಲ್ಲಿ ಡಂಗುರಸಾರಿಸಬೇಕು; ನಮಗೆ ಜಯವಾದುದಕ್ಕಾಗಿ ಜಯಭೇರಿಗಳನ್ನು ಮೊಳಗಿಸಿ, ದೇವಾಲಯಗಳಲ್ಲಿ ಉತ್ಸವಗಳನ್ನು ಮಾಡಿಸಿ, ಬಡಬಗ್ಗರಿಗೆ ಊಟಗಳನ್ನು ಕೊಡಿಸಿ, ಮಕ್ಕಳಿಗೆ ಸಕ್ಕರೆಮಿಠಾಯಿಗಳನ್ನು ಹಂಚಿಸಿರಿ. ಕೂಡಲೆ ಆದಷ್ಟು ಬೇಗನೆ ಹೊರಟುಬರುತ್ತೇವೆ.

ಇತಿ ಪರ್ವತೇಶ್ವರ.

ಎಂದು ಬರೆದು ಕಳುಹಿಸು. ನಿನ್ನ ಪಟ್ಟಣದಲ್ಲಿ ಉತ್ಸವಗಳಾಗಲಿ; ಭೇರಿಯ ಶಬ್ದವನ್ನು ಕೇಳಿ ಹೆದರಿ ಓಡುವ ಕ್ಷುದ್ರಮೃಗಗಳಂತೆ ವೈರಿಗಳೆಲ್ಲ ದಿಕ್ಕುಗೆಟ್ಟು ಓಡಿಹೋಗುತ್ತಾರೆ ನೋಡು'' ಎಂದನು.

ಪರ್ವತೇಶ್ವರ—ಸ್ವಾಮಿ! ಇದರಿಂದ ಶತ್ರುಗಳು ಓಡಿದರೆ ಸರಿ; ಇಲ್ಲದಿದ್ದರೆ?

ಚಾಣಕ್ಯ—ಪಂಚಾಕ್ಷರೀ ಜಪದ ಮುಂದೆ ಪಾಪವು ಉಳಿದೀತೆ?

ಪರ್ವತೇಶ್ವರ—ನನಗೇನೊ ಇದು ಆಶ್ಚರ್ಯವಾಗಿ ಕಾಣುತ್ತದೆ. ಓಡಿದರೆ ಆಯಿತು, ಇಲ್ಲದಿದ್ದರೆ ಆಗಲಾದರೂ ನಾವೇ ಸಂಧಿಗೆ ಹೋಗಬೇಕಾದೀತು.

ಚಾಣಕ್ಯ—''ಏನಯ್ಯಾ! ಬಾಯಿಬಿಟ್ಟು ಹೇಳುವುದಕ್ಕೆ ಲಜ್ಜಿತನಾಗಿ ಓರೆಮಾತಿನಿಂದ ಹೇಳುತ್ತಿ? ಸಂಧಿ ಸಂಧಿ ಎಂದರೇನು? ಚಂದ್ರಗುಪ್ತನನ್ನು ನಂದರಿಗೆ ಒಪ್ಪಿಸಿಬಿಡುವುದು! ಸರಿ, ಸರಿ! ಒಳ್ಳೆಯ ಕೆಲಸವನ್ನು ಆಲೋಚಿಸಿದೆ! ಈ ಯುಗದಲ್ಲಿ ಇದು ನಡೆಯಲಾರದು; ನಾವು ಸತ್ತುಹೋಗಿ ನಮ್ಮ ಪೌರುಷವೂ ಮಣ್ಣುಪಾಲಾಗಿ, ತಪಃಶಸ್ತ್ರದ ಮೊನೆಯೂ ಮೊಂಡಾಯಿತೆಂದರೆ, ಆಗ ಹೇಗೂ ಮಾಡಬಹುದು. ನನ್ನ ಈ ಡೊಕ್ಕೆಯಲ್ಲಿ ಎಕ್ಕೊಂದು ಉಳಿದಿರುವ ವರೆಗೆ ಇಂತಹ ಕಾರ್ಯವೇನಾದರೂ ನಡೆದು ಹೋದರೆ, ಲೋಕವನ್ನೆ ಅಡಿಮುಗುಚಿ ಬಿಟ್ಟೇನು; ಆ ನವನಂದರನ್ನೂ, ಅವರಿಗೆ ಸಹಾಯಕರಾದ ದುಷ್ಟರನ್ನೂ ನನ್ನೊಂದು ಹೂಂಕಾರಮಾತ್ರದಿಂದಲೆ ಸುಟ್ಟುರುಹಿಬಿಡುವೆನು'' ಎಂದು ಕಿಡಿಕಿಡಿಯಾದನು.

ಆಗ ಇಬ್ಬರು ಚಾರರು ಬಂದು ಕೈಮುಗಿದು—"ಬುದ್ಧಿ! ಕಾಮರೂಪಾಧಿಪತಿಗೂ ಲಂಪಾಕರಾಜನಿಗೂ ಯುದ್ಧವಾಗಿ ತಡೆಯಲಾರದೆ ಲಂಪಾಕರಾಜನ ಸೈನಿಕರು ಓಡಿಹೋದರು; ಈಗ ಕಾಮರೂಪಾಧಿಪನೊಡನೆ ಅವನು ಸಂಧಿಯನ್ನು ಅಪೇಕ್ಷಿಸುತ್ತಾನೆ" ಎಂದು ವಿಜ್ಞಾಪಿಸಿದರು.

ಅರಸನು ಸಂತೋಷದಿಂದ ಚಾಣಕ್ಯನನ್ನು ನೋಡಿ—"ಇದು ನಿಮ್ಮಿಂದಾಯಿತು" ಎಂದನು.

ಚಾಣಕ್ಯ—"ಇದೊಂದು ದೊಡ್ಡ ಸಂತೋಷವಾರ್ತೆಯಲ್ಲ; ಇಂದಿನ ಸಂತೋಷ ಲಾಭವಾಗಬೇಕೆಂದಿದ್ದರೆ, ನಿನ್ನ ಸೇನಾಪತಿಯಾದ ಶೇಖರನೊಡನೆ ಕೆಲವು ಸೈನ್ಯವನ್ನು ಕೂಡಿಸಿಕೊಟ್ಟು, ನಾನಿದ್ದಲ್ಲಿಗೆ ಕಳುಹಿಸು; ಇಲ್ಲದಿದ್ದರೆ ಬಿಡು," ಎಂದು ಹೇಳಿ ಹೊರಟುಹೋದನು.

## ೧೮. ಅಮಾತ್ಯನ ನಿದ್ದೆ.

ಚಾಣಕ್ಯನು ಹೀಗೆ ಹಸಿದ ಹೆಬ್ಬುಲಿಯಂತೆಯೂ, ಹೆರೆಗಳೆದ ಉರಗನಂತೆಯೂ ಕಿಡಿಮಸಗಿ ಬುಸುಗುಟ್ಟಿಕೊಂಡು ಹೋಗುತ್ತಿರುವುದನ್ನು ಪರ್ವತೇಶ್ವರನು ನೋಡಿ ಹೆದರಿ—"ಅಬ್ಬಾ! ಇವನ ಒಂದು ಉಪಾಯದಿಂದಲೆ ಮಹಾಸಾಹಸಿಯಾದ ಲಂಪಾಕಪತಿಯ ಗರ್ವವು ಮುರಿದುಹೋಯಿತು! ಇವನನ್ನು ನೋಡಿದರೆ ಹೆದರಿಕೆಯಾಗುತ್ತದೆ; ನಾವೀಗ 'ಸುಣುಸುಣು' ಎಂದರೆ ನಮಗೆ ಮುಂದೆ ಯಾವ ಗತಿಯೊ? ನಮ್ಮ ಸಹಾಯವೆಂದರೆ ಒಂದು ನಿಮಿತ್ತ ಮಾತ್ರಕ್ಕಲ್ಲದೆ ಮತ್ತೇನು? ಆಚೆಗೆ ಅಮಾತ್ಯನ ಭಿನ್ನತಂತ್ರವನ್ನೂ, ಯುದ್ಧಪರಾಕ್ರಮವನ್ನೂ ನೋಡಿದರೆ ಅದೂ ಹೆದರಿಕೆಯೆ. ಇದಕ್ಕೇನು ಮಾಡುವುದಪ್ಪಾ! 'ಹಿಂದೆ ಹುಲಿ, ಮುಂದೆ ದರಿ,' ಎಂಬ ಅವಸ್ಥೆಯಾಯಿತಲ್ಲಾ! ಆಯಿತು, ಇನ್ನು ಹೇಳಿ ಮಾಡುವುದೇನು? ಉಂಡ ಮೇಲೆ ಜಾತಿಯನ್ನು ಕೇಳುವುದಲ್ಲ; ಮೊದಲೆ ಬುದ್ಧಿ ಬೇಕಾಗಿತ್ತು!" ಎಂದು ವ್ಯಸನಪಟ್ಟು, ಶೇಖರನನ್ನು ಕರೆದು—

"ಸೇನಾಪತಿ! ನೀನು ಸೈನ್ಯವನ್ನು ಕೂಡಿಕೊಂಡು ಚಾಣಕ್ಯರಿದ್ದಲ್ಲಿ ಹೋಗು; ಅವರು ಹೇಳಿದಂತೆ ನಡೆದುಕೊ; ನಿನಗೀಗ ಇದೀ

ಸೈನ್ಯದ ನಾಯಕತ್ವವನ್ನು ಕೊಟ್ಟಿದ್ದೇನೆ" ಎಂದು ಹೇಳಿ ಕಳುಹಿಸಿದನು. ಅವನು ರಾಜಾಜ್ಞೆಯಂತೆ ಸೈನ್ಯವನ್ನು ಕೂಡಿಸಿಕೊಂಡು ಚಾಣಕ್ಯನ ಬಳಿಗೆ ಬಂದು "ಅಪ್ಪಣೆ ಏನು?" ಎಂದು ಕೇಳಿದನು.

ಚಾಣಕ್ಯನು—"ಸೇನಾಪತಿ! ರೂಪದಲ್ಲಿ ಸಾಧಾರಣವಾಗಿ ಮಲಯಕೇತುವಿನಂತೆಯೆ ಇರುವ ಒಬ್ಬ ಬುದ್ಧಿವಂತನಾದ ಯುವಕನನ್ನು ರಾಜಯೋಗ್ಯವಾದ ಉಡಿಗೆತೊಡಿಗೆಗಳಿಂದ ಅಲಂಕರಿಸಿ, ಕಾಶೀಮಾರ್ಗ ದಲ್ಲಿರುವ ನಿನ್ನ ಸೇನೆಗೆ ಪರಿವಾರಸಮೇತವಾಗಿ ಕಳುಹಿಸಿ ಬಂದು ತಿಳಿಸು" ಎಂದು ಏಕಾಂತದಲ್ಲಿ ಹೇಳಿ ಕಳುಹಿಸಿದನು. ಅವನು ಹಾಗೆಯೆ ಮಾಡಿಸಿ ಬಂದು ತಿಳಿಸಿದನು. ಬಳಿಕ ಚಾಣಕ್ಯನು ಬಳಿಯಲ್ಲಿದ್ದ ಆರು ಮಂದಿ ಸವಾರರಲ್ಲಿ ಇಬ್ಬರನ್ನು ಕರೆದು—"ಇಂದು ನಂದರು ಜಪಶಾಲೆಗೆ ಬಂದ ಮೇಲೆ ನೀವು ಹೋಗಿ ಅವರೊಡನೆ ಹೀಗೆ ಹೇಳಬೇಕು" ಎಂದು ಕಿವಿ ಯಲ್ಲಿ ಹೇಳಿ, ಮತ್ತಿಬ್ಬರನ್ನು ಕರೆದು—"ನೀವು ಕಾಶೀಮಾರ್ಗದಲ್ಲಿ ನಿಂತು ನಂದರು ಜಪಶಾಲೆಗೆ ಬಂದಕೂಡಲೆ ಶೇಖರನ ಸಂಜ್ಞೆಯನ್ನು ತಿಳಿದುಕೊಂಡು ಹೀಗೆ ಮಾಡಿರಿ" ಎಂದು ಗುಟ್ಟಾಗಿ ಹೇಳಿಕೊಟ್ಟು, ಇನ್ನಿಬ್ಬರನ್ನು ಕರೆದು—"ನೀವು ಕಾಶೀಮಾರ್ಗದಲ್ಲಿ ನಿಂತು, ಜಪಶಾಲೆಗೆ ಸೈನ್ಯವು ಬರುವುದನ್ನು ನೋಡಿ, ಅಲ್ಲಿರುವ ನಂದರಿಗೆ ಹೀಗೆ ಹೇಳಬೇಕು" ಎಂದು ಕಿವಿಯಲ್ಲಿ ಹೇಳಿ, ಅವರನ್ನು ಕಳುಹಿಸಿ, ಶೇಖರನೊಡನೆ—"ನಂದರು ಜಪಶಾಲೆಗೆ ಹೊರಟರೆಂದು ಕಾಶೀಮಾರ್ಗದಲ್ಲಿರುವ ಸೈನ್ಯವು ತಿಳಿಯು ವಂತೆ ನೀನು ಅಲ್ಲಿ ಪತಾಕಾಹಸ್ತರಾದ ಸವಾರರನ್ನು ನಿಲ್ಲಿಸು. ನಂದ ರೊಡನೆ ಯುದ್ಧವು ಆರಂಭವಾದ ಕೂಡಲೆ ಜಯಭೇರಿಯನ್ನು ಹೊಡೆ ಯಿಸು; ಜಪಶಾಲೆಯಲ್ಲಿ ಅಗ್ನಿ ಪ್ರಜ್ವಲಿತವಾದೊಡನೆ ಉಳಿದ ಎಲ್ಲ ದಂಡನ್ನೂ ಅಲ್ಲಿಗೆ ಕರೆದುಕೊಂಡು ಬಾ; ಸೇನಾಪತಿಗಳೆಲ್ಲರೂ ಸಿದ್ಧರಾಗಿ ಕಾದಿರಲಿ; ಅಲ್ಲಲ್ಲಿ ಗೂಢಚಾರರನ್ನಿಟ್ಟು ಆಗಾಗಿನ ವರ್ತಮಾನಗಳನ್ನು ನಮಗೆ ಮುಟ್ಟಿಸು" ಎಂದು ಹೇಳಿ ಕಳುಹಿಸಿದನು. ಶೇಖರನು ಹಾಗೆಯೆ ಎಲ್ಲವನ್ನು ಸಿದ್ಧಗೊಳಿಸುತಿದ್ದನು.

ನಂದರು ತಮ್ಮ ಗೂಡಾರದಲ್ಲಿ ಸಂಧ್ಯಾವಂದನಾದಿಗಳನ್ನು ತೀರಿಸಿ, ಭೋಜನಕ್ಕೆ ಕುಳಿತಿರುವಾಗ, ಪರ್ವತರಾಯನ ಬಳಿಗೆ ಕಳುಹಿಸಿದ ರಾಯ

ಭಾರಿ ಬಂದು ಹೇಳಿದ ವರ್ತಮಾನವನ್ನು ಕೇಳಿ, ರಾಕ್ಷಸನಿಗೆ ತಿಳಿಸಿ, ಎಲ್ಲರನ್ನು ಕಳುಹಿಸಿ, ರಾಜಪುತ್ರರೊಡನೆ ಮೃಷ್ಟಾನ್ನಭೋಜನವನ್ನು ಮಾಡಿ, ಸದ್ಯಕ್ಕೀಗ ಯುದ್ಧವು ನಿಂದಹಾಗಾಯಿತು'' ಎಂದು ಮಲಗಿ ನಿದ್ದೆಹೋದರು.

ರಾಕ್ಷಸನೂ ರಾಯಭಾರಿಯ ಮಾತಿನಿಂದ ಇನ್ನು ಸ್ವಲ್ಪ ಕಾಲ ಹರಣಕ್ಕೆ ಎಡೆಯಾಯಿತೆಂದು ತಿಳಿದುಕೊಂಡು ಮಂಚದಲ್ಲಿ ಕುಳಿತು— ''ದೂತನೆ! ಅರಸುಗಳ ಸಮಯವನ್ನು ನೋಡಿ ಬಾ'' ಎನಲು, ಅವನು ಹೋಗಿ ಬಂದು—''ಸ್ವಾಮಿ! ಅರಸುಗಳು ನಿದ್ದೆಯಲ್ಲಿದ್ದಾರೆ'' ಎಂದನು. ಅದಕ್ಕೆ ರಾಕ್ಷಸನು 'ಪ್ರಕೃತಕ್ಕೆ ಅಷ್ಟೇನೂ ತೊಂದರೆ ಇಲ್ಲ' ಎಂದು ತಾನೂ ಮಲಗಿ ನಿದ್ದೆಹೋದನು.

## ೧೮. ಮಲಯಕೇತುಗ್ರಹಣ.

ರಾತ್ರೆ ಮೂರನೆಯ ಜಾವದಲ್ಲಿ ನಂದರು ಎದ್ದು ಏನೂ ಕೆಲಸ ವಿಲ್ಲದುದರಿಂದ ಅತ್ತಿತ್ತ ನೋಡಿ, ಕಡೆಗೆ ಪಗಡೆಯಾಡುವುದಕ್ಕೆ ಆರಂಭಿ ಸುತಿದ್ದರು. ಆಗ ಜಪಶಾಲೆಯಿಂದ ಮಾಸೋಪವಾಸಿಯ ಶಿಷ್ಯರಿಬ್ಬರು ಬಂದು, ದ್ವಾರಪಾಲಕರನ್ನು ಕುರಿತು—''ಅಯ್ಯಾ, ದೂತರೆ! ಜಪಶಾಲೆ ಯಿಂದ ಬ್ರಾಹ್ಮಣರು ಬಂದು ಕಾದುನಿಂತಿದ್ದಾರೆ ಎಂದು ಅರಸುಗಳಿಗೆ ಅರಿಕೆಮಾಡಿರಿ'' ಎಂದರು. ದೂತರು ಒಳಗೆ ಬಂದು ತಿಳಿಸಿ, ಅಪ್ಪಣೆಯ ಪ್ರಕಾರ ಅವರನ್ನು ಕರೆದು ತಂದು ನಿಲ್ಲಿಸಿದರು. ಅವರು ''ರಾಜಾಧಿ ರಾಜರಿಗೆ ಮಂಗಳವಾಗಲಿ!'' ಎಂದು ಹರಸಿ, ನಂದರನ್ನು ಕುರಿತು— ''ರಾಯರೆ! ಇಂದು ಶುಕ್ರವಾರವು, ಹೋಮದ ಪೂರ್ಣಾಹುತಿ, ಆಚಾ ರ್ಯರ ಅಪ್ಪಣೆಯಾಗಿದೆ, ಎಲ್ಲರೂ ಚಿತ್ತಯಿಸಬೇಕಂತೆ'' ಎಂದರು.

ಅದನ್ನು ಕೇಳಿ ನಂದರು ಕುತೂಹಲದಿಂದ ದೂತರನ್ನು ನೋಡಿ— ''ಅಮಾತ್ಯರು ಏನು ಮಾಡುತ್ತಾರೆ? ನೋಡಿಬನ್ನಿರಿ'', ಎಂದು ಕಳುಹಿಸಿ ದರು ದೂತರು ನೋಡಿ ಬಂದು—''ಜೀಯ! ಅವರು ನಿದ್ದೆಮಾಡು ತಿದ್ದಾರೆ'' ಎಂದರು. ಅದಕ್ಕೆ ನಂದರು—''ಹೌದು, ಎರಡು ದಿವಸ

ಗಳಿಂದ ನಿದ್ದೆ ಇಲ್ಲ; ಆಯಾಸದಿಂದ ಮಲಗಿಕೊಂಡಿದ್ದಾರೆ. ಪಾಪ! ಸ್ವಲ್ಪ ನಿದ್ದೆಮಾಡಲಿ, ಯಾಕೆ ಉಪದ್ರವ ಕೊಡಬೇಕು? ನಾವೇ ಹೋಗುವ'', ಎಂದು ಹೇಳಿಕೊಳ್ಳುತ್ತ, ವಸ್ತ್ರಭೂಷಣಗಳಿಂದ ಅಲಂಕೃತರಾಗಿ, ಕುದುರೆಗಳನ್ನೇರಿ, ಪರಿವಾರ ಸಮೇತರಾಗಿ ಹೊರಟರು.

ಆಗ ಬಂದ ಬ್ರಾಹ್ಮಣರು, ದೂರದೂರಕ್ಕೆ ಸರಿದು, ಕೂರ್ಚದ ನೀರಿನಿಂದ ಒಬ್ಬರಿಗೊಬ್ಬರು ಪ್ರೋಕ್ಷಣೆಗಳನ್ನು ಮಾಡುತ್ತ, ಹಿಂದೆ ಹಿಂದೆ ಹೋಗುತಿದ್ದರು. ನಂದರು ಅವರನ್ನು ನೋಡಿ—''ಓಹೊ! ಶೂದ್ರ ಸ್ಪರ್ಶವಾಗಕೂಡದೆಂದು ಮೊದಲೆ ಹೇಳಿದ್ದಾರೆ'' ಎಂದು ತಮ್ಮೊಳಗೆ ಮಾತನಾಡಿಕೊಳ್ಳುತ್ತ, ಆ ಮೃಗಾವಲಿನವರನ್ನು ಅಲ್ಲಿಯೆ ನಿಲ್ಲಿಸಿ, ಕೆಲವು ಮಂದಿ ರಾಜಪುತ್ರರಿಂದೊಡಗೂಡಿ ಹೊರಟರು. ಹೀಗೆ ಒಂದು ಜಪ ಶಾಲೆಯ ಬಳಿಯಲ್ಲಿ ಇಳಿಯಲು, ಅಷ್ಟರಲ್ಲಿಯೆ ಕಾಶೀಮಾರ್ಗದಿಂದ ಸಿಡಿಲ ಬಿರಿವಂತೆ ಶತಘ್ನಗಳ ಭಾಂಕಾರಗಳು ಕೇಳಿಸಿದುವು; ಅದನ್ನು ಕೇಳಿ ನಂದರು—''ಬಹುಶಃ ಕಾಶೀರಾಜನ ಸೈನ್ಯಕ್ಕೂ ಪರ್ವತರಾಯನ ಸೈನ್ಯಕ್ಕೂ ಯುದ್ಧವು ನಡೆಯುತ್ತಿದೆ' ಎಂದು ಹೇಳಿಕೊಂಡು ಮುಂದೆ ಮುಂದೆ ಹೋದರು.

ಆ ಸಮಯದಲ್ಲಿ ಸವಾರರಿಬ್ಬರು ಬಂದು, ''ಒಸಗೆ! ಒಸಗೆ! ನಂದ ರಾಯರೆಲ್ಲಿದ್ದಾರೆ?'' ಎಂದು ಕೇಳುತ್ತ ಬರುವುದನ್ನು ಉಕ್ಕಡದವರು ಕಂಡು ಆಯುಧರಹಿತರು ಮತ್ತು ಕಾಶೀರಾಯನ ಕಡೆಯವರು ಎಂದು ನೆನಸಿ, ಒಳಗೆ ಬಿಡಲು, ಅವರು ಜಪಶಾಲೆಯ ಬಳಿಗೆ ಬಂದು ''ಪರಾಕು! ಒಸಗೆ! ಒಸಗೆ!'' ಎಂದು ಗಟ್ಟಿಯಾಗಿ ಕೂಗಿದರು. ಅದನ್ನು ಕೇಳಿ ನಂದರು ಜಪಶಾಲೆಯಿಂದ ಹೊರಗೆ ಬಂದು—''ಯಾರು ನೀವು? ಏನು ಬಂದಿರಿ?'' ಎಂದು ಕೇಳಿದರು.

ಸವಾರರು—''ಬುದ್ಧಿ! ನಾವು ಕಾಶೀರಾಯರ ದೂತರು, ಮಲಯಕೇತು ಸಿಕ್ಕಿದನು; ಹಿಡಿದುಕೊಂಡು ಬಂದಿದ್ದಾರೆ; ಬಿಡಿಸಿಕೊಳ್ಳುವುದಕ್ಕೆ ಪರ್ವತರಾಯನ ಸೈನ್ಯವು ಬಂದೀತು; ಅವರು ಬಾರದಂತೆ ಅಡ್ಡಗಟ್ಟುವುದಕ್ಕೆ ನಂದ ಭೂಪತಿಗಳಿಗೆ ತಿಳಿಸಿರಿ ಎಂದು ನಮ್ಮನ್ನು ಓಡಿಸಿದರು'' ಎಂದು ಗಡಿಬಿಡಿಯಿಂದ ವಿಜ್ಞಾಪಿಸಿದರು.

ಅದನ್ನು ಕೇಳಿ ನಂದರು—"ನಮ್ಮ ಸ್ನೇಹಿತನು ಹೇಳಿದಂತೆಯೆ ಕೆಲಸವನ್ನು ಮಾಡಿಬಿಟ್ಟನು. ಚಂದ್ರಗುಪ್ತನೆ ಸಿಕ್ಕಿದ ಹಾಗಾಯಿತು, ಮತ್ತೇನು? ಭಲಾ! ಶತ್ರುಪಲಾಯನ ಹೋಮವು ಸಾಧಾರಣವಲ್ಲ!" ಎಂದು ಸಂತೋಷದಿಂದ ಭದ್ರಭಟಾದಿ ಸೇನಾಪತಿಗಳನ್ನೂ, ಒಡನೆ ಬಂದಿರುವ ರಾಜಪುತ್ರರನ್ನೂ, ಉಳಿದ ಎಲ್ಲ ಸೈನ್ಯವನ್ನೂ ಪರ್ವತರಾಯನ ಸೇನೆ ಬಂದು, ಕಾಶೀರಾಯನ ಸೈನ್ಯದ ಮೇಲೆ ಬೀಳದಂತೆ ಮಾರ್ಗದಲ್ಲಿ ಅಡ್ಡಗಟ್ಟಿ ನಿಲ್ಲುವಂತೆ ಹೇಳಿ ಕಳುಹಿಸಿ, ಬಂದಿರುವ ಆ ದೂತರನ್ನು ನೋಡಿ—"ಕಾಶೀಮಾರ್ಗದಲ್ಲಿ ಆದ ಶತಘ್ನಿಯ ಶಬ್ದವೇನು?" ಎಂದು ಕೇಳಿದರು. ಅದಕ್ಕವರು "ಬುದ್ಧಿ! ಮಲಯಕೇತು ಸಿಕ್ಕಿದ ಸಂತೋಷಕ್ಕೆ ಗುಂಡು ಹಾರಿಸಿದುದಾಗಿರಬಹುದು" ಎಂದರು.

ನಂದಸೈನ್ಯವು ಹೊರಟು ಹೋಗುತ್ತಿರುವಾಗ ಮತ್ತಿಬ್ಬರು ಸವಾರರು ಓಡಿ ಬಂದು ನಂದರ ಕಾವಲುಗಾರರಿಗೆಲ್ಲ ಶುಭಸಮಾಚಾರವನ್ನು ಹೇಳುತ್ತ ಜಪಶಾಲೆಯ ಸಮೀಪಕ್ಕೆ ಬಂದು, "ಜಯವಾಯಿತು! ಜಯವಾಯಿತು!" ಎಂದು ಕೂಗಿದರು. ಅವರನ್ನು ನೋಡಿ ನಂದರು—'ಏನು?' ಎಂದು ಕೇಳಲು, "ಬುದ್ಧೀ! ಮಲಯಕೇತುವನ್ನು ತಂದರು, ಕಾರ್ಯವು ಜಯವಾಗಿಯೆ ಹೋಯಿತು" ಎಂದರು. ನಂದರು ಸಂತೋಷಪಟ್ಟು ಅವರಿಗೆ ಉಡುಗರೆಗಳನ್ನು ಕೊಡುವಂತೆ ಹೇಳಿ ಜಪಶಾಲೆಯ ಒಳಗೆ ಹೋದರು.

ಆ ಕಾಲದಲ್ಲಿ ಅನೇಕ ಮಂದಿ ಸವಾರರು ಖಡ್ಗಪಾಣಿಗಳಾಗಿ, ಮುಸುಕಿಟ್ಟ ದೋಲಿಯೊಂದನ್ನು ಹೊರಿಸಿಕೊಂಡು ಬಂದು, ಹೋಮಶಾಲೆಯ ಒಳಿಯಲ್ಲಿ ನಿಂದು—'ಮಲಯಕೇತುವನ್ನು ಹಿಡಿದು ತಂದಿದ್ದೇವೆ, ರಾಯರೆಲ್ಲಿ?' ಎಂದು ಕೇಳಿದರು. ಕೂಡಲೆ ಅಲ್ಲಿದ್ದವರೆಲ್ಲರೂ ಒಮ್ಮೆಯೆ ದೋಲಿಯ ಮೇಲೆ ಕವಿದುಬಿದ್ದರು. ಆಗ ದೋಲಿಯ ಕಾವಲುಗಾರರು—"ಏನಯ್ಯ ಗಲಾಟೆ? ನೀವು ಹೀಗೆ ಕತ್ತಿಕೋವಿಗಳನ್ನು ಹಿಡಿದುಕೊಂಡು ಮೇಲೆ ಬಿದ್ದರೆ ಒಬ್ಬರಿಗೊಬ್ಬರಿಗೆ ಪೆಟ್ಟಾಗಿ ಒಂದಕ್ಕೊಂದಾಗುವುದಲ್ಲವೆ? ಸ್ವಲ್ಪ ಸಮಾಧಾನ ಮಾಡಿರಿ; ಎಲ್ಲರೂ ಬಂದುಕೊಳ್ಳಲಿ; ತೋರಿಸುತ್ತೇವೆ" ಎಂದು ದಾರಿ ಬಿಡಿಸಿಕೊಂಡು ಮುಂದೆ ಮುಂದೆ ಹೋದರು.

ನಂದ ಸೈನಿಕರೆಲ್ಲರೂ ತಮ್ಮ ತಮ್ಮ ಆಯುಧಗಳನ್ನು ಅಲ್ಲಲ್ಲಿಯೆ ಬಿಟ್ಟು ಗುಂಪುಗುಂಪಾಗಿ ನುಗ್ಗಿ ಬರುತಿದ್ದರು. ನಂದರ ಗೂಡಾರದ ಕಾವಲುಗಾರರೆಲ್ಲರೂ ಕಾವಲಿನ ಚಿಂತೆಯನ್ನು ಬಿಟ್ಟು, ಓಡಿಯೋಡಿ ಬಂದು, ಮಲಯಕೇತುವನ್ನು ನೋಡಿ, ಆಶ್ಚರ್ಯದಿಂದ ಮನಸ್ಸಿಗೆ ತೋರಿದಂತೆ ಮಾತನಾಡಿಕೊಳ್ಳುತಿದ್ದರು.

ಇವೆಲ್ಲವನ್ನು ನೋಡಿ ದೋಲಿಯ ಹಿಂದುಗಡೆಯಿಂದ ಬರುತಿದ್ದ ಸೇನೆ ಗೂಡಾರದ ಒಳನುಗ್ಗಿ, ಅಲ್ಲಿದ್ದ ಆಯುಧಗಳನ್ನೆಲ್ಲ ತಮ್ಮ ಸ್ವಾಧೀನಪಡಿಸಿಕೊಂಡು, ಕೊಳ್ಳಿಹೊಡೆದು ಮಲಯಕೇತುವನ್ನು ನೋಡಿಕೊಂಡು, ನಿರಾಯುಧರಾಗಿ ಹಿಂದೆ ಬರುತಿದ್ದ ಸೇನೆಯನ್ನು ಬಂದ ಬಂದ ಹಾಗೆ ಕೊಂದುಹಾಕಿ ಮುಂದೆ ಮುಂದೆ ಬರುತಿದ್ದರು.

ಆಗ ದೋಲಿಯನ್ನು ಜಪಶಾಲೆಯ ಮುಂದಿಳಿಸಿ—"ಬುದ್ಧೀ! ಮಲಯಕೇತು! ಮಲಯಕೇತು!" ಎಂದು ಕೂಗಿದರು. ಅದನ್ನು ಕೇಳಿ ನಂದರು ಹೊರಗೆ ಬಂದು ದೋಲಿಯ ಬಳಿಯಲ್ಲಿ ನಿಂದು, ಮುಸುಕು ತೆಗೆಯಿಸಿ,—"ಏನು ಮಲಯಕೇತು? ಬುದ್ಧಿಯಿಲ್ಲದೆ ಹೀಗೆ ನಮ್ಮ ಕೈಗೆ ಸಿಕ್ಕಿಬಿಟ್ಟೆಯಾ! ಅಯ್ಯೋ, ಪಾಪ! ಇನ್ನು ಮಾಡುವುದೇನು? ಬಂದುದನ್ನು ಅನುಭವಿಸಬೇಕು" ಎಂದರು.

ಮಲಯಕೇತು—"ಥೂ! ಹಿಡಿದ ಛಲವನ್ನು ಜೀವಹೋದರೂ ಬಿಡೆವು."

ನಂದರು—ಅಯ್ಯೋ ಹುಚ್ಚಾ! ಹಿಡಿದ ಛಲವೆಂದು ಜೀವವನ್ನು ಕಳೆದುಕೊಳ್ಳುವೆಯಾ? ಈಚೆಗೆ ಬಂದು ಮಾತನಾಡು; ಹಿಡಿದ ಛಲವೆಂದರೇನು?

ಆ ಸಮಯದಲ್ಲಿ ಜಪಶಾಲೆಯ ಸುತ್ತುಮುತ್ತಲೂ ಅಪರಿಮಿತ ಸೈನ್ಯವು ಬಂದು ನೆರೆಯಲಾರಂಭವಾಯಿತು. ನಂದರು ಹೀಗೆ ನೋಡುತಿದ್ದರು.

## ೨೦. ನಂದಸಂಹಾರ.

ಸೈನ್ಯವು ಬಂದು ಸಿದ್ಧವಾದುದನ್ನು ನೋಡಿ, ಮಲಯಕೇತು ಡೋಲಿಯಿಂದ ತಟ್ಟನೆ ಹೊರಗೆ ನೆಗೆದು ನಿಂದು, ಕೈಯ ಖಡ್ಗವನ್ನು ಝಳಪಿಸಿ, ಒಮ್ಮೆ ಅತ್ತಿತ್ತ ನೋಡಿ ಹೂಂಕರಿಸಿದನು. ನಂದರು ಅವನನ್ನು ನೋಡಿ, "ಮೋಸ! ಮೋಸ!" ಎಂದು ಭೀತರಾಗಿ ಬೇಗಬೇಗನೆ ಆಯುಧಗಳನ್ನು ಹುಡುಕಲಾರಂಭಿಸಿದರು. ಜಪಶಾಲೆಯ ಬ್ರಾಹ್ಮಣರೂ ತಮ್ಮ ತಮ್ಮ ಮುಖದ ಭಸ್ಮಗಳನ್ನೊರಸಿಕೊಂಡು ಖಡ್ಗಗಳನ್ನು ಹಿರಿದರು. ಒಡನೆಯೆ ನೋಡುವುದೇನು? ಖಾಡಾಖಾಡಿ, ಕೇಶಾಕೇಶಿ.

ನಂದರೆಂದರೆ ಸಾಮಾನ್ಯರಲ್ಲ! ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಹಾರುತ್ತ ಸಿಕ್ಕಿದವರ ತಲೆಗಳನ್ನು ಚೆಂಡಾಡುತ್ತ, ಒಂದೊಂದು ಕತ್ತಿಯ ಪೆಟ್ಟಿಗೆ ಎಂಟು ಹತ್ತು ತಲೆಗಳನ್ನು ಹಾರಿಸುತ್ತ, ರಣರಂಗಭೈರವರಂತೆ ಯುದ್ಧಭೂಮಿಯಲ್ಲಿ ಬೀದಿವರಿದರು.

ಹೀಗೆ ಸುತ್ತುತ್ತ, ಹಾರುತ್ತ, ಕಡಿಯುತ್ತ, ಕೆಡಹುತ್ತ, ಕೂಗುತ್ತ, ಕುಪ್ಪಳಿಸುತ್ತ ಅರಿಸೈನ್ಯವನ್ನು ಸಂಹರಿಸುತ್ತಿರಲು, ಪರಬಲವು ಕಿಚ್ಚಿನ ನಾಲಗೆಗೆ ಸಿಕ್ಕಿದ ಒಣಹುಲ್ಲಿನಂತೆಯೂ, ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ತರಗೆಲೆಗಳಂತೆಯೂ, ಉರಿದುರಿದು ದಿಕ್ಕುದಿಕ್ಕಿಗೆ ಚದರಿಹೋಯಿತು. ಕೆಲವರು ಹಲ್ಲು ಕಚ್ಚಿದರು; ಕೆಲವರು ಹುತ್ತವೇರಿದರು: ಕೆಲವರು ಬಾಯಿಗೆ ಬೆರಳಿಟ್ಟರು.

ಇದನ್ನೆಲ್ಲ ದೂರದಿಂದಲೆ ನೋಡುತಿದ್ದ ಚಾಣಕ್ಯನು, ಕಿಡಿಕಿಡಿಯಾಗಿ ಉತ್ತರೀಯವನ್ನೆಳೆದು ನಡುವಿಗೆ ಬಿಗಿದು, ಜನಿವಾರವನ್ನು ಕಿವಿಗೆ ಸುತ್ತಿ ಕೈಯ ದಂಡವನ್ನು ಬಿಸುಟು, ಕತ್ತಿಯನ್ನು ಹಿಡಿದು, ಬಳಿಯಲ್ಲಿರುವ ಸವಾರನೊಬ್ಬನನ್ನು ಕೆಳಗೆಳೆದು ಹಾಕಿ, ತಾನು ಆ ಕುದುರೆಯ ಮೇಲೆ ಹಾರಿ, "ಆಃ! ಎಲ್ಲರೂ ಹೇಡಿಗಳಾಗಿ ಹೋದರು! ಇನ್ನೂ ಆ ನೀಚರು ಮಣ್ಣುಮುಕ್ಕಲಿಲ್ಲ! ನಾವೇ ಹೋಗಿ ಅವರಿಗೆ ನೀರು ಕೊಡುವೆವು!" ಎಂದು ಕಡಿವಾಣವನ್ನೆಳೆಯಲು, ಚಂದ್ರಗುಪ್ತನು ಉಕ್ಕಿನ ಅಂಗಿಯನ್ನು ತೊಟ್ಟು ವಜ್ರದ ಸೀಸಕವನ್ನಿಟ್ಟು, ಖಡ್ಗಚಾಪನಿಷಂಗಭಲ್ಲೆಯ ಸಮೇತ

ನಾಗಿ ಕುದುರೆಯನ್ನೇರಿದನು. ಆಗ ಸೇನಾಪತಿಗಳೂ ಸೈನಿಕರೂ ಮಸಗಿದರು.

ಈ ಗಡಿಬಿಡಿಯನ್ನೆಲ್ಲ ನೋಡಿ ರಾಕ್ಷಸನ ಕಡೆಯ ದೂತರು ಭಯಭ್ರಾಂತರಾಗಿ ಓಡಿಬಂದು, ಸುಖನಿದ್ರೆಯಿಂದಿರುವ ಅಮಾತ್ಯನನ್ನು ತಟ್ಟಿ ಎಬ್ಬಿಸಿ—"ನಂದರು ಜಪಶಾಲೆಗೆ ಹೋಗಿದ್ದಾರೆ! ಬೆಂಕಿ ಏಳುತ್ತಿದೆ! ಮೈಗಾವಲಿನವರು ಸೆರೆ ಸಿಕ್ಕಿದ ಮಲಯಕೇತುವನ್ನು ನೋಡಲಿಕ್ಕೆ ಹೋಗಿದ್ದಾರೆ' ಇಲ್ಲಿ ಗೂಡಾರವು ಸೂರೆಯಾಯಿತು! ಭದ್ರಭಟಾದಿಗಳು ಇಲ್ಲ! ವಿಪರೀತವಾಯಿತು! ಹೋಯಿತು! ಹೋ!" ಎಂದು ಬೊಬ್ಬಿಟ್ಟರು.

ರಾಕ್ಷಸನು ಥಕ್ಕನೆ ಎದ್ದು ಕುಳಿತು ವಿಸ್ಮಯದಿಂದ—"ಆಃ! ನಿದ್ದೆ ಬಂದು ಹೋಯಿತು! ಮೋಸವಾಯಿತು! ಕೆಲಸಕೆಟ್ಟಿತು! ಏನೆಲ್ಲ ಆಗಿಹೋಯಿತು?" ಎಂದು ಅಲ್ಲಿಂದಲೆ ಕುದುರೆಯನ್ನೇರಿ, ಕತ್ತಿಯನ್ನು ಝಳಪಿಸಿಕೊಂಡು ಓಡಿಬಂದನು.

ಈಚೆಗೆ ರಣರಂಗದಲ್ಲಿ ಖಾಡಾಖಾಡಿಯಾಗುತ್ತಿರಲು, ನಂದರು ನಾಲ್ಕು ದಿಕ್ಕುಗಳಲ್ಲಿಯೂ ಕಾಣಿಸಿಕೊಂಡು, ಒಂದೊಂದು ಖಡ್ಗಪ್ರಹಾರಕ್ಕೆ ಅರಿಗಳ ಹತ್ತೆಂಟು ತಲೆಗಳನ್ನು ಉದುರಿಸುತ್ತ, ಸೇನೆಯನ್ನು ಚದರಿಸುತ್ತಿರುವುದನ್ನೂ ಪರ್ವತಸೇನೆ ಕಂಗೆಟ್ಟು ಓಡುತ್ತಿರುವುದನ್ನೂ ನೋಡಿ ಚಾಣಕ್ಯನು, ಉರಿಯುವ ಕಿಚ್ಚಿಗೆ ತುಪ್ಪವೆರೆದಂತಾಗಲು, ಹೂಂಕರಿಸಿ ಕತ್ತಿಯನ್ನೆತ್ತಿಕೊಂಡು ನಿಮಿಷದಲ್ಲ ನಿಗ್ರಹಿಸುವೆನೆಂದು, ಓಡಿಬಂದು ಮೇಲೆ ಬೀಳಲು, ಆಃ! ಏನೆಂಬೆನು! ಒಡನೆಯೆ ಸಮುದ್ರವು ಮೇರೆದಪ್ಪಿ ಭೂಮಂಡಲವನ್ನು ಕವಿವಂತೆ ಓಡಿದ ಸೇನೆ ಎಲ್ಲವೂ ತಿರುಗಿಬಿದ್ದು ನಂದರನ್ನು ಮುಸುಕಲು, ಬೀಸಿದ ಸುಂಟುರೆಯ ರಭಸಕ್ಕೆ ಉದುರಿಬೀಳುವ ಮಾವಿನ ಹಣ್ಣುಗಳಂತೆ ನಿಮಿಷದಲ್ಲಿ ನಂದರ ತಲೆಗಳೆಲ್ಲ ನೆಲಕ್ಕುರುಳಿದುವು.

ರಾಕ್ಷಸನು ಬಂದು ನೋಡುತ್ತಾನೆ! ಏನನ್ನು? ಶತ್ರುಗಳ ಜಯಭೇರಿಯ ಕೋಲಾಹಲವು ದಿಙ್ಮಂಡಲವನ್ನು ಮುಸುಕುತಿತ್ತು. ಭೂಮಿಯಿಂದ ಆಕಾಶದ ವರೆಗೆ ಕೆಂದೂಳು ಆವರಿಸುತಿತ್ತು; "ಅಕಟಕಟಾ! ಹೋಯಿತು! ಹೋಯಿತು! ಅಯ್ಯೋ! ಹಾ, ದೈವವೇ!" ಎಂದು ಮತ್ತೂ

ಆಸೆಯಿಂದ ಓಡುತ್ತೋಡುತ ಬಂದು, ನಂದರ ಶವಗಳನ್ನು ನೋಡಿ, 'ಹಾ! ಎಂದು ಸಿಡಿಲು ಹೊಡೆದಂತಾಗಿ ಅಲ್ಲಿಯೆ ಕುಳಿತುಬಿಟ್ಟನು.

ಚಂದ್ರಗುಪ್ತನು ಶೇಖರನನ್ನು ಕರೆದು—"ಈ ನಂದರ ಶವಗಳನ್ನು ಶಾಸ್ತ್ರೋಕ್ತವಿಧಿಯಿಂದ ಸಂಸ್ಕಾರವನ್ನು ಮಾಡಿಸು" ಎಂದು ಹೇಳಿ, ತನ್ನ ಸ್ಥಾನಕ್ಕೆ ಹೊರಟುಹೋದನು.

ನಂದಸಂಹಾರ ವರ್ತಮಾನವು ಪಟ್ಟಣದಲ್ಲೆಲ್ಲ ಜನಜನಿತವಾಯಿತು. ಸರ್ವಾರ್ಥಸಿದ್ಧಿ ಮಹಾರಾಯನು ಪುತ್ರಶೋಕದಿಂದ ಧೊಪ್ಪನೆ ನೆಲಕ್ಕುರುಳಿ ಮೂರ್ಛಾಗತನಾದನು; ನಂದಭಾರ್ಯೆಯರೆಲ್ಲರೂ ಪತಿವಿಯೋಗ ದುಃಖವನ್ನು ತಡೆಯಲಾರದೆ ತಲೆತಲೆ ಚಚ್ಚಿಕೊಳ್ಳುತ್ತಲೂ, ಹೊಟ್ಟೆಗಳನ್ನು ಹಿಸುಕಿಕೊಳ್ಳುತ್ತಲೂ, ತಮ್ಮ ತಮ್ಮ ಪತಿಗಳ ಶವಗಳೊಡನೆ ಸಹಗಮನ ಮಾಡಿದರು.

ರಾಕ್ಷಸನು ಬಾಗುರಾಯಣನ ಬಳಿಗೆ ಬಂದು, ಅವನ ಮುಖವನ್ನು ನೋಡಿ ಮನಸ್ಸಿನೊಳಗೆ "ಇವರೆಲ್ಲರೂ ಬೇಕಾದ ಸಮಯದಲ್ಲಿ ಕೊರಳಕೊಯಿದುಬಿಟ್ಟರು" ಎಂದುಕೊಂಡು, "ಸೇನಾಪತಿ! ಮಾಡುವುದೇನು? ಕಳೆದುದೆಲ್ಲ ಕಳೆದುಹೋಯಿತು! ಸರ್ವಾರ್ಥಸಿದ್ಧಿ ಮಹಾರಾಯನು ಮುದುಕನು, ಸಾಯುವ ಕಾಲಕ್ಕೆ ಬಾಯಿಗಿಷ್ಟು ನೀರು ಸಹ ಬಿಡುವವರಿಲ್ಲವೆಂದಾಗಿ ಹೋಯಿತು; ಮಿಂಚಿಹೋದುದಕ್ಕೆ ಚಿಂತಿಸಿ ಫಲವಿಲ್ಲ; ಆಯಿತು! ಕಡಿದ ನೀರು ಕಟ್ಟಕ್ಕೆ ಬಾರದಷ್ಟೆ? ಚಂದ್ರಗುಪ್ತನಾದರೂ ಅನ್ಯನಲ್ಲ; ವೃದ್ಧರಾಜರಿಗೆ ಮೊಮ್ಮಗನೆ; ನಾನಿನ್ನು ಯಾವತರದ ಸಾಹಸಕ್ಕೂ ಹೋಗುವುದಿಲ್ಲ; ಇಲ್ಲಿ ನಿಲ್ಲುವುದೂ ಇಲ್ಲ; ಯಾಕೆಂದರೆ—ನನ್ನ ಮೇಲೆ ಚಂದ್ರಗುಪ್ತನಿಗೆ ಏನೆಂದರೂ ಮನಸ್ಸು ಸಮಾಧಾನವಾಗಲಿಕ್ಕಿಲ್ಲ; ವೈರಿಗಳು ಪುರವನ್ನು ಮುತ್ತಿ ಸೂರೆಮಾಡುವುದಕ್ಕಿಂತ ಮೊದಲೆ ಅದರ ಬೀಗದ ಕೈಗಳನ್ನು ನೀನು ಚಂದ್ರಗುಪ್ತನಿಗೆ ಒಪ್ಪಿಸು" ಎಂದು ಹೇಳಿ, ಅಲ್ಲಿಂದ ವೃದ್ಧರಾಯನಲ್ಲಿಗೆ ಬಂದನು.

ತಾಂಡವ ಮುನಿಯು ತಂದೆತಾಯಿಗಳಂತೆ ಬಾಯಾರಿ ಮರುಗುತ್ತಿರುವ ವೃದ್ಧದಂಪತಿಗಳನ್ನು ಕಂಡು, ತಾನೂ ಅವರೊಡನೆ ದುಃಖಪಟ್ಟು, ಕಡೆಗೆ "ಮೀರಿಹೋದ ಕೆಲಸಕ್ಕೆ ಹೋರಿ ಫಲವೇನು?" ಎಂದು ಹೇಗಾ

ದರೂ ಅವರನ್ನು ಒಡಂಬಡಿಸಿದಂತೆ ಮಾಡಿ, ತನ್ನ ಮನೆಗೆ ಬಂದು ಸೇರಿದನು.

ಆಗ ಸೂರ್ಯೋದಯವಾಯಿತು. ಚಾಣಕ್ಯನ ಆಜ್ಞೆಯಂತೆ ಸೈನ್ಯವೆಲ್ಲವೂ ಬಂದು ಪಾಟಲೀಪುರವನ್ನು ಮುತ್ತಿತು. ಕೂಡಲೆ ಪುರರಕ್ಷಕನು ಬಂದು ಚಂದ್ರಗುಪ್ತನನ್ನು ಕಂಡು, ಬೀಗದ ಕೈಯನ್ನು ಒಪ್ಪಿಸಿ, ಬಾಯಿಗೆ ಕೈಮುಚ್ಚಿಕೊಂಡು ದೂರದಲ್ಲಿಯೆ ನಿಂತಿದ್ದನು.

ಚಂದ್ರಗುಪ್ತನು ಅವನನ್ನು ನೋಡಿ—"ಸೇನಾಪತಿಗಳು ಎಲ್ಲಿ?" ಎಂದು ಕೇಳಿದನು. ಅದಕ್ಕವನು—"ಜೀಯಾ! ಚದರಿಹೋದ ಸೇನೆಯನ್ನೆಲ್ಲ ಒಟ್ಟು ಕೂಡಿಸಿಕೊಂಡು ಬರುತ್ತಾರೆ, ನನ್ನನ್ನು ಮುಂದಾಗಿ ಕಳುಹಿಸಿದರು" ಎಂದನು.

ಅನಂತರ ಬಂದವರನ್ನೆಲ್ಲ ಚಂದ್ರಗುಪ್ತನು ಉಚಿತಪ್ರಕಾರವಾಗಿ ಕಾಣಿಸಿಕೊಂಡು, ಮರ್ಯಾದೆಗಳನ್ನು ಮಾಡಿ, "ಎಲ್ಲರೂ ಮೊದಲಿದ್ದ ಕೆಲಸಗಳಲ್ಲಿಯೆ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿರಿ" ಎಂದು ವಿನಯಪೂರ್ವಕವಾಗಿ ಹೇಳಿಕಳುಹಿಸಿ ತನ್ನ ಸ್ಥಾನಕ್ಕೆ ಹೊರಟುಹೋದನು.

|| ಪೂರ್ವತಂತ್ರ ಸಮಾಪ್ತಿ ||



# ಉತ್ತರತಂತ್ರ

## ೧. ವಿಷಕನ್ಯಾಗಮನ

"ಎಲ್ಲರೂ ಬಂದು ಚಂದ್ರಗುಪ್ತನನ್ನು ಕಾಣಿಸಿಕೊಂಡರು, ರಾಕ್ಷಸನೊಬ್ಬನು ಇನ್ನೂ ಕಾಣುವುದಿಲ್ಲ, ಇದಕ್ಕೆ ಕಾರಣವೇನು?" ಎಂದು ಯೋಚಿಸಿ ಚಾಣಕ್ಯನು ದೂತರನ್ನು ಕರೆದು "ನೀವು ಹೋಗಿ, ಅಮಾತ್ಯರು ಎಲ್ಲಿ ಇದ್ದಾರೆ? ಏನು ಮಾಡುತ್ತಾರೆ? ನೋಡಿ ಬನ್ನಿರಿ" ಎಂದು ಹೇಳಿ ಕಳುಹಿಸಿದನು.

ಅವರು ಬಂದು ರಾಕ್ಷಸನ ಮನೆಯಲ್ಲಿ ನೋಡಿ, ಯಾರನ್ನೂ ಕಾಣದೆ ಅವನ ಮನೆಯ ಕರಣಿಕನಾದ ಶಕಟದಾಸನಲ್ಲಿಗೆ ಹೋಗಿ ಕೇಳಿದರು. ಅದಕ್ಕೆ ಅವನು—"ಅಮಾತ್ಯರು ಯುದ್ಧಕ್ಕೆ ಹೊರಟುಹೋಗುವುದನ್ನು ನೋಡಿದ್ದೆನೆ, ಇದು ವರೆಗೂ ಬರಲಿಲ್ಲ" ಎಂದನು.

ದೂತರು ಬಾಗಿಲು ಕಾಯುವವರೊಡನೆ ಕೇಳಿದರು. ಅವರು "ಒಳಗೆ ಬಂದುದನ್ನು ನೋಡಿದ್ದೇವೆ" ಎಂದು ಹೇಳಿದರು. ಅನಂತರ ಚಾರರು ಬಂದು ಹೀಗೆ ಚಾಣಕ್ಯನಿಗೆ ತಿಳಿಸಿದರು.

ಚಾಣಕ್ಯನು ಅವರನ್ನು "ಹೂಂ" ಎಂದು ಕಳುಹಿಸಿ, ಶೇಖರನನ್ನು ನೋಡಿ,—"ಇಷ್ಟು ಸೈನ್ಯಗಳು ಒಂದೆ ಕಡೆಯಲ್ಲಿದ್ದರೆ ಅದರಿಂದ ಏನಾದರೂ ರೋಗಾದಿಗಳು ಹುಟ್ಟದೆ ಇರಲಿಕ್ಕಿಲ್ಲ; ಆದುದರಿಂದ ರಾಯರ ಮೈಗಾವಲಿಗೆ ಬೇಕಾದಷ್ಟು ಸೇನೆಯನ್ನು ಮಾತ್ರ ನಿಲ್ಲಿಸಿಕೊಂಡು, ಮಿಕ್ಕವರನ್ನೆಲ್ಲ ಹಿಂದೆ ಕಳುಹಿಸಿಬಿಡು, ಇದನ್ನು ನಿಮ್ಮ ಅರಸರಿಗೂ ತಿಳಿಸು" ಎಂದನು.

ಶೇಖರನು ಬಂದು ಚಾಣಕ್ಯರು ಹೀಗೆ ಹೇಳಿದರೆಂದು ಪರ್ವತೇಶ್ವರನಿಗೆ ಅರಿಕೆಮಾಡಿದನು. ಅವನು—"ಹೌದು, ಹೌದು! ಚಾಣಕ್ಯರು ಹೇಳಿದ ಮಾತು ಸರಿ; ಹಾಗೆಯೆ ಮಾಡಿಸು" ಎಂದನು. ಶೇಖರನು ಹಾಗೆಯೆ ಅಪ್ಪಣೆ ಮಾಡಿದನು.

ಚಂದ್ರಗುಪ್ತ ಚಾಣಕ್ಯರು ಮಿತಪರಿವಾರದಿಂದ ಮಿಲಿತರಾಗಿ ಆಸ್ಥಾನದಲ್ಲಿ ಕುಳಿತಿದ್ದರು. ಆ ಸಮಯದಲ್ಲಿ ಬಡನಡು ಬಳುಕುತ್ತ, ಸೊಕ್ಕಿ ಸೋಲುತ್ತ, ಬೆಡಗುಬೀರುತ್ತ, ಲಾವಣ್ಯವೆ ಸ್ತ್ರೀರೂಪುಗೊಂಡು ಬರುತ್ತಿದೆ ಎಂದು ಇಕ್ಕಡೆಗಳಲ್ಲಿ ಕುಳಿತವರೂ ಭ್ರಮಿಸುತ್ತಿರಲು, ಹದಿನಾರು ವರುಷದ ದಿವ್ಯಸುಂದರಿಯಾದ ಯುವತಿಯೊಬ್ಬಳನ್ನು ಒಟ್ಟಿಗೆ ಕರೆದುಕೊಂಡು ಬರುವ ಬುದ್ಧಸನ್ಯಾಸಿಯನ್ನು ನೋಡಿ, ಚಾಣಕ್ಯನು—"ಅಯ್ಯಾ! ನೀವು ಯಾರು? ಎಲ್ಲಿಂದ ಬಂದಿರಿ? ಇವಳು ಯಾರು? ನಿಮಗೆ ಎಲ್ಲಿಂದ ಸಿಕ್ಕಿದಳು? ಏನು ತಾನು, ಕುಳಿತುಕೊಳ್ಳಿರಿ, ಹೇಳಿರಿ" ಎಂದನು.

ಅವನು ಕುಳಿತುಕೊಂಡು—"ಮಹಾರಾಜ್! ನಾನು ಅಮಾತ್ಯನ ಮಿತ್ರನು; ನನ್ನ ಹೆಸರು ಜೀವಸಿದ್ಧಿ ಎಂದು; ಇವಳು ಸೆರೆಸಿಕ್ಕದ ವಲ್ಲಭ ರಾಯನ ಮಗಳು; ರಾಕ್ಷಸನೆ ಇವಳನ್ನು ಇದುವರೆಗೆ ಸಾಕಿ, ವಿದ್ಯಾಬುದ್ಧಿಗಳನ್ನೆಲ್ಲ ಕಲಿಸಿ, ಇಷ್ಟು ಮಾಡಿದವನು; ಜ್ಯೇಷ್ಟನಂದನಿಗೆ ಇವಳನ್ನು ರಾಣಿಯನ್ನಾಗಿ ಮಾಡಬೇಕೆಂದು ಯೋಚಿಸಿದ್ದನಂತೆ; ಏನು ಮಾಡುವುದು? ಹೀಗೆಲ್ಲ ಆಗಿಹೋಯಿತು! ರಾಕ್ಷಸನು ಎಲ್ಲಿಗೊ ತಲೆತಪ್ಪಿಸಿಕೊಂಡು ಓಡಿ ಹೋದನು; ಪಾಪ! ಇವಳೊಬ್ಬಳು ದಿಕ್ಕಿಲ್ಲದೆ ಕಷ್ಟಪಡುತ್ತಾಳೆ, ನೋಡಿ ನನಗೆ ಮನಸ್ಸು ಕರಗಿತು. 'ಹೆದರಬೇಡಾ!' ಎಂದು ಧೈರ್ಯಹೇಳಿ ಕರೆದುಕೊಂಡು ಬಂದೆನು; ನಮ್ಮ ಹೊಸ ಅರಸನಾದ ಚಂದ್ರಗುಪ್ತರಿಗೆ ವೀಳೆಯವನ್ನು ಕೊಡುವುದಕ್ಕಾಗಲಿ, ಪಾದಸೇವೆ ಮಾಡುವುದಕ್ಕಾಗಲಿ ಇವಳು ತಕ್ಕವಳು" ಎಂದು ಹೇಳಿ, ಓರೆನೋಟದಿಂದ ಒಮ್ಮೆ ಚಾಣಕ್ಯನ ಮೋರೆಯನ್ನು ನೋಡಿ,—ಅಯ್ಯಾ ಚಾಣಕ್ಯರೆ! ಇವಳು ನಾಡಾಡಿ ಹೆಣ್ಣೆಂದು ತಿಳಿಯಬೇಡಿರಿ; ಅರ್ಜುನನ ಮನಸ್ಸನ್ನು ಅಪಹರಿಸಿದ ಉಲೂಪಿಯಂತೆ ಬಹು ಚತುರಳು, ಕಾಳಸರ್ಪದಂತೆ ತೋರುವ ರೋಮರಾಜಿಯಿಂದ ಇವಳು ರಸಿಕರ ಮನಸ್ಸನ್ನು ಸೆಳೆಯುವಳು; ಮುಕ್ಕಣ್ಣನ ಕೊರಳ ಕರ್ವೆಳಗಿನಂತೆ ತೋರುವ ಜಡೆಮುಡಿಯಿಂದ ಇನಿಯನ ಚಿತ್ತವೃತ್ತಿಯನ್ನು ಮೋಹಗೊಳಿಸುವಳು; ಇವಳ ಒಡನಾಡಿದ ವಲ್ಲಭನು ಇವಳನ್ನಾಗಲಿ ಇವಳ ಶಯನಗೃಹವನ್ನಾಗಲಿ ಎಂದೆಂದಿಗೂ ಬಿಟ್ಟು ಮರಳಿಬಾರನು." ಎಂದು ಹೇಳಿದನು.

"ಸರಿ! ಸರಿ! ಅರ್ಥಗರ್ಭಿತವಾದ ಮಾತಿದು; ತಿಳಿಯಿತು" ಎಂದು ಮನಸ್ಸಿನಲ್ಲಿ ಎಂದುಕೊಂಡು, ಚಾಣಕ್ಯನು ದೂತರನ್ನು ನೋಡಿ—" ಆ ಹಿಡಿ

ದು ತಂದ ಗಿಳಿಗಳಿಗೆ ಮಾತು ಕಲಿಸಿದೆಯೊ, ಇಲ್ಲವೊ? ಆ ಪಾರಾವತ ಚಕೋರಗಳು ಹೇಗೆ ಪುಷ್ಟವಾಗಿಯೊ ಏನು? ನೋಡಬೇಕು, ತನ್ನಿರಿ" ಎಂದು ಪಂಜರಗಳನ್ನು ತರಿಸಿ ಮುಂದಿರಿಸಿ ನೋಡಿದನು. ಗಿಳಿಗಳು ಆಕೆಯನ್ನು ನೋಡಿ, "ಕೀರಿ" ಎಂದು ಅರಚಿದುವು. ಪಾರಾವತ ಚಕೋರಗಳು ರೆಕ್ಕೆಗಳನ್ನು ಪಟಪಟನೆ ಬಡಿದುಕೊಂಡು ಸತ್ತುಹೋದುವು.

"ಹೋ! ಇವಳು ವಿಷಕನ್ಯೆ ಹೌದು! ಎಂದು ನಿಶ್ಚಯಿಸಿ ಚಾಣಕ್ಯನು ಆ ಪಕ್ಷಿಗಳ ಪೋಷಕರನ್ನು ನೋಡಿ—"ಸರಿಯಾಗಿ ಆಹಾರ ಕೊಡದೆ ಹಕ್ಕಿಗಳನ್ನು ಕೊಂದಿರಿ, ನೋಡಿರಿ! ಜಾಗ್ರತೆ! ಹೂಂ! ಎಂದು ಕಣ್ಣು ಕೆಂಪುಮಾಡಿ ದಟ್ಟಿಸಿ, ಅವರನ್ನು ಕಳುಹಿಸಿ, ತಿರುಗಿ ಕ್ಷಪಣಕನನ್ನು ನೋಡಿ—"ಜೀವಸಿದ್ಧೀ! ನಿಮ್ಮನ್ನಿಲ್ಲಿ ಕುಳ್ಳಿರಿಸಿ ಬೇರೆ ಕೆಲಸಕ್ಕೆ ಕೈಹಾಕಿದೆನೆಂದು ಬೇಸರು ಪಡಬೇಡಿರಿ; ನೀವು ಬಂದ ಕೆಲಸವು ಆಗಬಹುದಾಗಿತ್ತು; ಮಾಡುವುದೇನು? ನಮ್ಮ ಚಂದ್ರಗುಪ್ತನು ಏಕಪತ್ನೀ ವ್ರತದವನು, ನೀವಿವಳನ್ನು ಪರ್ವತರಾಯನಿಗೆ ಒಪ್ಪಿಸಿರಿ, ಅವನಿಗೆ ಸಂತೋಷವಾದರೆ ನಮಗೂ ಸಂತೋಷವೆ, ಹೋಗಿರಿ"ಎಂದು ಅವರನ್ನು ಕಳುಹಿಸಿದನು.

ಬಳಿಕ ಹೀಗೆ ನೋಡಿ ಚಾಣಕ್ಯನು ಒಂದು ಕಾಗದವನ್ನು ಬರೆದು, ತನ್ನ ಶಿಷ್ಯನನ್ನು ಕರೆದು ಅವನ ಕೈಯಲ್ಲಿ ಕೊಟ್ಟು ಕಿವಿಯಲ್ಲಿ ಏನೋ ಹೇಳಿ ಕಳುಹಿಸಿದನು. ಅವನು ಕಾಗದವನ್ನು ತಂದು ಸಿದ್ಧಾರ್ಥಕನಿಗೆ ಮುಟ್ಟಿಸಿದನು. ಸಿದ್ಧಾರ್ಥಕನು ಅದನ್ನು ಓದಿ ನೋಡಿಕೊಂಡು 'ಬಾಗುರಾಯಣನಿದ್ದಲ್ಲಿಗೆ ಬಂದು ಕಾಗದವನ್ನು ತೋರಿಸಿ, "ಹೀಗೆ ಹೀಗೆ ಮಾಡಬೇಕು" ಎಂದು ಹೇಳಿ ಹೋದನು.

## ೨. ಪರ್ವತೇಶ್ವರನ ದೀರ್ಘನಿದ್ರೆ

ರಾತ್ರೆ ಮೊದಲನೆಯ ಜಾವದಲ್ಲಿ ಪರ್ವತರಾಯನು ಊಟವನ್ನು ತೀರಿಸಿ, ವೀಳೆಯನ್ನು ಹಾಕಿಕೊಂಡು, ಗೂಡಾರದೊಳಗೆ ಮಂಚದ ಮೇಲೆ ಕುಳಿತಿದ್ದನು. ಹೊರಗಿನಿಂದ "ಓಯೇ! ನಾವು ಬಂದಿದ್ದೇವೆ." ಎಂದು ಯಾರೊ ಹೇಳಿದಂತೆ ಕೇಳಿತು. ರಾಯನು ದೂತರ ಮುಖವನ್ನು ನೋಡಲು, ಅವರು ಹೋಗಿ ನೋಡಿ ಬಂದು—"ಯಾರೋ ಒಬ್ಬನು

ಸನ್ಯಾಸಿಯೂ, ಒಂದು ಹುಡುಗಿಯೂ ಬಂದು ತಮ್ಮ ದರ್ಶನವನ್ನು ನಿರೀಕ್ಷಿಸುತಿದ್ದಾರೆ" ಎಂದರು ರಾಯನು "ಬರಲಿ" ಎಂದು ಹೇಳಿದನು.

ದೂತರು ಹೋಗಿ ಕರೆಯಲು, ಕ್ಷಪಣಕನೂ ಯುವತಿಯೂ ಬಂದು ಮುಂದೆ ನಿಂದರು. ಆಗ ಆಕೆ ಮೇಲುದನ್ನು ಬರಸೆಳೆದು ಕುತ್ತಿ ಕೊಳ್ಳುತ್ತ, ಕೈಯ್ಯ ಕಡಗಗಳನ್ನು ನೆಟ್ಟನೆ ಸರಿಮಾಡಿಕೊಳ್ಳುತ್ತ, ನಡುವಿನಲ್ಲುಟ್ಟ ಸೀರೆಯನ್ನು ಬಿಗಿದು ಕಟ್ಟಿಕೊಳ್ಳುತ್ತ, ಕೈಬಳೆಗಳು ಗಿಲಿಗಿಲಿ ಕೆನ್ನಲು, ಕಾಲ್ಗಡಗಗಳು ಝುಣಝುಣವೆನ್ನಲು, ಮಂಜೀರವು ಗಿಜಿಗಿಜಿ ಯೆನ್ನಲು, ಕೊರಳನ್ನೊರುಗಿಸಿಕೊಂಡು ಜಗ್ಗುಮೆಟ್ಟುತ್ತ ರಾಯನ ಮುಂದೆ ಬಂದು, ನಿಂದು ಕಡೆಗಣ್ಣಿನಾಕಾಂತಿಯನ್ನೊಮ್ಮೆ ಆವನ ಮುಖದ ಮೇಲೆ ಬೀರಿ, ನಮಸ್ಕರಿಸಿ, ಕ್ಷಪಣಕನ ಹಿಂದೆ ಬಂದು ನಿಂತುಕೊಂಡಳು.

ಪರ್ವತರಾಯನಿಗೆ ಮೂರು ಲೋಕವೂ ಒಮ್ಮೆಯೆ ತೋರಿಹೋಯಿತು. "ಯಾರಯ್ಯಾ ಇವಳು? ಸುರಸುಂದರಿ! ಇವಳು ಕೇಳಿಬಿಟ್ಟರೆ ಪ್ರಾಣವನ್ನಾದರೂ ಒಪ್ಪಿಸಿ ಬಿಟ್ಟೇನು" ಎಂದು ಯೋಚಿಸುತ್ತ ಕ್ಷಪಣಕನನ್ನು ನೋಡಿ—"ನೀವು ಯಾರಯ್ಯಾ? ಎಲ್ಲಿಂದ ಬಂದಿರಿ? ನಿಮ್ಮನ್ನು ನೋಡಿದರೆ ಸನ್ಯಾಸಿಯಂತೆ ಕಾಣುತ್ತದೆ! ನಿಮಗೆ ಇವಳು ಎಲ್ಲಿಂದ ಗಂಟುಬಿದ್ದಳು?" ಎಂದು ಕೇಳಿದನು.

ಆದಕ್ಕೆ ಕ್ಷಪಣಕನು—"ರಾಯರೆ! ಇವಳು ಅಮಾತ್ಯರಾಕ್ಷಸನು ಸಾಕಿದ ಹುಡುಗಿ. ನಾನು ಅಮಾತ್ಯನ ಸ್ನೇಹಿತನು, ನನ್ನ ಹೆಸರು ಜೀವಸಿದ್ಧಿ. ತಮ್ಮ ಅನುಗ್ರಹದಿಂದ ಚಂದ್ರಗುಪ್ತನಿಗೆ ತನ್ನಲ್ಲಿರುವ ದ್ವೇಷವನ್ನು ಇಲ್ಲದಂತೆ ಮಾಡಿಕೊಳ್ಳಬೇಕೆಂದು ರಾಕ್ಷಸನು ತಮಗೆ ಕಾಣಿಕೆಯಾಗಿ ಇವಳನ್ನು ಕಳುಹಿಸಿದನು. ಸ್ವೀಕರಿಸಬೇಕು" ಎಂದನು.

ಪರ್ವತರಾಯನು—"ಓಹೋ! ಹಾಗೋ? ಅಮಾತ್ಯರು ಇದಕ್ಕೆ ಇಷ್ಟೆಲ್ಲ ಮಾಡಬೇಕಾಗಿತ್ತೇ? ನಾವು ಮೊದಲಿನಿಂದಲೂ ಎರೆದ ನೀರು ಸೋರದಂತೆ ಬಲು ಎರಕವಾಗಿದ್ದವರು; ನಮಗೆ ಯಾವಾಗಲೂ ಕೊರಳಿನಲ್ಲೆ ಜೀವವು; ಎಡೆಯಲ್ಲಿ ಇದೊಂದು ಬಂದು ಹೋಯಿತು, ಏನು ಮಾಡುವುದು' ವಿಷಗಳಿಗೆಯಲ್ಲಿ ಬಂದ ಜಗಳವು ಅಮೃತಗಳಿಗೆಯಲ್ಲಿ ಶಾಂತವಾಗುವುದು. ಕಳೆದುದು ಹೋಗಲಿ; ನಾವು ಹೇಳಿದ್ದೇವೆಂದು ಹೇಳಬೇಕು, ಇನ್ನು ಮೇಲೆ ಅಮಾತ್ಯರಿಗೆ ಚಂದ್ರಗುಪ್ತನು ಹೆದರಿಕೆ ಬೇಡ; ಎಲ್ಲದಕ್ಕೂ

ನಾನಿದ್ದೇನೆ; ನಾನಿರುವಾಗ ಅವರಿಗೇನು ಕಡಮೆ? ಬರಲಿಕ್ಕೆ ಹೇಳಿರಿ; ಒಂದು ವೇಳೆ ಚಂದ್ರಗುಪ್ತನು ತಿರಸ್ಕರಿಸಿ ಬಿಟ್ಟರೆ ನಮ್ಮ ಹಕ್ಕಿನ ಅರ್ಧ ರಾಜ್ಯವನ್ನು ಕೊಟ್ಟುಬಿಡುವೆವು" ಎಂದನು.

"ಹಾಗೆಯೆ ಹೇಳುತ್ತೇನೆ" ಎಂದು ಕ್ಷಪಣಕನು ಹುಡುಗಿಯನ್ನು ಕುರಿತು—"ಆಯಿತಲ್ಲ! ನಿನಗೆ ಯೋಗ್ಯನಾದ ಗಂಡನು ಸಿಕ್ಕಿದನು; ಇನ್ನು ಅವನ ಮನಸ್ಸಿಗೆ ತಕ್ಕಂತೆ ನಡೆದುಕೊ, ನಾನು ಇಲ್ಲಿಯೇ ಇರುತ್ತೇನೆ, ಎಂದು ತನ್ನಷ್ಟಕ್ಕೆ ತಾನು "ಅಬ್ಬಬ್ಬ! ಒಂದು ಹೊರೆ ಇಳಿದ ಹಾಗಾಯಿತು" ಎಂದು ಹೇಳಿ, ರಾಯನನ್ನು ನೋಡಿ—'ಅಯ್ಯಾ! ಕನ್ನಿಕೆಯನ್ನು ಪರಿಗ್ರಹಿಸಬೇಕು,' ಎಂದು ತನ್ನ ನವಿಲುಗರಿಯ ಸೂಡಿಯಿಂದ ಕನ್ನಿಕೆಯನ್ನು ಅವನ ಕೈಗೆ ಒಪ್ಪಿಸಿದನು.

ಅರಸನು ಪಾಣಿಗ್ರಹಣಮಾಡಿಕೊಂಡು, ಅಭಿನವರಮಣಿಯೊಡನೆ ಮಹಾಸಂತೋಷದಿಂದ ಸಜ್ಜೆಮನೆಗೆ ಹೋಗಿ ಮಲಗಿಕೊಂಡನು. ಸ್ವಲ್ಪ ಸಮಯದಲ್ಲಿ ಕಣ್ಣುಗಳು ತಿರುಗಿ ತಿರುಗಿ ಬರಲಿಕ್ಕಾರಂಭವಾದುವು; ಮೇಲುಬ್ಬಸಕ್ಕೆ ಮೊದಲಾಯಿತು; "ಗುರೂ" ಎಂದು ಗಂಟಲಿನಿಂದ ಒಂದು ಶ್ವಾಸವು ಕೇಳಿತು; "ಕಟಿಕ್" ಎಂಬೊಂದು ಶಬ್ದವು ಕೇಳಿದುದೆ ಸರಿ ಅಡ್ಡನಾಲಗೆ ಕಚ್ಚಿದನು.

ಪ್ರಿಯನು ಮೃತನಾದುದನ್ನು ನೋಡಿ, ಅವಳು ದುಃಖಾತಿರೇಕದಿಂದ ಎದ್ದು—"ಹಾ! ಪಾಪಿಷ್ಠೆಯಾದ ನನ್ನನ್ನು ಒಡಗೂಡಿದೊಡನೆಯೆ ಅರಸನು ಪರಲೋಕವಾಸಿಯಾದನು. ಮಾಡುವುದೇನು? ಒಡೆಯನಾದ ಅಮಾತ್ಯನು ನನ್ನನ್ನು ಜೀವಸಿದ್ಧಿಯ ವಶಕ್ಕೆ ಕೊಟ್ಟು 'ಆತನು ಹೇಳಿದಂತೆ ನಡೆದುಕೊ ಎಂದು ಹೇಳಿದನು, ಆತನು ಹೇಳಿದಂತೆ ಸ್ವಾಮಿಕಾರ್ಯವನ್ನು ಮಾಡಿದರೂ ರಾಜಹತ್ಯಾದೋಷವೊಂದು ನನ್ನ ಸೆರಗಿನಲ್ಲಿ ಬಿತ್ತು! ಅಯ್ಯೋ! ಏನು ಮಾಡಲಿ? ಜೀವಸಿದ್ಧಿ ಎಲ್ಲಿ?' ಎಂದು ವ್ಯಸನದಿಂದ ಅತ್ತಿತ್ತ ನೋಡಿ ಕೊಂಡು ಹೊರಹೊರಟಳು.

ಕಂಚುಕಿಗಳು ಅವಳನ್ನು ನೋಡಿ—ಹೀಗೆ ಇಂತಹ ಹೆಂಗುಸರು ನಮ್ಮ ರಾಯರಲ್ಲಿಗೆ ಎಷ್ಟೊ ಬರುತ್ತಾರೆ, ಹೋಗುತ್ತಾರೆ ಎಂದು ತಡೆಯದೆ ಬಿಟ್ಟರು. ಅವಳು 'ಜೀವಸಿದ್ಧೀ!' ಎಂದು ಕೂಗುತ್ತ ಹೇಳಿದಳು.

## ೩. ಮಲಯಕೇತು ಬಾಗುರಾಯಣರ ಸಖ್ಯ

ನಡುವಿರುಳು; ಉಟ್ಟುಕೊಂಡಿದ್ದ ಪಂಚೆ ಮಾತ್ರ; ಜೀನು ಕಡಿವಾಣಗಳೇನೂ ಇಲ್ಲದ ಬತ್ತಲೆ ಕುದುರೆಯೊಂದನ್ನೇರಿ, ಚಬುಕು ಮಾಡಿಕೊಂಡು ಅತಿವೇಗದಿಂದ ಮಲುಯಕೇತುವಿನ ಗೂಡಾರದ ಬಳಿಗೆ ಬಂದು ನಿಂದು ಬಾಗುರಾಯಣನು—'ನಾನು ಬಂದಿದ್ದೇನೆ, ಪಕ್ಕನೆ ನಿಮ್ಮ ಮಲಿಯಕೇತುವಿನ್ನು ಎಬ್ಬಿಸಿಕೊಂಡು ಬನ್ನಿರಿ, ಹೂಂ; ಹೂಂ; ಎಂದು ಅವಸರದ ಗಡಿಬಿಡಿಯಿಂದ ಹೇಳಿದನು.

ಬಾಗಿಲು ಕಾಯುವವರು ಗಾಬರಿಗೊಂಡು, ಬೇಗ ಬೇಗನೆ ಒಳಗೆ ಹೋಗಿ ಅರಸುಮಗನಿಗೆ ಕೈ ಮುಗಿದು—'ಜೀಯ! ಬಾಗುರಾಯಣನು ಬತ್ತಲೆ ಕುದುರೆಯೊಂದನ್ನು ಹತ್ತಿ ಓಡಿಸಿಕೊಂಡು ಬಂದು ನಿಮ್ಮನ್ನು ಕಾಣಬೇಕೆಂದು ಹೊರಬಾಗಲಲ್ಲಿ ನಿಂತಿದ್ದಾನೆ' ಎಂದು ಅರಿಕೆಮಾಡಿದರು.

'ಇದೇನು ಆಶ್ಚರ್ಯವು?' ಎಂದು ಮಲಯಕೇತು ಎದ್ದು, ಹೊರಗೆ ಬಂದು ಬಾಗುರಾಯಣನನ್ನು ನೋಡಿ—'ಏನಯ್ಯಾ? ಇದೇನು? ಏನು? ಎಂದು ಕೇಳಿದನು.

ಬಾಗುರಾಯಣನು—'ಕುಮಾರನೆ! ನಿನ್ನಿಂದಾಗಿ ನನಗೆ ಹೀಗಾಯಿತು' ಎಂದನು. ಹಾಗೆಂದರೆ! ಏನೆಂದು ಮಲಯಕೇತು ಕೇಳಲು—'ಅದನ್ನೆಲ್ಲ ಮತ್ತೆ ಹೇಳುತ್ತೇನೆ; ನೀನೀಗ ಇಲ್ಲಿ ಒಂದು ಕ್ಷಣ ನಿಂದರೆ ನಿನ್ನ ಜೀವವು ಉಳಿಯುವುದಿಲ್ಲ; ಬಾ! ಬಾ! ನನ್ನ ಈ ಬತ್ತಲೆ ಕುದುರೆಯನ್ನಾದರೂ ಹತ್ತಿ ಓಡಿ ಬಾ! ಚಾಣಕ್ಯ! ಚಾಣಕ್ಯ! ಹೊರಡು, ಹೊರಡು, ಹೂಂ, ನಿಲ್ಲಬೇಡ; ಅಕೋ! ಬಂತು! ಬಂತು!' ಎಂದನು.

ಮಲಯಕೇತು ಏನೆಂದು ತಿಳಿಯದೆ ಕಕ್ಕಾಬಿಕ್ಕಿಯಾಗಿ ಅತ್ತಿತ್ತ ನೋಡುತ್ತಿರುವಾಗ, ಅಪರಿಮಿತ ಸೈನಿಕರು ಕೈಗಳಲ್ಲಿ ಆಯುಧಗಳನ್ನು ಝಳಪಿಸಿಕೊಂಡು ಬರುತ್ತಿರುವುದನ್ನು ಕಂಡನು. ನೋಡಿದೊಡನೆಯೆ ಜೀವ ಹಾರಿದಂತಾಯಿತು. 'ನಮ್ಮ ತಂದೇ! ನಮ್ಮ ತಂದೇ!' ಎಂದು ಕೂಗುತ್ತ ಓಡಿ ಬಂದು, ಬಾಗಿಲಲ್ಲಿದ್ದ ಜೀನಿಲ್ಲದ ಕುದುರೆಯನ್ನೇರಲು ಬಾಗುರಾಯಣನು 'ತಂದೆಯ ವಿಚಾರವನ್ನು ಮತ್ತೆ ಹೇಳುತ್ತೇನೆ, ತಡ ಮಾಡದೆ ನಡೇ! ನಡೇ!' ಎಂದು ಅವಸರಪಡಿಸಿದನು. ರಾಜಪುತ್ರನು ಗಡಿಬಿಡಿಯಿಂದ ಕುದುರೆಯನ್ನೋಡಿಸಿದನು. ಇದನ್ನು ನೋಡಿ ಮೈ

ಗಾವಲಿನವರು ಹಿಂದೆಯೆ ಓಡಿಬಂದರು. ಸಾಧಾರಣ ದಂಡಿನ ಪಾಳೆಯವನ್ನು ದಾಟಿ ಅರ್ಧಯೋಜನ ಮುಂದೆ ಬಂದರು. ಬಳಿಕ ಅಲ್ಲೊಂದು ಗುಡ್ಡದಲ್ಲಿ ಇಳಿದು ಕುಳಿತುಕೊಂಡು ಬಾಗುರಾಯಣನು ರಾಜಕುಮಾರನೊಡನೆ ಹೇಳುತ್ತಾನೆ—

'ಅಯ್ಯಾ! ರಾಜಕುಮಾರನೆ! ಇಷ್ಟು ಸಣ್ಣ ಪ್ರಾಯದಲ್ಲಿಯೆ ಇಂತಹ ಅವಸ್ಥೆಯನ್ನು ನಿನಗೆ ದೇವರು ಕೊಡಬಾರದಾಗಿತ್ತು. ಇಲ್ಲಿ ಏನೇನು ಆಗಿದೆ! ಎಂಬುದೊಂದೂ ನಿನಗೆ ಗೊತ್ತಿಲ್ಲ! ನನ್ನ ತಂದೆಯನ್ನು ಆ ಚಾಣಕ್ಯನು ಮೋಸದಿಂದ ಕೊಂದುಬಿಟ್ಟನು; ಇದು ನನಗೆ ಗೊತ್ತಾಗಿ ನಿನಗೂ ಈ ಸಮಯದಲ್ಲಿ ಏನಾದರೂ ಮೋಸವಾದೀತೆಂದು ನಿನ್ನನ್ನೆಬ್ಬಿಸಿ ಕರೆದುಕೊಂಡು ಬಂದೆನು. ನಂದರ ಸಾಮ್ರಾಜ್ಯವು ಆ ಶೂದ್ರಸ್ತ್ರೀಪುತ್ರನಾದ ಚಂದ್ರಗುಪ್ತನ ಕೈವಶವಾದಂತೆ, ಅನಾದಿಯಿಂದ ನಡೆದು ಬಂದ ಪಾರ್ವತೇಯರ ಸಂಪತ್ತೂ ಕೂಡ ಅಲ್ಪರಾದ ಕಿರಾತರಿಂದ ಆಕ್ರಮಿಸಲ್ಪಟ್ಟು ಕಾಕತ್ರವಾಗಿ ಹೋದರೆ, ಮತ್ತೆ ಜನಗಳಿಗೆ ಆಶ್ರಯಸ್ಥಾನವೆ ಇಲ್ಲದೆ ಹೋದೀತಲ್ಲಾ! ಎಂದು ನನ್ನ ದೇಹಶ್ರಮವನ್ನೂ ಲಕ್ಷಿಸದೆ, ನಿನ್ನಲ್ಲಿ ನನಗೆ ಪೂರ್ವಪರಿಚಯವಷ್ಟಿಲ್ಲದಿದ್ದರೂ, ನೀನಾದರೂ ಒಬ್ಬನು ಉಳಿದುಕೊಂಡರೆ ಉಪಕಾರವನ್ನು ನೆನಪಿಟ್ಟುಕೊಳ್ಳುವೆ ಎಂದು ನಿನಗೀಗ ಬಂದು ತಿಳಿಸಿದೆನು' ಎಂದನು.

ಸೂರ್ಯೋದಯವಾಯಿತು. ಇತ್ತ ಪರ್ವತರಾಯನ ಪಾಳೆಯದಲ್ಲಿ ಮಲಯಕೇತು ಓಡಿಹೋದುದನ್ನು ಕಂಡು ಕಂಚುಕಿಗಳು ರಾಯನಿಗೆ ತಿಳಿಸಲಿಕ್ಕೆಂದು ಅವನ ಶಯನಗೃಹಕ್ಕೆ ಬಂದು ಮಲಗಿದ್ದ ಅರಸನ ಮುಸುಕನ್ನು ಓರೆಮಾಡಿ ನೋಡಿದರು. ಏಳಲಿಲ್ಲ, ಅಲ್ಲಾಡಿಸಿದರು. ಊಂ-ಹುಂ! ಚೆನ್ನಾಗಿ ಕುಲುಕಿದರು, ಮರದ ಕೊರಡಿನಂತೆ ಅಲ್ಲಾಡುತ್ತಿದೆ; ಮೂಗಿಗೆ ಕಿವಿಯನ್ನಿಟ್ಟು ನೋಡಿದರು; ಶ್ವಾಸವಿಲ್ಲ! ದೀಪ ಹತ್ತಿಸಿ ಮೋರೆಯನ್ನು ನೋಡಿದರು ಮಾವಿನ ಚಿಗುರಿನಂತಾಗಿದೆ! ಹೋ! ಹೋ! ಕೆಲಸವು ಕಳೆದುಹೋಯಿತು!' ಎಂದು ಬೊಬ್ಬೆ ಹಾಕಿದರು. ಜನರೆಲ್ಲರೂ ಗುಂಪುಗೂಡಿ ಕಲಕಲವನ್ನು ಮಾಡಿದರು.

ಅಷ್ಟರಲ್ಲಿ ಅಪರಿಮಿತ ಸೈನ್ಯವು ಆಯುಧಗಳನ್ನು ಝಳಪಿಸಿಕೊಂಡು ಮಹಾ ಕೋಲಾಹಲದಿಂದ ಬಂದು ಒಳಗೆ ನುಗ್ಗಿತು. ಅದನ್ನು ನೋಡಿ,

'ಇಲ್ಲಿದ್ದರೆ ನಮಗೂ ಇದೇ ಗತಿ' ಎಂದು ವೈಗಾವಲಿನವರೆಲ್ಲರೂ ಬಿಟ್ಟದ್ದು ಬಿಟ್ಟಲ್ಲಿಯೆ, ಸಿಕ್ಕಿದುದನ್ನು ತೆಗೆದುಕೊಂಡು, ಕಂಡಕಡೆಗೆ ಚೆದರಿ ಓಡಿಹೋದರು. ಇದನ್ನು ಕಂಡು ಪರ್ವತೇಶ್ವರನ ತಮ್ಮನಾದ ವಿರೋಚನನೂ ಎಲ್ಲವನ್ನೂ ಅಲ್ಲಲ್ಲೆ ಬಿಟ್ಟು ಬಿಟ್ಟು ಮತ್ತೊಂದು ದಿಕ್ಕಿಗೆ ಓಡಿಹೋದನು. ಶೇಖರಾದಿ ಸೇನಾಪತಿಗಳೂ 'ಇನ್ನು ಮಾಡುವುದೇನು?' ಎಂದು ತಾವೂ ಮಲಯಕೇತುವಿದ್ದಲ್ಲಿಗೆ ಓಡಿಬಂದರು.

ಬಾಗುರಾಯಣ—'ರಾಜಪುತ್ರನೆ! ಈಗ ನಿನ್ನ ಸೇನಾಪತಿಗಳೂ, ಸೈನಿಕರೂ ಬಂದರು. ಇನ್ನು ನೀನು ಇಲ್ಲಿ ನಿಲ್ಲದೆ ನಿನ್ನ ದೇಶಕ್ಕೆ ಹೋಗಿ ಮುಂದಣ ಕಾರ್ಯಗಳನ್ನು ಆಲೋಚಿಸು. ನಾನಿನ್ನು ಯಾರಿಗೂ ತಿಳಿಯದಂತೆ ಹೋಗಬೇಕಾಗಿದೆ, ಸಂದರ್ಭವು ಬಿದ್ದಾಗ ಇನ್ನೊಮ್ಮೆ ಬಂದು ನಿನ್ನನ್ನು ಕಂಡೇನು, ನಿನಗೆ ಶುಭವಾಗಲಿ, ಹೋಗಿಬರುತ್ತೇನೆ, ಅಪ್ಪಣೆಯಾಗಲಿ,' ಎಂದು ಎದ್ದುನಿಂತನು.

ಮಲಯಕೇತು—'ಬಾಗುರಾಯಣ! ಇಂತಹ ಆಪತ್ಕಾಲದಲ್ಲಿ ವೈರಿಗಳಿಂದ ತಪ್ಪಿಸಿ ನನ್ನ ಜೀವವನ್ನುಳಿಸಿ, ಇಲ್ಲಿಯ ವರೆಗೆ ಕರೆದು ತಂದು ಇನ್ನು ಬಿಟ್ಟು ಹೋಗುವುದೆಲ್ಲಿಗೆ? ಛೇ! ಅದಾಗದು, ನೀನೆ ನನ್ನ ಜೀವದ ಗೆಳೆಯನು, ನನಗೆ ಇನ್ನು ಯಾರಿದ್ದಾರೆ? ಸರ್ವಥಾ ಹೋಗಕೂಡದು, ನೀನು ರಾಜನೀತಿವಿಶಾರದನಾಗಿರುವುದರಿಂದ ನನ್ನ ಬಳಿಯಲ್ಲಿಯೆ ಇದ್ದುಕೊಂಡು ಬುದ್ಧಿವಾದಗಳನ್ನು ಹೇಳುತ್ತ ಮಂತ್ರಿಯಾಗಿರಬೇಕು. ಅದಲ್ಲದೆ ಅಪ್ಪಣೆ ಎಲ್ಲಿಗೆ? ಇನ್ನು ಆ ಚಂದ್ರಗುಪ್ತನನ್ನು ಆಶ್ರಯಿಸುವುದಾದರೂ ನಿನಗೆ ಮರ್ಯಾದೆಯೆ? ನಾನು ಕ್ಷತ್ರಿಯ ಪುತ್ರನಾದುದರಿಂದ ಪುನಃ ಯುದ್ಧಸನ್ನದ್ಧನಾಗಿ ಹೋಗಿ, ಆ ಪಾಟಲೀಪುರವನ್ನು ಮುತ್ತಿ, ಚಂದ್ರಗುಪ್ತ ಚಾಣಕ್ಯರ ತಲೆಗಳನ್ನು ಮಣ್ಣು ಕಚ್ಚಿಸದೆ ಮುಂದಣ ಪಿತೃಕಾರ್ಯವನ್ನು ಮಾಡೆನು.'

ಬಾಗುರಾಯಣನು—'ಕುಮಾರನೆ! ಹಿಂದೆ ಮುಂದೆ ನೋಡಿಕೊಳ್ಳದೆ ದುಡುಕಬಾರದು; ಯಾವುದಕ್ಕೂ ವಿಮರ್ಶೆ ಇರಬೇಕು; ಬುದ್ಧಿವಂತನಾದ ನೀನೆ ಹೀಗೆ ದೇಶಕಾಲವನ್ನರಿಯದೆ ಸಿಟ್ಟುಬಂತೆಂದು ಮೇಲೆ ಬಿದ್ದರೆ ಮುಂದಣ ಅವಸ್ಥೆ ಏನಾಗಬೇಕು? ಯೋಚಿಸಿ ನೋಡು. ನೀನೀಗ ಸ್ವರಾಜ್ಯಕ್ಕೆ ಹೋಗಿ, ಮೊದಲು ಮಾಡಬೇಕಾದುದನ್ನೆಲ್ಲ ಮಾಡಿ, ಆ ಮೇಲೆ ಆಲೋಚಿಸಿಕೊಂಡು ಬೇಕಾದಂತೆ ಮಾಡಬಹುದಲ್ಲಾ?'

ಮಲಯಕೇತು ಹೀಗೆ ನೋಡಿ 'ಸರಿ. ನೀನು ಹೇಳಿದಂತೆಯೆ ಸದ್ಯಕ್ಕೆ ಆಗಲಿ.' ಎಂದು ಒಪ್ಪಿ ಅವನನ್ನು ಮನ್ನಿಸಿ; ಸೇನಾಸಮೇತನಾಗಿ ಬಾಗುರಾಯಣನೊಡನೆ ಪರ್ವತರಾಜ್ಯಕ್ಕೆ ಪ್ರಯಾಣ ಮಾಡಿದನು.

## ೪. ಮುಹೂರ್ತ ನಿಶ್ಚಯ

ಈ ರೀತಿ ಅನರ್ಥ ಪರಂಪರೆಗಳು ನಡೆದುದನ್ನು ನೋಡಿ ಚಂದ್ರ ಗುಪ್ತನ ದೂತರು ಚಾಣಕ್ಯನಲ್ಲಿಗೆ ಬಂದು ನಡೆದುದನ್ನೆಲ್ಲ ವಿವರವಾಗಿ ಅರಿಕೆ ಮಾಡಿಕೊಂಡರು. ಅದನ್ನು ಕೇಳಿ ಚಾಣಕ್ಯನು —'ಏನು? ಪರ್ವತ ರಾಯನು ಸತ್ತು ಹೋದನೆ? ಇದೇನು ಆಕಸ್ಮಿಕವಾದ ಮರಣವು?' ಎಂದು ಮೂಗಿನ ಮೇಲೆ ಬೆರಳಿಟ್ಟು ತಲೆದೂಗಿ, ಹೀಗೆ ಯೋಚಿಸಿ—'ಆ! ಹಾ! ತಿಳಿಯಿತು, ತಿಳಿಯಿತು! ನಿನ್ನೆ ಆ ಕ್ಷಣಕನು ತಂದ ಹೆಣ್ಣು ರಾಕ್ಷಸನ ಕಡೆಯ ವಿಷಕನ್ಯೆಯಾಗಿರಬೇಕು; ಒಂದೋ ಚಂದ್ರಗುಪ್ತನನ್ನು ಇಲ್ಲವೆ ಪರ್ವತರಾಯನನ್ನು ಕೊಲ್ಲಬೇಕೆಂದು ರಾಕ್ಷಸನು ಮಾಡಿದ ಉಪಾಯವಿದು. ಅಃ! ನಾವು ಇಷ್ಟು ಎಚ್ಚರಿಕೆಯಿಂದಿದ್ದೂ ಇದೊಂದು ನಮಗೆ ತಿಳಿಯದೆ ಹೋಯಿತು! ರಾಕ್ಷಸನಿಗೆ ಸಂತೋಷಪಡುವ ಕಾಲ! ಇಬ್ಬರೊಳಗೆ ಒಬ್ಬನು ಹೋದರೆ ಸಾಕು; ಒಂದು ಕಣ್ಣು ಹೋದಂತೆಯೆ ಸರಿ; ಮೊದಲೆ ಬುದ್ಧಿ ಬೇಕಾಗಿತ್ತು; ಕೆಟ್ಟ ಮೇಲೆ ಬುದ್ಧಿ; ಮಾಡುವು ದೇನು? ಇದೊಂದನ್ನೂ ವಿಚಾರಿಸಿಕೊಳ್ಳದೆ ಲೆಕ್ಕಕೊಡಲಿಕ್ಕೆಂದು ಬಂದ ನಮ್ಮ ಸೇನೆಯನ್ನು ನೋಡಿ ಮಲಯಕೇತು ಹೆದರಿ ಓಡಿಹೋದುದಾಗಿರ ಬೇಕು; ಚಿಕ್ಕ ಹುಡುಗನಲ್ಲವೆ? ಬಾಲಬುದ್ಧಿ. ಇವರನ್ನೆಲ್ಲ ನೋಡಿ ವಿರೋ ಚನನೂ ಓಡಿಹೋಗಿರಬಹುದು.' ಎಂದು ಹೇಳಿ, 'ಎಲ್ಲವನ್ನೂ ನಾನೆ ಹೋಗಿ ನೋಡಿಬರಬೇಕು' ಎಂದು ಎದ್ದು ಪರ್ವತರಾಯನಿದ್ದಲ್ಲಿಗೆ ಬಂದನು.

ಬಂದು ನೋಡಿ —'ಆಹಾ! ನಿನಗೆ ಈ ಅವಸ್ಥೆ ಬರಬಹುದೇ! ನೀನು ನಮಗೆ ಮಾಡಿದ ಉಪಕಾರವನ್ನು ಇನ್ನೆಂದಿಗೆ ಮರೆಯಬೇಕು? ಅಯ್ಯೋ! ನಿನ್ನನ್ನು ಕಳೆದುಕೊಂಡ ನಾವು ನಿರ್ಭಾಗ್ಯರೆ? ಸರಿ!' ಎಂದು ಕಣ್ಣೀರು ಮಿಡಿದು, ನಾನಾ ವಿಧವಾಗಿ ಗೋಳಾಡಿ, ಅಲ್ಲಿರುವ ರಾಜಪುತ್ರರಿಂದಲೆ ಅವನ ಶವಸಂಸ್ಕಾರವನ್ನು ಮಾಡಿಸಿ, ಆತನ ಭೂಷಣಗಳನ್ನೆಲ್ಲ ತೆಗೆಯಿಸಿ ಮಲಯಕೇತುವಿಗೆ ಕಳುಹಿಸಿಕೊಡಬೇಕೆಂದು ತನ್ನ ಸ್ವಾಧೀನದಲ್ಲಿಟ್ಟು

ಕೊಂಡು ವೃತನಿಗೆ ಸದ್ಗತಿಯುಂಟಾಗುವಂತೆ ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟು, ಇಳಿವೋರೆ ಮಾಡಿಕೊಂಡು ಬಂದು ಗಂಗಾನದಿಯಲ್ಲಿ ಮಿಂದು ಮನಸ್ಸಿನಲ್ಲಿ—'ಇಲ್ಲಿಗೆ ನಾಲ್ಕರಲ್ಲಿ ಮೂರ್ರು ಪಾಲು ಕೆಲಸವಾಯಿತು' ಎಂದು ನೆನಸಿಕೊಂಡು, ಪುನಃ ತಾನಿದ್ದ ಸ್ಥಳಕ್ಕೆ ಬಂದನು.

ಮರುದಿನ ಚಾಣಕ್ಯನು ಸಭೆಯಲ್ಲಿ ಬಂದು ಕುಳಿತು, ಬಳಿಯಲ್ಲಿರುವ ದೂತನನ್ನು ನೋಡಿ—'ನಿನ್ನೆ ಕರೆಯಿಸಿದ ಸೈನ್ಯದ ಲೆಕ್ಕವೆಲ್ಲ ಆಯಿತೊ ಇಲ್ಲವೊ?' ಎಂದು ಹೀಗೆ ನೋಡಿದನು. ಅದಕ್ಕವನು 'ನಿನ್ನೆಯ ಗಡಿಬಡಿಯಿಂದ ಒಂದೂ ಆಗಲಿಲ್ಲ. ಅಪ್ಪಣೆಯಾದರೆ ಇಂದಿನಿಂದ ಆಗುತ್ತದೆ' ಎಂದನು.

ಚಾಣಕ್ಯನು—'ಈ ತಿಂಗಳ ಸಂಬಳಗಳನ್ನು ಕೊಟ್ಟು ಅವರಲ್ಲಿ ಬಂದವರು ಯಾರು? ಬಾರದಿದ್ದವರು ಯಾರು? ಎಂಬುದನ್ನು ತಿಳಿಸಬೇಕೆಂದು ಕೋಶಾಧಿಕಾರಿಗೆ ಹೇಳು,' ಎಂದು ಅವನನ್ನು ಕಳುಹಿಸಿ, ಇನ್ನೊಬ್ಬನನ್ನು ಕರೆದು—'ಇದುವೆ ಶುದ್ಧದಶಮಿ ಬುಧವಾರ ಚಂದ್ರಗುಪ್ತಮಹಾರಾಜರಿಗೆ ಪಟ್ಟಾಭಿಷೇಕವಾಗುತ್ತದೆ,' ಎಂದು ಪಟ್ಟಣದಲ್ಲೆಲ್ಲ ಡಂಗುರಸಾರಲಿ, ನಗರವು ಶೃಂಗಾರವಾಗಲಿ, ಹೆಬ್ಬಾಗಿಲುಗಳೆಲ್ಲ ಕುರುಜು ತೋರಣಗಳಿಂದ ಅಲಂಕೃತವಾಗಲಿ, ಎಲ್ಲವೂ ಸಿದ್ಧವಾಗಲಿ, ಅಧಿಕಾರಿಗಳೆಲ್ಲರೂ ಕಾದುಕೊಂಡಿರಲಿ, ಹೀಗೆ ಸರ್ವಾಧಿಕಾರಿಗಳಿಗೆ ತಿಳಿಸು' ಎಂದು ಆಜ್ಞಾಪಿಸಿದನು. ಅವನು ಹೋಗಿ ಹಾಗೆಯೆ ಹೇಳಿದನು.

ಆ ಸಮಯದಲ್ಲಿ ದಾರುವರ್ಮನೆಂಬೊಬ್ಬ ಶಿಲ್ಪಿ, ರಾಜದ್ವಾರದಲ್ಲಿ ದೇವತಾವಿಮಾನದಂತಿರುವ ಒಂದು ವಿಚಿತ್ರವಾದ ಶಿಲ್ಪವನ್ನು ರಚಿಸಿ, ನೀರಾಜೀ ಮೇಲುಕಟ್ಟುಗಳನ್ನು ಕಟ್ಟಿ, ಕುರುಜುತೋರಣಗಳಿಂದಲೂ, ಮುತ್ತಿನ ಕುಚ್ಚುಗಳಿಂದಲೂ ಅಲಂಕರಿಸಿ ವಿಸ್ಮಯವಾಗುವಂತೆ ವಾದ್ಯಗಳನ್ನು ಬಾಜಿಸುವ ಸೂತ್ರದ ಬೊಂಬೆಗಳನ್ನು ನಿಲ್ಲಿಸಿ, ಚಾಣಕ್ಯನ ಬಳಿಗೆ ಬಂದು ಕೈಮುಗಿದು—'ಬುದ್ಧಿ! ರಾಜದ್ವಾರವು ಕುರುಜುತೋರಣಗಳಿಂದ ಅಲಂಕೃತವಾಗಿದೆ' ಎಂದನು.

ಚಾಣಕ್ಯ—'ಏನು? ಇಷ್ಟು ಬೇಗನೆ ಈ ಕೆಲಸವನ್ನು ಹೇಗೆ ಮಾಡಿದೆ?

ಶಿಲ್ಪಿ—ಅಪ್ಪಣೆಯಾಗುವುದಕ್ಕೆ ಮೊದಲೆ ಮಾಡಿದರೆ ತಮ್ಮ ದಯೆಗೆ ಈಡಾದೇನು, ಎಂದು ಮೊದಲೆ ಮಾಡಿದೆನು; ಪರಾಂಬರಿಸಬೇಕು.'

ಚಾಣಕ್ಯ—'ಒಳ್ಳೆಯದಾಯಿತು; ನಾವು ಹೇಳುವುದಕ್ಕೆ ಮೊದಲೆ ನೀನು ಮಾಡಿಸಿದೆ; ಪ್ರಜೆಗಳು ಹಾಗಿರಬೇಕು; ಸಂತೋಷವಾಯಿತು; ಪಟ್ಟಾಭಿಷೇಕಕಾಲದಲ್ಲಿ ನಿನಗೆ ತಕ್ಕ ಪ್ರತಿಫಲವು ಸಿಕ್ಕೀತು; ಈಗ ಹೋಗಬಹುದು' ಎಂದು ಅವನನ್ನು ಕಳುಹಿಸಿ, ಬಾಗುರಾಯಣನ ತಮ್ಮ ನಾದ ವಾತ್ಸಲಾಯನನ್ನು ನೋಡಿ, ಅವನೊಡನೆ ಹೇಳಬೇಕಾದುದನ್ನು ಗುಟ್ಟಾಗಿ ಹೇಳಿ ಕಳುಹಿಸಿದನು. ಅವನು ಕುದುರೆಯನ್ನೇರಿಕೊಂಡು ಬೇಗಬೇಗನೆ ಹೋಗಿ, ಸ್ವದೇಶಕ್ಕೆ ಓಡಿಹೋಗುತ್ತಿರುವ ವಿರೋಚನನನ್ನು ಕಂಡು—'ಏನಯ್ಯಾ ಇದು? ನೀನು ಏನೆಂದು ಯೋಚಿಸಿದೆ? ಹೂವಿನ ಮಾಲೆಯನ್ನು ಕಂಡು ಹಾವೆಂದು ಓಡಿಹೋಗುವ ಹೆಡ್ಡನಂತೆ ನಿನ್ನ ಕೆಲಸ ವನ್ನು ಬಿಟ್ಟು ಹೀಗೆ ಓಡಿ ಹೋಗುವೆಯಾ? ಮಲಯಕೇತುವಾದರೆ ಹುಡುಗನು; ಯುಕ್ತಾಯುಕ್ತ ವಿಚಾರವಿಲ್ಲದೆ ಓಡಿಹೋಗಿಬಿಟ್ಟನು; ನೀನೂ ಹೀಗೆ ಮಾಡಿದರೆ? ಮುಂದೆ ನಿನ್ನಿಂದ ರಾಜ್ಯಾಕಾರ್ಯನಿರ್ವಾಹವು ಹೇಗಾದೀತು ಹೇಳು? 'ಪರ್ವತರಾಯನು ಕೊಂದರೆ ಚಂದ್ರಗುಪ್ತನಿಗೆ ಬಲ ಕಡಿಮೆಯಾಗುವುದು. ಆ ಮೇಲೆ ಬೇಕಾದಂತೆ ಮಾಡಿಕೊಳ್ಳ ಬಹುದು' ಎಂದು ರಾಕ್ಷಸನು ನಡೆಯಿಸಿದ ತಂತ್ರವನ್ನು ತಿಳಿಯದೆ ಸುಮ್ಮಸುಮ್ಮನೆ ಚಾಣಕ್ಯನಲ್ಲಿ ದ್ವೇಷವನ್ನು ನೆನಸಿಕೊಂಡು ನೀನೂ ಬಂದುಬಿಟ್ಟೆ! ಅವರ ಮನಸ್ಸಿಗೆ ಬಹಳ ಕರೆಕರೆಯಾಗಿದೆ; ಆದುದರಿಂದ ನನ್ನನ್ನು ಕರೆದು ಹೇಳಿದರು—

'ಊರವರಿಗೇನು? ಏನು ಬೇಕಾದರೂ ಹೇಳುತ್ತಾರೆ; ಅಂಡೆಬಾಯಿ ಕಟ್ಟಬಹುದು, ದೊಂಡೆಬಾಯಿ ಕಟ್ಟಬಹುದೇ? ಹೇಳುವವರು ಹೇಳಿ ಕೊಳ್ಳಲಿ; ಏನುಮಾಡಲಿಕ್ಕಾಗುತ್ತದೆ? ಆದರೆ ನಾನು ತಪಸ್ವಿ; ನನಗೆ ಇದೊಂದು ಮಾತಿನವಾಸಿ ಯಾಕೆಬೇಕು? ಕೊಟ್ಟ ಮಾತಿಗೆ ಎಂದಿಗೂ ತಪ್ಪಲಿಕ್ಕಿಲ್ಲ; ಅವನ ತಮ್ಮನಿಗಾದರೂ ಅರ್ಧ ರಾಜ್ಯವನ್ನು ಕೊಡಿಸು ವುದೆ ಸರಿ; ಎಂದು ಮುಹೂರ್ತವನ್ನು ನೋಡಿ, 'ನೀನು ಹೋಗಿ ವಿರೋಚನ ನನ್ನು ಕರೆದುಕೊಂಡು ಬಾ' ಎಂದು ನನ್ನನ್ನು ಕಳುಹಿಸಿದರು, ಎಂದನು.

ಇದನ್ನು ಕೇಳಿ ವಿರೋಚನನಿಗೆ ಆಸೆಹುಟ್ಟಿತು; ಸಂತೋಷ ವಾಯಿತು. ಮನಸ್ಸಿನಲ್ಲಿ ಒಂದರಮೇಲೊಂದು ಆಲೋಚನೆಗಳು ಮೂಡಿ

ದುವು. ಆಶ್ವಲಾಯನನೊಡನೆ ಹಿಂದಿರುಗಿ ಬಂದು ಚಾಣಕ್ಯನನ್ನು ಕಂಡು ನಮಸ್ಕರಿಸಿದನು.

ಚಾಣಕ್ಯ:—'ಏನಯ್ಯಾ? ನಿನ್ನದು ಇದು ಒಳ್ಳೆಯ ಕೆಲಸವು! ನನ್ನೊಬ್ಬನನ್ನು ಇಲ್ಲಿ ಲೋಕಾಪವಾದಕ್ಕೆ ಗುರಿಮಾಡಿ, ನಿನ್ನ ಅಣ್ಣನ ಮಗನಂತೆ ನೀನೂ ಹೋಗಿಬಿಡುವುದೆ? ಅಹ! ಒಳ್ಳೆಯ ಬುದ್ಧಿ! ಬುಧವಾರ ಲಗ್ನವು ನಿಶ್ಚಯವಾಗಿದೆ. ಮೊದಲು ನಿನ್ನದೊಂದು ತೀರಲಿ ಮತ್ತೆಲ್ಲ ಮತ್ತೆ' ಎಂದು ಹೇಳಿ, ಆ ಬುಧವಾರ ನಡುವಿರುಳು ಮುಹೂರ್ತ ವನ್ನು ನಿಶ್ಚೈಸಿದನು. ಬಳಿಕ ಎಲ್ಲರೂ ತಮ್ಮ ತಮ್ಮ ಬಿಡಾರಗಳಿಗೆ ಹೋದರು.

## ೫. ಕಂಟಕ ಪರಿಹಾರ

ಬುಧವಾರ ಮಧ್ಯಾಹ್ನದ ಮೇಲೆ ಪಾಟಲಿಪುರದಲ್ಲೆಲ್ಲ ಗದ್ದಲವೆ ಗದ್ದಲವು; ಇಂದು ಚಂದ್ರಗುಪ್ತನ ಪಟ್ಟಾಭಿಷೇಕವೆಂದು ಜನರು ನಾನಾ ವಿಧಗಳಿಂದ ಅಲಂಕೃತರಾಗಿ ಇತ್ತ ಕಡೆಯಿಂದ ಅತ್ತ ಕಡೆಗೂ, ಅತ್ತಕಡೆ ಯಿಂದ ಇತ್ತಕಡೆಗೂ ಓಡಾಡುತಿದ್ದರು. ಸಾಯಂಕಾಲವಾಯಿತು; ರಾತ್ರೆ ಒಂದು ಜಾವವು ಕಳೆಯಿತು; ಆಗ ಚಂದ್ರಗುಪ್ತನ ಉಡಿಗೆ ತೊಡಿಗೆಗಳಿಂದ ವಿರೋಚನನನ್ನು ಸಿಂಗರಿಸಿ, ಕರೆದುಕೊಂಡು ಬಂದು ಸಿಂಹಪೀಠದಲ್ಲಿ ಕುಳ್ಳಿರಿಸಿದರು; ಮುತ್ತೈದೆಯರು ಮಂಗಲಾರತಿ ಬೆಳಗಿ ದರು; ನರ್ತಕಿಯರು ಹೂವಿನ ಮಳೆಯನ್ನು ಸುರಿದರು; ವಂದಿಗಳ ಹೊಗ ಳಿದರು. ಜನರೆಲ್ಲ ಗುಂಪುಗುಂಪಾಗಿ ಬಂದು ನೆರೆದು ಕೊರಳುದ್ದಮಾಡಿ ಕೊಂಡು, ನಾನು ಮುಂದೆ ನಾನು ಮುಂದೆ ಎಂದು ಉರುಡಿ ಪರಡಿದರು.

ಆ ಸಮಯದಲ್ಲಿ ಬರ್ಬರಕನೆಂಬೊಬ್ಬ ಮಾವಟಿಗನು ಸಿಂಗರಿಸಿದ ನಂದರ ಪಟ್ಟದಾನೆಯನ್ನು ತಂದು ನಿಲ್ಲಿಸಿದನು; ಅದರ ಮೇಲೆ ವಿರೋಚನ ನನ್ನು ಕುಳ್ಳಿರಿಸಿ, ಚಂದ್ರಗುಪ್ತನ ಪರಿವಾರವನ್ನೂ ಅವನೊಡನೆ ಕಳುಹಿಸಿ ಚಂದ್ರಗುಪ್ತಚಾಣಕ್ಯರು ಹಿಂದಣಿಂದ ಕಾಲುನಡೆಯಲ್ಲಿ ಹೊರಟರು. ಮೆರವಣಿಗೆ ಹೆಬ್ಬಾಗಿಲಿನೆಡೆಗೆ ಬಂತು; ಆಗ ಚಾಣಕ್ಯನು ಚಂದ್ರಗುಪ್ತ ನೊಡನೆ—'ನೋಡು, ನೋಡು! ಈ ಹೆಬ್ಬಾಗಿಲಲ್ಲಿ ಏನೋ ಒಂದು ವಿಶೇ ಷವು ನಡೆಯುತ್ತಿದೆ' ಎಂದನು. ಅಷ್ಟರೊಳಗೆ ಪಟ್ಟದಾನೆ ಬಾಗಿಲಿಗೆ ಬಂದು ಮುಟ್ಟಿತು. ಅಲ್ಲಿ ವಿಚಿತ್ರವಾದ ನಾಟ್ಯಗಳನ್ನೂ, ವಾದ್ಯಸಮೇತವಾಗಿ

ಹಾಡುತ್ತಿರುವ ಬೊಂಬೆಗಳ ಸಾಲುಗಳನ್ನೂ, ಬಗೆಬಗೆಯ ಶಿಲ್ಪಗಳನ್ನೂ ನೋಡುತ್ತ, ಆನೆಯನ್ನು ಮೆಲ್ಲಮೆಲ್ಲನೆ ನಡೆಯಿಸುತ್ತ, ತೋರಣವನ್ನು ಹಾದುಹೋಗುತ್ತಿರಲು, ರಾಕ್ಷಸ ಪ್ರೇರಿತನಾದ ದಾರುವರ್ಮನು ಮೇಲು ಗಡೆಯಲ್ಲಿ ಕಾಣದಂತೆ ಅಡಗಿ ಕುಳಿತಿದ್ದು, ಆನೆಯ ಮೇಲೆ ಬರುವವನೆ ಚಂದ್ರಗುಪ್ತನೆಂದು ನೆನಸಿ, ಅವನ ತಲೆಗೆ ಗುರಿಯಿಟ್ಟು, ತಾನು ಮಾಡಿದ ಕೀಲನ್ನು ಕೈಯ ಕೊಡತಿಯಿಂದ ಬಡಿದನು. ಅಷ್ಟರೊಳಗೆ ರಾಕ್ಷಸನಿಂದ ನಿಯಮಿತನಾದ ಬರ್ಬಕರನು — 'ಹಿಂದೆ ಕುಳಿತವನೆ ಚಂದ್ರಗುಪ್ತನು, ಇದುವೆ ಸಮಯವು' ಎಂದು ತನ್ನ ಕೈಯಲ್ಲಿರುವ ಬಂಗಾರದ ಬೆತ್ತದೊಳಗಿರುವ ಕತ್ತಿಯನ್ನು ಸರ್ರನೆ ಎಳೆದನು. ಅದನ್ನು ತಿಳಿದು ಆನೆ ತನ್ನನ್ನು ಹೊಡೆ ಯುವನೆಂದು ಹೆದರಿ ಒಂದೆರಡು ಹಜ್ಜೆ ಹಿಂದೆ ಸರಿದು ನಿಂತಿತು; ಆಗ ದಾರುವರ್ಮನು ಸಡಿಲಿಸಿದ ಮಹಾಭಾರವಾದ ತೊಲೆ ಆ ಮಾವುತನ ತಲೆಯ ಮೇಲೆ ಬಿದ್ದು ಅವನು ನಜ್ಜುಗುಜ್ಜಾಗಿ ಅಲ್ಲಿಯೇ ಪ್ರಾಣಬಿಟ್ಟನು.

ದಾರುವರ್ಮನು — 'ಹೋ! ತಪ್ಪಿಹೋಯಿತು! ಚಂದ್ರಗುಪ್ತನು ಉಳಿದುಹೋದನು.' ಎಂದು ಗಡಿಬಿಡಿಯಿಂದ ಕೈಯ ಕೊಡತಿಯನ್ನು ವಿರೋ ಚನನ ತಲೆಯ ಮೇಲೆ ಬಲವಾಗಿ ಎಳೆದು ಬಿಸಾಡಿದನು. ಆ ಪೆಟ್ಟಿನಿಂದ ಅವನು ತಲೆಯೊಡೆದು ಕೈಲಾಸಕ್ಕೆ ಹೋದನು. ಈ ಗದ್ದಲವನ್ನು ನೋಡಿ ಜನರೆಲ್ಲ ಚೆದರಿ ದಿಕ್ಕುದಿಕ್ಕಿಗೆ ಓಡಿಹೋದರು; ಆನೆಯೊಂದು ಗೀಳಿಡುತ್ತ ಉರುಕಿಕೊಂಡು ಕಂಡಕಂಡವರ ಮೇಲೆ ಬೀಳಲಾರಂಬಿಸಿತು. ಮೈ ಕಾವಲಿನವರು ಇದೇನೆಂದು ಮೇಲೆ ನೋಡುವಾಗ ದಾರುವರ್ಮನು ತೋರ ಣದ ತುತ್ತತುದಿಗೆ ಕುಪ್ಪಳಿಸಿಕೊಂಡು ಓಡುತಿದ್ದನು. ಆಗ ಚೆದರಿಹೋದ ಜನರೆಲ್ಲರೂ ಪುನಃ ಗುಂಪುಕೂಡಿಕೊಂಡು ಬಂದು, ಕೈಗೆ ಸಿಕ್ಕಿದ ಕಲ್ಲುಹೆಂಟೆ ಗಳನ್ನು ಎಸೆದು ಅವನನ್ನು ಕೆಳಕ್ಕೆ ಉರುಳಿಸಿದರು. ಆ ಮೇಲೆ ಕೇಳುವು ದೇನು? ಬಿತ್ತಯ್ಯಾ ಬಿತ್ತು! ಕೈಶವಗುದ್ದು, ಮಾಧವಗುದ್ದು; ಹಾಗೆ ಕೊಟ್ಟುಕೊಟ್ಟು ಅವನ ಹೆಸರಿಲ್ಲದಂತೆ ಮಾಡಿಹಾಕಿದರು.

ಇದನ್ನೆಲ್ಲ ನೋಡಿ ಚಾಣಕ್ಯನು ಚಂದ್ರಗುಪ್ತನೊಡನೆ — 'ಅಬ್ಬಾ! ರಾಕ್ಷಸನ ಉಪಾಯವೇ! ಈ ವಿರೋಚನನ ಹಣೆಬರವೂ ಹೀಗಾಗಿ ಹೋಯಿತು! ಮಾಡುವುದೇನು? ಎಲ್ಲ ದೈವಗತಿ, ಎಂದು ದೂತರನ್ನು ಕರೆದು — 'ಈ ಸ್ಥಳವನ್ನು ಶುದ್ಧಮಾಡಿಸಿರಿ' ಎಂದು ಹೇಳಿದನು.

ಅಲ್ಲಿಂದ ಹಿಂದಿರುಗಿ ಚಂದ್ರಗುಪ್ತನ ವಾಸಕ್ಕೆಂದು ಸಿಂಗರಿಸಿ ಇಟ್ಟಿದ್ದ ಕುಮಾರಭವನಕ್ಕೆ ಬಂದು ಅತ್ತಿತ್ತ ನೋಡಿ—'ಯಾರೊ ತಿಳಿಯದವನು ಈ ಪಟವನ್ನು ಎಡಗಡೆಯಲ್ಲಿ ಕಟ್ಟಿದ್ದಾನೆ; ಇದನ್ನು ಬಲಗಡೆಯಲ್ಲಿ ತೂಗಿರಿ' ಎಂದು ಹೇಳಿದನು. ದೂತರು ಹಾಗೆಯೆ ತೂಗಿದರು. ಅದರ ಹಿಂದೆ ಒಬ್ಬನು ಕುಳಿತುಕೊಳ್ಳುವಷ್ಟು ದೊಡ್ಡದೊಂದು ಗೂಡಿತ್ತು; ಅಲ್ಲಿ ಸಾಣೆ ಹಿಡಿದಿರುವ ಆಯುಧಗಳಿದ್ದುದನ್ನು ನೋಡಿ, ಅದನ್ನು ತರಿಸಿ ಒಬ್ಬ ದೂತನ ಕೈಯಲ್ಲಿ ಕೊಟ್ಟು ಮುಂದೆ ಬಂದನು. ಅಲ್ಲಿ ಒಂದು ನಿಲುಗನ್ನಡಿಯನ್ನು ನಿಲ್ಲಿಸಿತ್ತು; ಅದರಡಿಯಿಂದ ಇರುವೆಗಳು ಒಂದೊಂದಾಗಿ ಅನ್ನದ ಅಗುಳು ಗಳನ್ನು ಕಚ್ಚಿಕೊಂಡು ಈಚೆಗೆ ಬರುತಿದ್ದುವು; ಅದನ್ನು ನೋಡಿ, 'ಈ ಕನ್ನಡಿಯನ್ನು ಇಲ್ಲಿಂದ ತೆಗೆಯಿರಿ' ಎಂದು ಹೇಳಿದನು. ದೂತರು ಅದನು ತೆಗೆಯುವಾಗ ಅದರ ಹಿಂದೊಬ್ಬ ಮನುಷ್ಯನಿಗೆ ಬರುವಷ್ಟು ಎಡೆಯು ಕನ್ನ ವಿದ್ದುದನ್ನು ನೋಡಿ 'ಇನ್ನೂ ಪರೀಕ್ಷಿಸಿರಿ' ಎಂದು ಹೇಳಿದನು. ಆ ಮಾತನ್ನು ಕೇಳಿ ಒಳಗಿರುವ ರಾಕ್ಷಸನ ಕಡೆಯ ಚೋರರು ದಡಬಡನೆ ಒಳಗೊಳಗೆ ಓಡಿದರು. ಕೂಡಲೆ ಹುಲ್ಲು ಕಟ್ಟಿಗೆಗಳನ್ನೂ, ಮೆಣಸಿನ ತೊಟ್ಟುಗಳನ್ನೂ ವದರ ಬಾಯಿಗೆ ಗಿಡಿಸಿ ಕಿಚ್ಚೊಟ್ಟಿಸಿದನು; ಒಳಗಿರುವವ ರೆಲ್ಲ ಇಲಿ ಹೆಗ್ಗಣಗಳಂತೆ ಉಸಿರು ಕಟ್ಟಿ, ಕೈಕಾಲು ಬಡಿದು, ಜೀವ ಬಿಟ್ಟರು. ಅನಂತರ ಆ ಸ್ಥಳವನ್ನು ಶುದ್ಧಮಾಡಿಸಿ, ಸಾಣೆಹಿಡಿದ ಆಯುಧಗಳನ್ನು ತರಿಸಿ, 'ಇಲ್ಲಿ ಬರುವ ಕಾವಲುಗಾರರೆಲ್ಲರೂ ಬರಲಿ' ಎಂದು ಅವರೆಲ್ಲರನ್ನೂ ಕರೆಯಿಸಿದನು.

ಬಳಿಕ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು, 'ಇದು ಯಾರದು?' ಎಂದು ಕೇಳಿದನು. ಅದಕ್ಕೆ ಅವರೆಲ್ಲರೂ "ನನ್ನದಲ್ಲ ನನ್ನದಲ್ಲ" ಎಂದು ಹೇಳಿದರು.

ಚಾಣಕ್ಯನು ಅದರಲ್ಲಿ ಹೆಚ್ಚು ಬೆಲೆಬಾಳುವ ಉಡಿಗೆತೊಡಿಗೆ ಯುಳ್ಳವನೊಬ್ಬನನ್ನು ನೋಡಿ—ಇದು ಯಾರದು? ಎಂದು ಕೇಳಿದನು. ಅವನು 'ನನ್ನದಲ್ಲ' ಎಂದನು, ಆಗ ಬಳಿಯಲ್ಲಿರುವವರನ್ನು ನೋಡಿ—'ಇವ ನಿಗೆ ಸಂಬಳವೆಷ್ಟು?' ಎಂದು ಕೇಳಿದನು. ಅವರು 'ಎಲ್ಲವರಷ್ಟೆ' ಎಂದರು.

ಚಾಣಕ್ಯ—'ಏನೊ? ನಿನಗಿಷ್ಟು ಹಣವೆಲ್ಲಿಂದ?'

ಪುರುಷ—'ಬುದ್ಧೀ! ರಾಯರ ಪ್ರೀತಿಗೆ ಪಾತ್ರರಾದವರಿಗೆ ಕಡಿಮೆ ಯೇನು?'

ಚಾಣಕ್ಯನು ಪಟ್ಟಣದಲ್ಲಿರುವ ಸಾಣೆಯುವರೆನ್ನೆಲ್ಲ ಕರೆಯಿಸಿ— ಈ, ಕತ್ತಿಯುನ್ನು ಸಾಣೆಹಿಡಿದವನು ಯಾರು?' ಎಂದು ಕೇಳಿದನು. ಒಬ್ಬನು— 'ಬುದ್ಧೀ ನಾನು' ಎಂದನು.

ಚಾಣಕ್ಯ—ನಿನ್ನಲ್ಲಿಗೆ ಇದನ್ನು ತಂದವರು ಯಾರು?

ಸಾಣೆಗಾರ—ಈ ಕರ್ಕಟಕನು ಎಂದು ಆ ಹೆಚ್ಚು ಬೆಲೆಬಾಳುವ ಉಡಿಗೆತೊಡಿಗೆಯುವನನ್ನು ತೋರಿಸಿದನು.

ಚಾಣಕ್ಯನು ಅವನನ್ನು ನೋಡಿ—ಏನು ಹೇಳುತ್ತಿ ?

ಪುರುಷ—ಬುದ್ಧೀ ! ನಾನು ಅಮಾತ್ಯರ ಕಡೆಯುವನು ; ಹೊಟ್ಟೆಗಾಗಿ ಮಾಡಿದೆನು, ಕ್ಷಮಿಸಬೇಕು, ಎಂದು ಗಡಗಡನೆ ನಡುಗಿಕೊಂಡು ಅಡ್ಡ ಬಿದ್ದನು. ಅವನಿಗೆ ಚಿತ್ರಾಜ್ಞೆಯುನು ನೇಮಿಸಿ, ಓಡಿಹೋಗಿರುವ ಭವನ ಪಾಲನನ್ನು ಕರೆದುತನ್ನಿರಿ ಎಂದು ದೂತರಿಗೆ ಹೇಳಿದನು, ಆಗ ಸೂರ್ಯೋದಯುವಾಯಿತು ; ಚಂದ್ರಗುಪ್ತನನ್ನು ಆಪ್ತಜನರೊಡನೆ ಅಲ್ಲಿಯೆ ಇರುವಂತೆ ಹೇಳಿ, ತಾನೊಂದು ಪರ್ಣಶಾಲೆಯುನ್ನು ಮಾಡಿಕೊಂಡು ಅದರಲ್ಲಿದ್ದನು.

ಆ ಸಮಯದಲ್ಲಿ ರಾಜವೈದ್ಯನೊಬ್ಬನು ಬಂದು ಚಾಣಕ್ಯನಿಗೆ ಕೈ ಮುಗಿದು—"ಸ್ವಾಮಿ! ನಾನು ಅನೇಕ ಕಾಲಗಳಿಂದ ರಾಜವೈದ್ಯನಾಗಿದ್ದವನು; ಆದುದರಿಂದ ತಮ್ಮನ್ನು ಕಂಡು ಹೋಗುವ ಎಂದು ಬಂದೆನು" ಎಂದನು.

ಚಾಣಕ್ಯನು—ಓಹೋ! ತಕ್ಕ ಸಮಯದಲ್ಲಿ ಬಂದೆ; ಒಳ್ಳೆಯದಾಯಿತು ; ಅನೇಕ ದಿನಗಳಿಂದ ನಮ್ಮ ಚಂದ್ರಗುಪ್ತನ ದೇಹಕ್ಕೆ ಸೌಖ್ಯವಿಲ್ಲ; ಬಹುಶಃ ಈ ಯುದ್ಧದ ದೆಸೆಯಿಂದಲಾಗಿ ಹೊತ್ತು ಹೊತ್ತಿಗೆ ಅನ್ನಾಹಾರಗಳು ಸರಿಯಿಲ್ಲದೆ ಕಾವು ಏರಿದುದಾಗಿರಬೇಕು; ಆದರೂ ನೀನೊಮ್ಮೆ ಅವನ ನಾಡಿಗೀಡಿಗಳನ್ನು ಪರೀಕ್ಷೆ ಮಾಡಿ ಉತ್ತಮವಾದೊಂದು ಮದ್ದು ಕೊಡಬೇಕು ಎಂದು ಹೇಳಿ, ಚಂದ್ರಗುಪ್ತನಿದ್ದಲ್ಲಿಗೆ ಕರೆದುಕೊಂಡು ಹೋಗಿ, 'ವೈದ್ಯನಿಗೆ ಕೈ ತೋರಿಸು, ಪರೀಕ್ಷೆಮಾಡಲಿ' ಎಂದು ಹೇಳಿದನು.

ವೈದ್ಯನು ಕೈ ಹಿಡಿದು ನಾಡಿಪರೀಕ್ಷೆ ಮಾಡಿ—ಪಿತ್ತೋದ್ರೇಕದಿಂದ ಅಗ್ನಿಮಾಂದ್ಯವಾಗಿ ನಾಲಗೆಗೆ ಅರುಚಿಯುಂಟಾಗಿದೆ; ಮೊದಲು ಕಠಿಣ

ವಾದ ಮಾತ್ರೆಗಳನ್ನು ಕೊಡಕೂಡದು; ತತ್ಕಾಲಕ್ಕೆ ಒಂದು ಕಲ್ಕವನ್ನು ಕೊಡುತ್ತೇನೆ; ಇದರ ಗುಣವನ್ನು ನೋಡಿರಿ ಎಂದು ಯೋಗಚೂರ್ಣ ವನ್ನು ತೆಗೆದನು.

ಚಾಣಕ್ಯನು ಶಿಷ್ಯನನ್ನು ನೋಡಿ—ನಮ್ಮ ಸಂಚಿಕೆಯಲ್ಲಿರುವ ಬಟ್ಟ ಲನ್ನು ತಾ ಎಂದು ತರಿಸಿ, ಮುಂದಿಟ್ಟನು. ಅದು ವಿಷಚುಂಬಿನೀ ಶಿಲೆಯಿಂದ ಮಾಡಿದ ಬಟ್ಟಲೆಂದು ವೈದ್ಯನಿಗೇನು ಗೊತ್ತು? ಚೂರ್ಣವನ್ನು ಅದರಲ್ಲಿ ಹಾಕಿ ನೀರು ಹೊಯ್ದನು. ಅದು ಗೊಜೊಗೊಜೊನೆ ಕುದಿದು ನೊರೆ ಗಟ್ಟಿತು; ಚಾಣಕ್ಯನು ಅದನ್ನು ಕವುಚಿ ನೋಡಿದನು; ಒಂದು ಬೊಟ್ಟಾ ದರೂ ಕೆಳಗೆ ಬೀಳಲಿಲ್ಲ; ಅಗ ವೈದ್ಯನನ್ನು ನೋಡಿ—ಇದು ಶೀಘ್ರ ಫಲಕಾರಿಯಾದ ಔಷಧವೆಂದು ತೋರುತ್ತದೆ; ಆದರೂ ನಮ್ಮ ಕ್ರಮವು ಹೇಗೆಂದರೆ—ಮೊದಲು ವೈದ್ಯನೇ ಸೇವಿಸಬೇಕು, ಅನಂತರ ನಾವು ನೋಡುವ; ಮೊದಲು ನೀನು ಸ್ವಲ್ಪ ಕುಡಿ; ಆ ಮೇಲೆ ಅರಸು ತೆಗೆದು ಕೊಂಡಾನು" ಎಂದನು.

ಏನು ಮಾಡುವುದು? ವೈದ್ಯನು ಅತ್ತಿತ್ತ ನೋಡಿದನು; ಉಪಾಯ ವಿಲ್ಲ; ಕುಡಿದನು. ಕೂಡಲೆ ತಲೆತಿರುಕ! ಉರಿಮುರುಕ! ಎದ್ದು ಹೋದನು. ನಡೆಯಲಿಕ್ಕಾಗುವುದಿಲ್ಲ! ಓ ಅಪ್ಪ ಹೋಗಿ ಅಮ್ಮಬ್ಬೆ! ಎಂದು ಅಲ್ಲಿಯೆ ಕುಳಿತನು; ಕಾಲುಗಳನ್ನು ನೀಡಿದನು, ಮುಗುಚಿ ಮಲಗಿ ದನು, ಬೆಳ್ನೊರೆ ಕಾರಿದನು. ಮತ್ತವನು ಏಳಲೆ ಇಲ್ಲ. ಇದನ್ನು ನೋಡಿ ಜನರೆಲ್ಲರೂ ಅತ್ಯಾಶ್ಚರ್ಯಪಟ್ಟರು.

## ೬. ಸರ್ವಾರ್ಥಸಿದ್ಧಿಯ ಪರಲೋಕಯಾತ್ರೆ.

ಮತ್ತೊಂದು ದಿನ ಚಾಣಕ್ಯನು ತನ್ನ ಆಪ್ತರಾದ ಕೆಲವು ಮಂದಿ ಗೂಢಚಾರರನ್ನು ಕರೆದು—ನೀವೆಲ್ಲರೂ ಬೇಕುಬೇಕಾದಂತೆ ವೇಷಭಾಷೆ ಗಳನ್ನು ಮಾಡಿಕೊಂಡು, ಈ ಪಟ್ಟಣದಲ್ಲಿ ರಾಕ್ಷಸನ ಪಕ್ಷದವರು ಯಾರು ಯಾರು ಇದ್ದಾರೆ? ಅವರು ಹೆಚ್ಚಾಗಿ ಹೋಗಿಬರುವ ಸ್ಥಳಗಳು ಯಾವುವು? ಚಂದ್ರಗುಪ್ತನನ್ನು ದ್ವೇಷಿಸುವವರು ಯಾರು? ರಾಕ್ಷಸನ ಹೆಂಡತಿಮಕ್ಕಳು ಎಲ್ಲಿದ್ದಾರೆ? ಅಮಾತ್ಯನು ಏನು ಮಾಡುತ್ತಿದ್ದಾನೆ? ಎಂಬುದನ್ನು ತಿಳಿದು ಬನ್ನಿರಿ ಎಂದು ಅವರನ್ನು ಕಳುಹಿಸಿದನು. ಬಳಿಕ

ಚಂದ್ರಗುಪ್ತನನ್ನು ಕರೆದು—ನೀನೀಗ ಸುಮ್ಮನೆ ಇರಬಾರದು; ನಿನ್ನ ಅಜ್ಜನನ್ನು ಕಂಡು ಬಾ ಎಂದನು.

ಚಂದ್ರಗುಪ್ತನು ಅದಕ್ಕೆ ಒಪ್ಪಿ, ಹೋಗಿ ಕಂಚುಕಿಗಳ ಮುಖದಿಂದ ಸಮಯವನ್ನು ತಿಳಿದು, ಒಳಹೊಕ್ಕು ಅಜ್ಜನ ಪಾದಗಳಿಗೆ ದಂಡಪ್ರಮಾಣ ವನ್ನು ಮಾಡಿದನು. ಮುದುಕನು ಅವನನ್ನು ನೋಡಿ ಕಣ್ಣೀರು ಮಿಡಿದು-ಮಗನೆ! ನೀನಾದರೂ ಸುಖವಾಗಿ ಬಾಳಿಕೊಂಡಿರು; ನಿನ್ನನ್ನು ನೋಡಿ ನನಗೆ ಮೌರ್ಯನನ್ನು ಕಂಡಹಾಗೆ ಆಯಿತು ; ಅವರವರು ಮಾಡಿದ ಕರ್ಮಗಳಿಗೆ ಅವರವರು ಹೋದರು; ಮಾಡುವುದೇನು? ಆದುದೆಲ್ಲ ಆಗಿ ಹೋಯಿತು; ನಾನು ನಿನಗೆ ಇದುವರೆಗೆ ಎರಡನ್ನು ಗ್ರಹಿಸಿದವನಲ್ಲ; ಅಂತಃಪುರದಲ್ಲಿ ಇನ್ನೂ ಬಹಮಂದಿ ಯುವತಿಯರಿದ್ದಾರೆ; ಅವರೆಲ್ಲರನ್ನು ನಿನ್ನ ಅಕ್ಕತಂಗಿಯರಂತೆ ನೋಡಿ ನಡೆಯಿಸಿಕೊಂಡು ಬಾ; ನಾನು ಮನಸ್ಸು ಬಂದರೆ ಇಲ್ಲಿರುತ್ತೇನೆ, ಇಲ್ಲದಿದ್ದರೆ ಎಲ್ಲಿಗಾದರೂ ತಪೋ ವನಕ್ಕೆ ಹೋಗುತ್ತೇನೆ ಎಂದನು.

ಅದಕ್ಕೆ ಚಂದ್ರಗುಪ್ತ—ಅಜ್ಜಾ! ನಿಮ್ಮನ್ನು ಕಂಡು ನನ್ನ ತಂದೆ ತಮ್ಮಂದಿರ ದುಃಖವನ್ನು ಮರೆತೆನು; ಈಗ ಇರುವುದೆಲ್ಲವೂ ನೀವೆ ಮಾಡಿ ರುವುದು; ಇದರಲ್ಲಿ ಇನ್ನೊಬ್ಬರಿಗೆ ಏನೂ ಹಕ್ಕಿಲ್ಲ; ನಾನು ನಿಮ್ಮ ಅಪ್ಪಣೆಯಂತೆ ನಡೆದುಕೊಂಡಿರುತ್ತೇನೆ, ನೀವು ನನಗೆ ಬುದ್ಧಿನೀತಿಗಳನ್ನು ಹೇಳುತ್ತ, ಇಚ್ಛಾನುಸಾರವಾಗಿ ಪರಲೋಕಸಾಧನವಾದ ದಾನಧರ್ಮಾ ದಿಗಳಿಂದ ಬೇಕಾದಂತೆ ಧನವ್ಯಯಮಾಡುತ್ತ ಇರಬೇಕು; ಹಾಗಲ್ಲದೆ ಹೀಗೆ ನನಗೆ ಅಪಕೀರ್ತಿಯುಂಟಾಗುವಂತೆ ಮಾಡಬಾರದು; ಅಲ್ಲದಿದ್ದರೆ ನಿಮ್ಮೊಡನೆ ನಾನೂ ವನಕ್ಕೆ ಬರುತೇನೆ ಎಂದು ಹೇಳಿ ಬಗೆಬಗೆಯಿಂದ ಮುದುಕನನ್ನು ಒಡಂಬಡಿಸಿ ತನ್ನ ಸ್ಥಾನಕ್ಕೆ ಬಂದನು.

ಮಲಯಕೇತು ತನ್ನ ದೇಶಕ್ಕೆ ಹೋಗುತ್ತಿದ್ದನು; ಹಿಂದಣಿಂದ ಕೆಲವು ಮಂದಿ ದೂತರು ಓಡಿಬಂದು ವಿರೋಚನನು ಮೃತನಾದ ವರ್ತ ಮಾನವನ್ನು ಅರಿಕೆ ಮಾಡಿಕೊಂಡರು. ಅದನ್ನು ಕೇಳಿ ರಾಜಪುತ್ರನು ಮಹಾ ದುಃಖದಿಂದ ಬಾಗುರಾಯಣನೊಡನೆ—ಮಿತ್ರನೆ! ಹುಣ್ಣಿನ ಮೇಲೆ ಗುಳ್ಳೆ ಮೂಡಿದಂತಾಯಿತು; ಕಾಶಿರಾಯನ ನಿಮಿತ್ತವನ್ನು ಮಾಡಿ ನಂದರನ್ನು ಕೊಲ್ಲಿಸಿದನು; ವಿಷಕನ್ಯಾಮುಖದಿಂದ ತನ್ನ ಅಣ್ಣನನ್ನು

ತೆಗೆದನು ಎಂದು ಹೆದರಿ ಓಡಿಹೋದ ನಮ್ಮ ಚಿಕ್ಕಪ್ಪನು, ಪುನಃ ಆ ಚಾಣಕ್ಯನು ಬೀಸಿದ ಬಲೆಯಲ್ಲಿ ಸಿಕ್ಕಿ ಜೀವ ಬಿಟ್ಟನೆಂದರೆ ಕಷ್ಟವೆ ಸರಿ! ಇನ್ನೇನು ಉಳಿಯಿತು? ಇಷ್ಟೆಲ್ಲ ಆದಮೇಲೆ ನನಗಿನ್ನು ರಾಜ್ಯವು ಯಾಕೆ? ಮಣ್ಣು ಯಾಕೆ? ಮಸಣ ಯಾಕೆ? ಹೋಗಲಿ! ಒಂದೂ ಬೇಡ! ಎಂದು ವೈರಾಗ್ಯದಿಂದ ಹೇಳಿದನು. ಬಾಗುರಾಯಣನು ಸಮಯೋಚಿತವಾದ ಮಾತುಗಳಿಂದ ಹಾಗೆ ಹೀಗೆ ಎಂದು ಹೇಳಿ, ಅವನನ್ನು ಸಮಾಧಾನಪಡಿಸಿ ಕರೆದುಕೊಂಡು ಹೋದನು.

ಚಾಣಕ್ಯನು ಪರ್ಣಶಾಲೆಯಲ್ಲಿ ಕುಳಿತುಕೊಂಡಿದ್ದನು; ಆಗ ಒಬ್ಬನು ಬಂದು ಕೈಮುಗಿದು—ಸ್ವಾಮಿ! ಆ ಕಪಟಿಯಾದ ಗೃಹರಕ್ಷಕನು ಒಬ್ಬ ಸಾಹುಕಾರನ ತೋಟದಲ್ಲಿ ಗಿಡಗಳಿಗೆ ನೀರು ಹಾಕಿಕೊಂಡು ಕೂಲಿಯಾಳಿನ ವೇಷದಲ್ಲಿ ಇದ್ದಾನೆ ಎಂದನು. ಚಾಣಕ್ಯನು ರಾಜದೂತರನ್ನು ಕಳುಹಿಸಿ ಅವನನ್ನು ಅಲ್ಲಿಂದ ಹಿಡಿದುತರಿಸಿ, ಮುಂದೆ ನಿಲ್ಲಿಸಿಕೊಂಡು ಮೊರೆಯನ್ನು ನೋಡಿ—ಏ ದುರ್ಬುದ್ಧೀ! ನೀನು ಮಾಡಿದುದೇನು? ನಿನ್ನ ಜೀವವು ಉಳಿಯಬೇಕಾದರೆ ಸತ್ಯ ಹೇಳು ಎಂದನು. ಅವನಿಗೆ ಜೀವ ಹಾರಿದಂತಾಗಿ ಹೋಯಿತು; ಎದೆ ದಡದಡಿಸಿಕೊಂಡು, ನಾಲಗೆ ಬಡಬಡಿಸಿಕೊಂಡು—ದ—ದ್ದ— ದ್ದವ್ಮ್ಮಯ್ಯಾ ಸ್ಸ—ಸ್ಸ—ತ್ಯ—ಹ್ಹೆ—ಹೇಳುತ್ತೇನೆ; ಮ—ಮಾಡಿದುದು ಹ—ಹ್ಹೌದು ಎಂದನು.

ಚಾಣಕ್ಯ—ಹಾಗಾದರೆ ಅರಮನೆಯ ಗುಟ್ಟೆಲ್ಲ ನಿನಗೆ ಗೊತ್ತಿದೆಯಷ್ಟೆ? ರಾಕ್ಷಸನು ಯಾವ ದಾರಿಯಿಂದ ಎಲ್ಲಿಗೆ ಹೋದನು? ಹೇಳಿದರೆ ಕ್ಷಮಿಸುವೆವು.

ಭವನ ಪಾಲಕ—ಅಂತಃಪುರದ ಸುರಂಗದಲ್ಲೆ ಹೊರಟು, ಸೀಗೆ ಬೇಲಿಯ ದಾರಿ ಹಿಡಿದು ಹೋದರು, ಇದು ಸತ್ಯವು.

ಚಾಣಕ್ಯನು ಅವನನ್ನು ಬಿಟ್ಟು, ಕಳುಹಿಸಿ ಗುಟ್ಟಾಗಿ ಕೆಲವು ಮಂದಿ ಚೋರ ದೂತರನ್ನು ಕರೆದು-ಉದ್ಯಾನದ ಸೀಗೆ ಬೇಲಿಯ ಬಳಿ ಸುರಂಗದ ಬಾಗಿಲಿದೆ; ನೀವಲ್ಲಿ ಅಡಗಿಕೊಂಡಿದ್ದು ನಡೆದುದನೆಲ್ಲ ಬಂದು ಹೇಳಿರಿ ಎಂದು ಅವರನ್ನು ಕಳುಹಿಸಿ, ಆಸ್ಥಾನಕ್ಕೆ ಬಂದು, ವಂದಿಗಳನ್ನು ಕರೆದು—ಇಂದು ಚಂದ್ರಗುಪ್ತನನ್ನೆ ಹೊಗಳಬೇಕು; ಅವನ ಕಾರ್ಯವನ್ನೆ ಹೊಗಳಬೇಕು ಎಂದನು.

ಆಗ ವಂದಿಗಳು—ಜಯುವೈರಿದಲ್ಲಣನೆ! ಜಯುರಾಜಶೇಖರನೆ! ನಂಡಸಂಹಾರಕನೆ! ಚಂದ್ರವಂಶೋದ್ಭವನೆ! ಎಂದು ಒಬ್ಬನೂ; ನಂದಕರಿ ಹರಿಜಯುತು! ಚಂದ್ರಗುಪ್ತನೆ ಜಯುತು! ಎಂದು ಇನ್ನೊಬನೂ; ವಂದ ಕುಲಕಾಲನೇ! ಸುಂದರಕಾರನೇ! ಮೌರ್ಯ ಕುಲತಿಲಕನೇ! ಶೌರ್ಯ ಸಾಹಸಿಕನೇ! ಎಂದು ಮತ್ತೊಬ್ಬನೂ ಕೈಯೆತ್ತಿ ಹೊಗಳಿದರು.

ಇದನ್ನು ಕೇಳಿ ಒಳಗಿದ್ದ ಸರ್ವಾರ್ಥಸಿದ್ಧಿಮಹಾರಾಯನು, ಒಮ್ಮೆಯೆ ಎಲ್ಲವೂ ನೆನಪಿಗೆ ಬಂದು, ತಡೆಯಲಾರದ ದುಗುಡದಿಂದ, ಯಾರಿಗೂ ತಿಳಿಯದಂತೆ ಸುನಂದಾದೇವಿಯೊಡನೆ, ಒಬ್ಬ ದಾಸನನ್ನೂ, ಒಬ್ಬಳು ದಾಸಿಯನ್ನೂ ಕರೆದುಕೊಂಡು ಸುರಂಗಮಾರ್ಗವಾಗಿ ಹೊರಟು ನಡೆದುಬಿಟ್ಟನು. ಇದನ್ನು ನೋಡುತ್ತಿದ್ದ ಆ ಚೋರರು ಗುಟ್ಟಿನಲ್ಲಿ ಬಂದು ಚಾಣಕ್ಯನಿಗೆ ತಿಳಿಸಿದರು.

ಚಾಣಕ್ಯನು ಮನಸ್ಸಿನಲ್ಲಿ—ಈ ಮುದುಕನು ಹೊರಟುಹೋದುದು ಅಮಾತ್ಯನಿಗೆ ತಿಳಿದರೆ, ಅವನು ಬಂದು ಇವನನ್ನು ಒಡಂಬಡಿಸಿ, ಇವನಿಗೊಬ್ಬ ದತ್ತಪುತ್ರನನ್ನಾದರೂ ಮಾಡಿ, ಕಡೆಗೆ ನಾವು ನಂದರಿಗೆ ಮಾಡಿದಂತೆಯೆ ಚಂದ್ರಗುಪ್ತನಿಗೆ ಮಾಡದೆ ಬಿಡನು ಎಂದು ಯೋಚಿಸಿ, ಕಳ್ಳರೊಡನೆ—ನೀವು ಸಮಯವನ್ನು ಸಾಧಿಸಿ, ಆ ಸುರಂಗದಲ್ಲಿ ಹೊರಟು ಹೋಗಿರುವವರಲ್ಲಿರುವ ಮುದುಕನೊಬ್ಬನನ್ನು ಕೊಂದು ನನಗೆ ಬಂದು ತಿಳಿಸಿರಿ ಎಂದು ಅವರನ್ನು ಕಳುಹಿಸಿದನು.

ಸರ್ವಾರ್ಥಸಿದ್ಧಿಮಹಾರಾಯನು ಸುನಂದಾದೇವಿಯೊಡನೆ ನೈಮಿಶಾರಣ್ಯಕ್ಕೆ ಬಂದು, ಮುನಿಗಳಿಂದ ಉಪದೇಶವನ್ನು ಪಡೆದು, ಗಂಗಾತೀರದಲ್ಲಿ ಒಂದು ಪರ್ಣಶಾಲೆಯನ್ನು ರಚಿಸಿಕೊಂಡು, ಅದರಲ್ಲಿ ಮುನಿವೃತ್ತಿಯಿಂದ ಕಾಲಯಾಪನೆ ಮಾಡುತ್ತಿದ್ದನು. ಒಂದು ದಿನ ಗಂಗಾಸ್ನಾನ ಮಾಡಿ, ರಾಜನು ಸೂರ್ಯದರ್ಶನ ಮಾಡುತ್ತಿರುವಾಗ ಆಕಾಶದಲ್ಲಿ ಸುವರ್ಣವೃಕ್ಷ ಸಮೂಹವೂ, ಸೋಪಾನಪಂಙ್ತಿಯೂ ಕಾಣಿಸಿದುವು. ರಾಯನು ಇಲ್ಲಿಗೆ ತನ್ನ ಆಯುಸ್ಸು ತೀರಿತೆಂದು ತಿಳಿದು, ದರ್ಭಾಸನದಲ್ಲಿ ಕುಳಿತು, ಶ್ವಾಸವನ್ನು ನಿರೋಧಿಸಿ, ನಿಶ್ಚಲಚಿತ್ತದಿಂದ ಯೋಗಾರೂಢನಾಗಿ, ಸುಶುಮ್ನಾ ಮಾರ್ಗದಿಂದ ಶ್ವಾಸಧಾರಣೆಯನ್ನು ಮಾಡಿ, ನಿರ್ವಿಕಲ್ಪ ಬ್ರಹ್ಮದಲ್ಲಿ ಚಿತ್ತವು ಏಕರಸವಾಗಲು, ಪ್ರಾಣವಾಯು ಆ ನಾಡಿಯ ಮಾರ್ಗ

ವಾಗಿ ನೆತ್ತಿಯನ್ನು ಭೇದಿಸಿಕೊಂಡು ಬ್ರಹ್ಮದಲ್ಲಿ ಲೀನವಾಯಿತು. ಶರೀರವು ಮಾತ್ರವು ಕುಳಿತಿದ್ದಂತೆಯೇ ಇತ್ತು.

ಆ ಸಮಯದಲ್ಲಿ ಆ ಕಳ್ಳರು ಬಂದು ನೋಡಿ, ಇವನೇ, ಎಂದು ಕತ್ತಿಯ ತುದಿಯನ್ನು ತಗಲಿಸಿದ ಕೂಡಲೇ ದೇಹವು ಉರುಳಿತು. 'ಹೂಃ! ಮುದುಕ ಸತ್ತಿತು;' ಎಂದು ಅವನ ಜಪಸರವನ್ನು ತೆಗೆದುಕೊಂಡು ಅಲ್ಲಿಂದ ಹೊರಟರು.

ರಾಜನು ದೈವಾಧೀನಾದುದನ್ನು ಕೇಳಿ ಸುನಂದಾದೇವಿ ಮಹಾ ದುಃಖದಿಂದ ಹಲವು ಹಂಬಲಿಸಿ, ಗೋಳಾಡಿ, ಕಡೆಗೆ ಪತಿಯ ಶವದೊಡನೆ ಸಹಗಮನವನ್ನು ಮಾಡಿದಳು.

## ೭. ರಾಕ್ಷಸನ ಸರ್ವಾಧಿಕಾರ.

ಅಮಾತ್ಯ ರಾಕ್ಷಸನು ಅರಣ್ಯದ ಒಂದು ಮೂಲೆಯಲ್ಲಿ ಗುಟ್ಟಾಗಿ ಕುಳಿತುಕೊಂಡಿದ್ದನು. ಅಲ್ಲಿಗೆ ವಾಸಕನೆಂಬ ಗೂಢಚಾರನು ಬಂದು, ಪಾಟಲೀಪುರದಿಂದ ಅಮಾತ್ಯನು ಹೊರಟ ಮೇಲೆ ನಡೆದ ವಿಷಯಗಳನ್ನೆಲ್ಲ ವಿವರಿಸಿ ಹೇಳುತ್ತಿದ್ದನು. ಆ ಸಮಯದಲ್ಲಿ ಸರ್ವಾರ್ಥಸಿದ್ಧಿಯೊಡನೆ ಕಾಡಿಗೆ ಹೋದ ಕ್ಷೌಮಕನೆಂಬ ಸೇವಕನು ಅದುವೆ ದಾರಿಯಲ್ಲೆ ಬರುತಿದ್ದನು. ಅವನು ಅಮಾತ್ಯನನ್ನು ನೋಡಿ ಬಿಕ್ಕಿಬಿಕ್ಕಿ ಅಳುತ್ತ ರಾಯನ ಮರಣವಾರ್ತೆಯನ್ನು ಹೇಳಿದನು.

ಇವುಗಳನ್ನೆಲ್ಲ ಕೇಳಿ ಅಮಾತ್ಯನು—ಅಃ! ನನ್ನ ಪ್ರಯತ್ನವೆಲ್ಲ ನೀರಿನಲ್ಲಿಟ್ಟ ಹೋಮವಾಯಿತು! ನನ್ನ ಉಪಾಯಗಳೆ ಹೀಗಾದ ಮೇಲೆ ಮಿಕ್ಕವರ ಪಾಡೇನು? ಅಃ! ಚಾಣುಕ್ಯಾ! ಆಗಲಿ; ನನ್ನ ಒಡೆಯರು ಕಾಲಾಧೀನರಾದರೂ ನನಗಿರುವ ಪೌರುಷವು ಇನ್ನೂ ಇದ್ದಂತೆಯೆ ಇದೆ; ಬಿಡೆನು, ಬಿಡೆನು; ನೋಡಿಕೊಂಡೇನು. ಈ ಸಮಯದಲ್ಲಿ ಮಲಯಕೇತುವನ್ನು ಒಳಹೊಕ್ಕಾದರೂ ಆ ಚಾಣಕ್ಯ ಚಂದ್ರಗುಪ್ತರಿಗೆ ಬುದ್ಧಿಗಲಿಸದೆ ಬಿಡೆನು! ಅವರನ್ನು ತಲೆಗಡಿದು, ಅವರ ಕೆನ್ನೆತ್ತರಿಂದ ಲೋಕಾಂತರವಾಸಿಗಳಾದ ಆ ನನ್ನೊಡೆಯರಿಗೆ ಜಲಾಂಜಲಿಯನ್ನು ಕೊಟ್ಟು, ಅವರ ಆತ್ಮಗಳಿಗೆ ಶಾಂತಿಯನ್ನುಂಟುಮಾಡದಿದ್ದರೆ, ಇನ್ನೂ ನಾನು ಜೀವದಿಂದಿದ್ದು ಏನು ಪುರುಷಾರ್ಥವು? ಎಂದು ಆ ದೂತರನ್ನು

ತನ್ನೊಡನೆ ಕರೆದುಕೊಂಡು ಪರ್ವತರಾಜ್ಯಾಭಿಮುಖನಾಗಿ ಹೊರಟು ಬಂದು, ಶಾಹುರೀ ಪಟ್ಟಣದ ಉದ್ಯಾನವನದಲ್ಲಿ ಇಳಿದನು.

ಅತ್ತ ಪಾಟಲೀಪುರದಲ್ಲಿ ವೃದ್ಧದಂಪತಿಗಳು ಇಲ್ಲೆಂದು ತಿಳಿದು ಚಂದ್ರಗುಪ್ತನು ವ್ಯಸನಾಕ್ರಾಂತನಾಗಿ, ಇವರು ಪುತ್ರಶೋಕಾಕುಲಿತರಾಗಿ ಕಾಡಿಗೆ ಹೋಗಿಬರಬಹುದೆಂದು ನಿಶ್ಚೈಸಿ, ಎಲ್ಲಿದ್ದರೂ ಕರೆದುಕೊಂಡು ಬರಬೇಕೆಂದು ಕೆಲವು ಮಂದಿ ಸೇವಕರನ್ನು ಕಳುಹಿಸಿದನು.

ಆ ಸಮಯದಲ್ಲಿ ಚಾಣಕ್ಯನಿಂದ ನಿಯಮಿತರಾದ ಕಳ್ಳರು ಬಂದು— 'ಸ್ವಾಮೀ! ಮುದುಕನನ್ನು ಕೊಂದೆವು, ಇದು ಅವನ ಜಪಸರವು' ಎಂದು ಚಾಣಕ್ಯನಿಗೆ ಒಪ್ಪಿಸಿದರು. ಅದನ್ನು ನೋಡಿ, ಅವರನ್ನು ಕಳುಹಿಸಿ ಇನ್ನು ಚಂದ್ರಗುಪ್ತನ ಆಧಿಪತ್ಯವು ನಿಷ್ಕಂಟಕವಾಯಿತು ಎಂದು, ಎದ್ದು ಸ್ನಾನಕ್ಕೆ ಹೊರಟು ಹೋದನು.

ಸೇವಕರು ಕಾಡಿನಲ್ಲೆಲ್ಲ ಹುಡುಕಿ, ಅಲ್ಲಿರುವ ಆಶ್ರಮವಾಸಿಗಳಿಂದ ರಾಯನ ಮರಣದ ಸುದ್ದಿಯನ್ನು ತಿಳಿದು ಬಂದು, ಚಂದ್ರಗುಪ್ತನ ಸನ್ನಿಧಿಯಲ್ಲಿ ಅರಿಕೆ ಮಾಡಿದರು. ಅದಕ್ಕವನು ಬಹಳವಾಗಿ ನೊಂದುಕೊಂಡು— ಅಯ್ಯೋ! ಎಲ್ಲರೂ ಹೋದರು! ಮುದುಕನಾದ ಅಜ್ಜನಾದರೂ ಒಬ್ಬನಿದ್ದನು ಎಂದು ನೆನೆಸಿಕೊಂಡಿದ್ದೆನು; ಅವನೂ ಹೀಗಾಗಿ ಹೋದ ಮೇಲೆ ಇನ್ನು ಯಾರ ಸೇವೆಯನ್ನು ಮಾಡಲಿ? ಎಂದು ಗದ್ಗದಕಂಠನಾಗಿ ಬಿಕ್ಕುಳಿಸಿಕೊಂಡು ಅಳುತ್ತಿರುವಾಗ ಅಲ್ಲಿಗೆ ಚಾಣಕ್ಯನು ಬಂದು, ಸುದ್ದಿಯನ್ನೆಲ್ಲ ಕೇಳಿ, ತಾನೂ ವ್ಯಸನಪಟ್ಟು 'ಹೂಂ! ಹುಟ್ಟಿದವನಿಗೆ ಮರಣವು ತಪ್ಪದು, ಇಂದಲ್ಲದಿದ್ದರೆ ನಾಳೆ; ಎಲ್ಲವರಿಗೂ ಒಂದು ದಿನವು ಇದ್ದೆ ಇದೆ' ಎಂದು ಸಮಯೋಚಿತವಾದ ಮಾತುಗಳಿಂದ ಅವನನ್ನು ಸಮಾಧಾನಗೊಳಿಸಿ, ಅವನ ಕೈಯಿಂದಲೆ ಮುಂದಣ ಕಾರ್ಯಗಳನ್ನೂ ಮಾಡಿಸಿ, ಬಂದವರಿಗೆಲ್ಲ ಭೋಜನ ದಕ್ಷಿಣೆಗಳನ್ನು ಕೊಡಿಸಿದನು.

ಇಲ್ಲಿ ಹೀಗಿರಲು, ಅಲ್ಲಿ ಭಾಗುರಾಯಣನು ಚಾರರ ಮುಖದಿಂದ ಅಮಾತ್ಯನು ಉಪವನದಲ್ಲಿರುವುದನ್ನು ತಿಳಿದು, ಮಲಯಕೇತುವಿನ ಬಳಿಗೆ ಬಂದನು. ಆಗ ಇಬ್ಬರು ದೂತರು ಬಂದು ರಾಜಸನ್ನಿಧಿಯಲ್ಲಿ ನಿಂದು ಕೈ ಮುಗಿದು,—'ಸ್ವಾಮೀ! ಅಮಾತ್ಯರಾಕ್ಷಸರು ಬಂದು ಉದ್ಯಾನದಲ್ಲಿದ್ದಾರೆ; ತಮ್ಮ ದರ್ಶನವನ್ನು ಅಪೇಕ್ಷಿಸುತ್ತಾರೆ' ಎಂದರು.

ಅದಕ್ಕೆ ಮಲಯಕೇತು ಮನಸ್ಸಿನಲ್ಲಿ—'ಇವನು ನಂದರ ಮಂತ್ರಿ; ಚಂದ್ರಗುಪ್ತನಲ್ಲಿ ಇರಲಿಕ್ಕೆ ಹೆದರಿ ಬಂದನೊ? ಇಲ್ಲವೆ ನಮಗೂ ಚಂದ್ರ ಗುಪ್ತನಿಗೂ ವಿರೋಧವಾದುದನ್ನು ತಿಳಿದು, ಇದುವೆ ತಕ್ಕ ಸಮಯವೆಂದು ಬಂದನೊ? ತಿಳಿಯಬೇಕು: ಇವನು ನಂದಮಂತ್ರಿಯಾಗಿದ್ದುದರಿಂದ ಸಕಲರಾಜರೂ ಒಂದು ಕಾಲದಲ್ಲಿ ಇವನನ್ನು ಆಶ್ರೈಸಿಕೊಂಡಿದ್ದರು; ಮತ್ತು ಇವನು ಬಹಳ ಬುದ್ಧಿಶಾಲಿ ಎಂದು ನಮ್ಮ ಹಿರಿಯರು ಹೇಳುವುದನ್ನು ಕೇಳಿದ್ದೇನೆ; ಯಾವುದಕ್ಕೂ ಆಲೋಚಿಸಿ ಕೆಲಸವನ್ನು ಮಾಡಬೇಕು' ಎಂದು ನಿಶ್ಚೈಸಿ, ಬಾಗುರಾಯಣನನ್ನು ನೋಡಿ—'ರಾಕ್ಷಸನು ನಮ್ಮನ್ನು ನೋಡಬೇಕೆಂದು ಹೇಳಿ ಕಳುಹಿಸಿದ್ದಾನೆ, ಇವನು ಚಂದ್ರಗುಪ್ತನ ವೈರಿ, ಕಾರ್ಯದಕ್ಷನು, ಸತ್ಯವಂತನು, ಇವನಿಂದ ನಮ್ಮ ಕೆಲಸವಾದಿತೊ? ಹೇಗೆ?' ಎಂದು ಕೇಳಿದನು.

ಬಾಗುರಾಯಣ—ನೀನೀಗ ಹೇಳಿದುದೆಲ್ಲವೂ ಸಹಜವೆ; ಇವನೀಗ ಚಂದ್ರಗುಪ್ತನಲ್ಲಿ ವಿರೋಧವನ್ನು ಸಾಧಿಸಬೇಕೆಂದು ಬಂದವನಾದರೆ ನಿನ್ನ ಮಿಾಸೆ ಮೇಲಾಯಿತು.

ಮಲಯಕೇತು—ಹಾಗೆ ಹೇಳುವುದಕ್ಕಾಗುವುದಿಲ್ಲ; ಚಾಣಕ್ಯನಲ್ಲಿ ಇವನದು ಏನು ಸಾಗಿತು?

ಬಾಗುರಾಯಣ—ಆದರೆ ಇದರಲ್ಲಿ ಒಂದುಂಟು; ಆ ಚಾಣಕ್ಯನು ದುರಹಂಕಾರಿ ಮತ್ತು ನಿಷ್ಠುರಿ, ಮಹಾ ಧೂರ್ತನು; ಚಂದ್ರಗುಪ್ತನು ಎಷ್ಟಾದರೂ ಸಾಧು. ನಿನ್ನ ಅದೃಷ್ಟವು ಒಳ್ಳೆಯದಾಗುವ ಕಾಲವು ಬಂದರೆ, ಅವರೊಳಗೆ ಎಲ್ಲಿಯಾದರೂ ಅಷ್ಟಷ್ಟೆ ಆಗಿಹೋದರೆ, ಆಗ ಮಾತ್ರ ಈ ರಾಕ್ಷಸನಿಂದ ನಿನ್ನ ಕೆಲಸವು ಕೈಗೂಡೀತು.

ಮಲಯಕೇತು—ಹಾಗಾದರೆ ನೀನೆ ಹೋಗಿ ಅವನನ್ನು ಕರೆದುಕೊಂಡು ಬಾ.

ಬಾಗುರಾಯಣನು—"ಆಗಲಿ" ಎಂದು ಪರಿವಾರದೊಡನೆ ಹೊರಟು ಬಂದು ಅಮಾತ್ಯನನ್ನು ನೋಡಿ ನಮಸ್ಕಾರ ಮಾಡಿದನು. ರಾಕ್ಷಸನು ಅವನನ್ನು ಮನ್ನಿಸಿ, ಕುಶಲವನ್ನು ವಿಚಾರಿಸಿ, ಕಡೆಗೆ 'ನೀನಿಲ್ಲಿ ಬರಲು ಕಾರಣವೇನು?' ಎಂದು ಕೇಳಿದನು.

ಬಾಗುರಾಯಣ—ಏನು ಮಾಡುವುದು? ನಂದರು ಕಾಲವಾಗಿ ಹೋದರು! ಆ ಚಂದ್ರಗುಪ್ತನ ಮುಂದೆ ಕೈಜೋಡಿಸಿಕೊಂಡು ನಿಲ್ಲಲಿಕ್ಕೆ ನನ್ನ ಮನಸ್ಸು ಒಪ್ಪಲಿಲ್ಲ; ಆದುದರಿಂದ ಅವನನ್ನು ಹೋಗಿ ಕಾಣುವುದಕ್ಕೆ ಹಾಗೆ ಹೀಗೆ ಎಂದು ದಿನಹರಣ ಮಾಡುತ್ತಿದ್ದೆನು; ಇದಕ್ಕಾಗಿ ನನ್ನನ್ನು ಅಪಮಾನ ಪಡಿಸಬೇಕೆಂದು ಚಾಣಕ್ಯನು ಆಲೋಚಿಸಿದ್ದಾನೆ ಎಂದು ಸ್ನೇಹಿತರ ಮುಖದಿಂದ ನನಗೆ ತಿಳಿಯಿತು. ಆ ಸಮಯದಲ್ಲಿ ಚಂದ್ರಗುಪ್ತನ ದೂತರು ಬಂದು—ನೀನೀಗಲೆ ಹೋಗಿ ಮಲಯಕೇತುವಿನ ಗೂಡಾರದ ಪಡುಗಡೆಯಲ್ಲಿ ಸೈನ್ಯಸಮೇತವಾಗಿ ನಿಲ್ಲಬೇಕು; ಬಳಿಕ ಅಪ್ಪಣೆಯಾದಂತೆ ಮಾಡಬೇಕು ಎಂದು ಚಂದ್ರಗುಪ್ತರ ಅಪ್ಪಣೆಯಾಗಿದೆ ಎಂದರು. ನಾನು ಇದರಲ್ಲೇನೊ ಮೋಸವಿದೆ ಎಂದು ತಿಳಿದು ಪರ್ವತೇಶ್ವರರಿಗೆ ತಿಳಿಸ ಬೇಕೆಂದು ಬರುವಷ್ಟರೊಳಗೆ ಅಲ್ಲಿ ಗಡಿಬಿಡಿಯಾಗಿ ಹೋಗಿದೆ; ಕಡೆಗೆ ಇವ ನೊಬ್ಬನಾದರೂ ಬದುಕಿಕೊಳ್ಳಲಿ ಎಂದು ಮಲಯಕೇತುವನ್ನು ಅಲ್ಲಿಂದ ತಪ್ಪಿಸಿಕೊಂಡು ಹೊರಟೆನು; ಇಷ್ಟು ನಡೆದ ಸಂಗತಿ. ಹುಡುಗನೇನೊ ಒಳ್ಳೆಯವನು, ಸಾಧು, ಮಾಡಿದ ಉಪಕಾರವನ್ನು ಮರೆಯುವವನಲ್ಲ. ಇಷ್ಟಾದ ಮೇಲೆ ನಾನು ಹಿಂದಕ್ಕೆ ಹೊರಟೆನು; ಆಗ ಮಲಯಕೇತು—ಇಷ್ಟು ಮಾಡಿದವನು ನೀನು ಎಷ್ಟಕ್ಕೂ ಹೋಗಕೂಡದೆಂದು ಹಟಹಿಡಿ ದನು; ಏನೆಂದರೂ ಬಿಡಲಿಲ್ಲ; ಮತ್ತೆ ನಾನು ಸಹ ಹೀಗೆ ಆಲೋಚನೆ ಮಾಡಿ "ಉಂಡ ಮೇಲೆ ಜಾತಿ ಕೇಳುವುದು ಯಾಕೆ? ಕೈಹಾಕಿ ಹೋಯಿತು; ಇನ್ನು ಆದುದೆಲ್ಲ ಆಗಿಹೋಗಲಿ, ಎಂದು ಇಲ್ಲಿ ಬಂದು ಇದ್ದೇನೆ ಈಗ ನೀವೂ ಬಂದಿರಿ; ಇನ್ನು ಅವನ ಬಯಕೆಯೆಲ್ಲವೂ ಕೈಗೂಡಿ ದಂತೆಯೆ ಸರಿ; ದಯಮಾಡಿಸಬೇಕು" ಎಂದನು.

ಅದಕ್ಕೆ ರಾಕ್ಷಸನು, 'ಆಗಲಿ' ಎಂದು ತನ್ನ ಕಡೆಯವರೊಡನೆ ಎದ್ದು ಹೊರಟು ಬಂದನು. ಅಮಾತ್ಯನು ಬರುತ್ತಿರುವುದನ್ನು ದೂರದಿಂದಲೆ ನೋಡಿ ಮಲಯಕೇತು ಪೀಠದಿಂದ ಎದ್ದು ಬಂದು ನಮಸ್ಕರಿಸಿ, ಕರೆದು ಕೊಂಡು ಹೋಗಿ, ಬಳಿಯಲ್ಲಿಯೆ ಕುಳ್ಳಿರಿಸಿಕೊಂಡು ಸುಖದುಃಖಗಳನ್ನು ವಿಚಾರಿಸಿದನು.

ಆಗ ಅಮಾತ್ಯನು—ಕುಮಾರನೇ! ಈ ಯೋಗಕ್ಷೇಮಗಳೆಲ್ಲ ಒತ್ತಟ್ಟಿಗೆ ಇರಲಿ; ನಮಗೀಗ ಸುಖವೆಂದರೇನು? ದುಃಖವೆಂದರೇನು?

ಬಂದ ವಿಷಯುವನ್ನು ಕೇಳು—ಆ ಮೋಸಗಾರನಾದ ಚಾಣಕ್ಯನನ್ನು ನಂಬಿ ನಿನ್ನ ತಂದೆಗೆ ಈ ಅವಸ್ಥೆಯಾಯಿತು; ಆದುದರಿಂದ—ಎಂದು ಒಮ್ಮೆ ನಾಲ್ಕು ದಿಕ್ಕನ್ನೂ ನೋಡಿದನು. ಕೂಡಲೆ ಸಭೆಯಲ್ಲಿದ್ದವರೆಲ್ಲರೂ ಅಲ್ಲಲ್ಲಿ ಹೊರಟು ಹೋದರು. ಆಗ ರಾಕ್ಷಸನು—ಚಾಣಕ್ಯನು ಮಾಡಿದ ಉಪಕಾರವನ್ನು ಪುನಃ ಹೇಳಬೇಕಾಗಿಲ್ಲವಷ್ಟೆ? ಆದುದರಿಂದ ನೀನೀಗ ಸುಮ್ಮನಿರುವುದು ಯೋಗ್ಯವಲ್ಲ; ಅವನು ಮಾಡಿದುದಕ್ಕೆ ಪ್ರತಿಯಾಗಿ ಏನು ಮಾಡಿದರೂ ಅದರಲ್ಲಿ ಪಾಪವೆಂಬುದು ಇಷ್ಟಾದರೂ ಇಲ್ಲ; ಎಷ್ಟಾದರೂ ನಂದರಾಜ್ಯ ದಲ್ಲಿರುವ ಪ್ರಜೆಗಳಲ್ಲಿ ನಮ್ಮ ಕೈನಡೆದಂತೆ ಇನ್ನೊಬ್ಬರದು ನಡೆಯದು; ಹೊರಡಬೇಕಾದರೆ ಕೆಲವು ಉಪಾಯಗಳನ್ನು ಹೂಡಿ ಹೊರಟಿದ್ದೇವೆ, ಅವರೆಲ್ಲ ಸಮಯುವನ್ನು ಸಾಧಿಸಿಕೊಂಡೆ ಇದ್ದಾರೆ; ಈಗ ನೀನು ಮನಸ್ಸು ಗಟ್ಟಮಾಡಿಕೊಂಡು ಪುನಃ ಸೇನೆಯನ್ನು ಕೂಡಿಸಿಕೊಂಡು ಹೋಗಿ ಆ ಪಾಟಲೀಪುರವನ್ನು ಮುತ್ತಬೇಕು; ಹಾಗಾದರೆ ನಿನ್ನ ಬಲದಿಂದ ಹೇಗಾ ದರೂ ಮಾಡಿ ಆ ಚಂದ್ರಗುಪ್ತನನ್ನು ಕೊಂದು ನಂದರಾಜ್ಯವನ್ನು ನಿನಗೆ ಕೊಡುವೆವು. ಹೀಗೆ ಮಾಡಿದರೆ ನಮ್ಮ ಒಡೆಯರ ಆತ್ಮಗಳಿಗೂ ತೃಪ್ತಿ ಯಾದೀತು; ಬೇರೇನೂ ನಮಗೆ ಬೇಡ; ಇಷ್ಟು ನಮ್ಮ ಆಲೋಚನೆ. ಏನು?

ಮಲಯಕೇತು—ಅಮಾತ್ಯರೆ! "ರೋಗಿ ಬಯಸಿದುದೂ ಹಾಲು, ವೈದ್ಯನು ಕೊಟ್ಟುದೂ ಹಾಲು" ಎಂಬಂತೆ ನಾನು ಆಲೋಚನೆ ಮಾಡಿ ಕೊಂಡಿದ್ದುದಕ್ಕೂ, ಈಗ ನೀವು ಹೇಳಿದುದಕ್ಕೂ ಸರಿಗಂಟುಬಿತ್ತು; ನೀವು ಮನಸ್ಸುಕೊಟ್ಟು ನಿಂತುಬಿಟ್ಟರೆ ಈ ಚಾಣಕ್ಯಗೀಣಕ್ಯರೆಲ್ಲ ಎಲ್ಲಿ? ಚಂದ್ರ ಗುಪ್ತನ ತಲೆಯನ್ನು ಮಣ್ಣಿಗೆ ಹಾಕದೆ ಪಿತೃಕಾರ್ಯವನ್ನು ಮಾಡೆನು ಎಂದು ನನ್ನ ಪ್ರತಿಜ್ಞೆ ಇದೆ; ಅದಕ್ಕೆ ಸರಿಯಾಗಿ ನೀವೂ ಬಂದು ಸಾರಥಿ ಯಾದಿರಿ; ಈಗ ಸರ್ವಾಧಿಕಾರವನ್ನೂ ನಿಮಗೆ ಕೊಡುತ್ತೇನೆ; ಬೇಕಾ ದಂತೆ ಮಾಡಿಕೊಳ್ಳಬಹುದು; ಎಂದು ಕಪ್ಪುರವೀಳೆಯವನ್ನು ಕೊಟ್ಟು ರಾಕ್ಷಸನನ್ನು ಬಿಡಾರಕ್ಕೆ ಕಳುಹಿಸಿದನು.

ಮರುದಿನ ಅಮಾತ್ಯನನ್ನು ಕರೆಯಿಸಿ ಸಭೆಯಲ್ಲಿ ಕುಳ್ಳಿರಿಸಿಕೊಂಡು, ಅಧಿಕಾರಿಗಳನ್ನು ನೋಡಿ, ಮಲಯಕೇತು—ಇನ್ನು ಮೇಲೆ ನೀವೆಲ್ಲರೂ ಅಮಾತ್ಯರ ಹೇಳಿಕೆಯಂತೆ ನಡೆದುಕೊಳ್ಳಬೇಕು; ಇನ್ನೊಮ್ಮೆ ಪಾಟಲೀ ಪುರಕ್ಕೆ ಮುತ್ತಿಗೆ ಹಾಕಬೇಕಾಗಿದೆ; ಆಗ ಇವರೆ ನಿಮಗೆ ಸರ್ವಾಧಿಕಾರಿ

ಎಂದು ಹೇಳಿ, ಬೊಕ್ಕಸದಿಂದ ದಿವ್ಯವಾದ ವಸ್ತ್ರಭೂಷಣಗಳನ್ನು ತರಿಸಿ, ರಾಕ್ಷಸನ ಮುಂದಿರಿಸಿ, 'ಪರಿಗ್ರಹಿಸಬೇಕು' ಎಂದು ಹೇಳಿದನು.

ರಾಕ್ಷಸನು—ಈಗ ನಮಗೆ ಆಭರಣವು ಯಾಕೆ? ಯಾವದು ಯಾಕೆ? ಎಲ್ಲದಕ್ಕೂ ಒಂದು ಸಮಯವಿದ್ದೀತು, ಆಗ ನೋಡಿಕೊಳ್ಳುವ ಎಂದನು.

ಆಗ ಉಲೂಕನೆಂಬ ಮಂತ್ರಿ—ಅಮಾತ್ಯರೆ! ಹಾಗೆ ಹೇಳಬಾರದು, ಅದು ಎಷ್ಟಕ್ಕೂ ಕೂಡದು, ನೀವು ಹೀಗೆಯೇ ಇದ್ದರೆ ನಮ್ಮ ರಾಜಪುತ್ರನ ಮನಸ್ಸಿಗೆ ಸಮಾಧಾನವಾಗಲಿಕ್ಕಿಲ್ಲ ಎಂದು, ತಾನೆ ಎದ್ದು ಬಂದು ಎಲ್ಲ ವನ್ನೂ ತೊಡಿಸಿದನು.

ರಾಕ್ಷಸನು—ಹೂಂ! ನಿಮ್ಮ ಬಳಿಗೆ ಬಂದ ಮೇಲೆ ನೀವು ಹೇಳಿ ದಂತೆ, ಆಗಲಿ, ಎಂದು ಸುಮ್ಮನಿದ್ದನು.

ಅನಂತರ ರಾಕ್ಷಸನು ಎದ್ದು ಬಂದು ಮಲಯಕೇತುವಿನ ಬಲಭಾಗ ದಲ್ಲಿರಿಸಿದ್ದ ರತ್ನಖಚಿತವಾದ ಆಸನದಲ್ಲಿ ಕುಳಿತು, ಉದ್ಯೋಗಸ್ಥರನ್ನೆಲ್ಲ ಕರೆದು, ಅವರವರನ್ನು ಯೋಗ್ಯತಾನುಸಾರವಾಗಿ ಮನ್ನಿಸಿ, ಹಿಂದಣ ಲೆಕ್ಕಪತ್ರಗಳನ್ನೆಲ್ಲ ನೋಡಿ, ಮುಂದೆ ಮಾಡಬೇಕಾದ ತಿದ್ದುಪಡಿಗಳನ್ನೆಲ್ಲ ಸೂಚಿಸಿ, ಸರ್ವವನ್ನೂ ಮೊದಲಿಗಿಂತ ನೂರು ಮಡಿ ಅಚ್ಚುಗಟ್ಟಾಗಿ ಮಾಡಿಸಿ, ಸಂಧ್ಯಾಕಾಲವಾದುದನ್ನು ನೋಡಿ, ಎಲ್ಲರನ್ನೂ ಕಳುಹಿಸಿ, ತಾನು ತನ್ನ ಬಿಡಾರಕ್ಕೆ ಹೋದನು.

## ೮. ರಾಕ್ಷಸನ ಯುದ್ಧಸನ್ನಾಹ.

ಚಾಣಕ್ಯನ ಅಪ್ಪಣೆಯಂತೆ ರಾಕ್ಷಸನನ್ನು ಗೊತ್ತುಹಿಡಿಯಲಿಕ್ಕೆಂದು ಹೊರಟ ಗೂಢಚಾರರಲ್ಲಿ ಒಬ್ಬನಾದ ಸಮಿದ್ಧಕನು, ಅಲ್ಲಿ ಇಲ್ಲಿ ಹುಡುಕಿ ಕಾಣದೆ ಕಡೆಗೆ ಪರ್ವತರಾಜ್ಯಕ್ಕೆ ಹೋಗಿ, ಅಮಾತ್ಯನ ವರ್ತಮಾನ ವನ್ನೂ, ಆವನ ಮುಂದಣ ಸಿದ್ಧತೆಯನ್ನೂ ತಿಳಿದು ಬಂದು, ಏಕಾಂತ ವಾಗಿ ಚಾಣಕ್ಯನಿಗೆ ತಿಳಿಸಿದನು. ಕೌಟಿಲ್ಯನು ಮನಸ್ಸಿನಲ್ಲಿ—ಹೂಂ! ಬರಲಿ; ಇವನ ಇಷ್ಟೆಲ್ಲ ತಂತ್ರಗಳು ಹೊಯಿಗೆಯಲ್ಲಿ ಬರೆದು ವಸ್ತ್ರದಲ್ಲಿ ಕಟ್ಟಿದಂತಾದುವು; ಇನ್ನು ನೋಡಿಕೊಂಡೇನು. ಇಲ್ಲಿಗೆ ಬರಲಿ; ಕಾಡಾನೆ ಯನ್ನು ದಾಪಿನಾನೆಯಿಂದ ಹಿಡಿಯಿಸಿ, ಪಟ್ಟದಾನೆಯನ್ನಾಗಿ ಮಾಡುವೆನು,

ಎಂದು ಯೋಚಿಸಿ, ಸಮಿದ್ಧಕನೊಡನೆ—ನೀನು ಆ ರಾಕ್ಷಸನಿಗೆ ತಿಳಿಯು ದಂತೆ ಅಲ್ಲಿಯೆ ಇದ್ದುಕೊಂಡು, ಅಲ್ಲಿ ನಡೆದ ವಿಶೇಷ ವರ್ತಮಾನಗಳನ್ನು ಇಲ್ಲಿಗೆ ತಿಳಿಸುತ್ತಿರು. ನಡೆ, ಎಂದು ಕಳುಹಿಸಿದನು.

ಆಗ ಇಬ್ಬರು ದೂತರು ಬಂದು ಕೈಮುಗಿದು—ಬುದ್ಧೀ! ಸೈನ್ಯ ವನ್ನೆಲ್ಲ ಲೆಕ್ಕಮಾಡಿ, ಇಂದಿನ ವರೆಗಣ ಸಂಬಳಗಳನ್ನೆಲ್ಲ ಕೊಟ್ಟಾಯಿತು; ಸೇನಾಪತಿಗಳು ಯಾರೂ ಬರಲಿಲ್ಲ, ಅವರ ಸಂಬಳದ ಹಣವನ್ನು ತೆಗೆ ದಿಟ್ಟಿದೆ, ಅಪ್ಪಣೆಯಾಗಬೇಕು ಎಂದು ಅರಿಕೆಮಾಡಿದರು.

ಚಾಣಕ್ಯನು ಕೋಪಿಸಿಕೊಂಡು—ಇಂದಿನ ವರೆಗೂ ಸೇನಾಪತಿ ಗಳು ಬರಲಿಲ್ಲಾ? ಇದುವರೆಗೂ ರಾಜದರ್ಶನವನ್ನು ಮಾಡಲಿಲ್ಲಾ? ಕರಣಿಕರಿಗೆ ಹೇಳಿರಿ; ಅವರ ಹೆಸರುಗಳನ್ನು ಪಟ್ಟಿಯಿಂದ ತೆಗೆದುಹಾಕಿ ಬಿಡಲಿ; ಈಗಲೆ ಹೋಗಿ ಆ ಸೇನಾನಾಯಕರಿಗೆ ಹೇಳಬೇಕು—ರಾಯರ ಅಪ್ಪಣೆಯಾಗಿದೆ. ಈ ಕ್ಷಣವೆ ನೀವು ದೇಶವನ್ನು ಬಿಟ್ಟು ಹೊರಟುಹೋಗ ಬೇಕು, ಇಲ್ಲದಿದ್ದರೆ ಜಾಗ್ರತೆ!' ಎಂದು, ಅವರನ್ನು ಕಳುಹಿಸಿ, ತನ್ನ ಕುಟೀರಕ್ಕೆ ಬಂದು ಸಿದ್ಧಾರ್ಥಕನನ್ನು ಕರೆದು ಕಿವಿಯಲ್ಲಿ ಏನೊ ಹೇಳಿ ಕಳುಹಿಸಿದನು. ಅವನು ರಾತ್ರಿ ಬಂದು ಭದ್ರಭಟಾದಿಗಳನ್ನು ನೋಡಿ, ಮಾತನಾಡಿ ಹಿಂದಿರುಗಿದನು.

ಸೇನಾಪತಿಗಳು ತಮ್ಮ ತಮ್ಮ ಮನೆಗಳಲ್ಲಿದ್ದರು; ಆಗ ರಾಜ ದೂತರು ಬಂದು—ಈಗಲೆ ನೀವೆಲ್ಲರೂ ಹೊರಟುಹೋಗಬೇಕು, ರಾಜಾಜ್ಞೆ ಯಾಗಿದೆ, ಇಲ್ಲದಿದ್ದರೆ ಜಾಗ್ರತೆ ಎಂದು ಸಾರಿಹೇಳಿದರು. ದೂತರ ಮಾತುಗಳನ್ನು ಕೇಳಿ ಸೇನಾನಾಯಕರೆಲ್ಲರೂ ಭಯಭೀತರಾಗಿ, ತಮ್ಮ ತಮ್ಮ ಸೈನಿಕರನ್ನೂ ಕರೆದುಕೊಂಡು ಹೊರಟು ನಡೆದರು.

ಹೀಗೆ ಅವರು ಹೊರಟು ಬಂದು ಪರ್ವತರಾಜ್ಯವನ್ನು ಸೇರಿ, ಬಾಗುರಾಯಣಶೇಖರರಿಗೆ ಕಾಣಿಸಿಕೊಂಡು, ತಮ್ಮ ಸ್ಥಿತಿಗತಿಗಳನ್ನೆಲ್ಲ ಅವರಿಗೆ ತಿಳಿಸಿ, ಅವರೊಡನೆ ಆಸ್ಥಾನಕ್ಕೆ ಬಂದು, ಕೈಗಾಣಿಕೆಗಳನ್ನು ನೀಡಿ, ಕೈಮುಗಿದು—'ರಾಜಾಧಿರಾಜರೆ! ನಾವು ನಂದಸೇನಾನಾಯಕರು: ಗೃಹಕೃತ್ಯದ ತೊಡಕಿನಿಂದಲಾಗಿ ತಕ್ಕ ಸಮಯಕ್ಕೆ ಹೋಗಿ ಚಂದ್ರಗುಪ್ತ ನನ್ನು ಕಾಣಿಸಿಕೊಳ್ಳಲಿಕ್ಕೆ ಆಗಲಿಲ್ಲ; ಇಷ್ಟಕ್ಕಾಗಿ ಆ ಕೆಟ್ಟ ಬ್ರಾಹ್ಮಣನ ದುರ್ಬೋಧನೆಯಿಂದ ನಮ್ಮನ್ನು ಊರಿನಿಂದಲೆ ಹೊರಡಿಸಿಬಿಟ್ಟನು' ಎಂದು

ತಮ್ಮ ಸುಖದುಃಖಗಳನ್ನೆಲ್ಲ ಆದ್ಯಂತವಾಗಿ ವಿವರಿಸಿ ಹೇಳಿ, 'ಸ್ವಾಮಿಾ! ನಮ್ಮ ಇಷ್ಟು ದೊಡ್ಡ ಈ ಪರಿವಾರವನ್ನು ರಾಜಾಶ್ರಯವಿಲ್ಲದೆ ಹೇಗೆ ಕಾಪಾಡಲಿ? ಏನಾದರೂ ಉದ್ಯೋಗವಿದ್ದರೆ ಇಲ್ಲಿ ಇರುತ್ತೇವೆ, ಇಲ್ಲದಿದ್ದರೆ ಬೇರೆ ದಾರಿ ನೋಡಬೇಕಾಯಿತು' ಎಂದರು.

ಅದಕ್ಕೆ ಅರಸನು ಬಾಗುರಾಯಣನ ಮೋರೆಯನ್ನು ನೋಡಿದನು. ಅವನು — 'ರಾಯನೆ! ಇವರು ಹೇಳಿಕೊಂಡುದೆಲ್ಲವೂ ಚಿತ್ತಕ್ಕೆ ಸಮಾಧಾನವಾಯಿತಷ್ಟೆ? ಎಂದು ನಾಲ್ಕು ದಿಕ್ಕನ್ನೂ ನೋಡಿದನು. ಎಲ್ಲರೂ ಎದ್ದು ಹೋದರು. ಆಗ — ಇವರು ಹೇಳಿದುದು ಸತ್ಯವಾಗಿದ್ದರೆ ಚಂದ್ರಗುಪ್ತನು ನಿನ್ನ ಸಂಚಿಯಲ್ಲಿ ಬಿದ್ದನೆಂದು ತಿಳಿ; ನಾವಾಗಿ ಭೇದೋಪಾಯದಿಂದ ಇವರಿಗೂ ಚಂದ್ರಗುಪ್ತನಿಗೂ ಮನಸ್ತಾಪವನ್ನು ಉಂಟುಮಾಡಿ, ಅಷ್ಟೆಲ್ಲ ಪ್ರಯಾಸಪಟ್ಟು ಆಕಾಶಕ್ಕೆ ಏಣಿಗಟ್ಟಿ, ಒಡಂಬಡಿಸಿ, ಇವರನ್ನು ಬರಿಸುವುದಕ್ಕಿಂತ, ಇವರು ತಾವಾಗಿಯೇ ಬಂದುದು ಇದೊಂದು ನಿನ್ನ ಪುಣ್ಯವು. ಇವರು ಸಾಮಾನ್ಯರಲ್ಲ, ಎಂದು ಹೇಳುತ್ತಿರುವಾಗ ಮಲಯಕೇತು ಪೆಟ್ಟಿಗೆಯಿಂದೊಂದು ಕಾಗದವನ್ನು ತೆಗೆದು ಕೊಟ್ಟು, 'ಇದಕ್ಕೆ ಏನು ಹೇಳುವೆ?' ಎಂದು ಕೇಳಿದನು.

ಬಾಗುರಾಯಣನು ಅದನ್ನು ನೋಡಿ — ಇದು ಅಷ್ಟಸೇನಾನಾಯಕರಾದ ನಮ್ಮೆಲ್ಲರ ಸ್ವಹಸ್ತಾಕ್ಷರ ಸಮ್ಮತಿಗಳೇನೊ ಹೌದು; ಆದರೆ ಇದರಲ್ಲಿ ಮೊದಲಿನ ಭಾಗವನ್ನು ಮಾತ್ರ ಕತ್ತರಿಸಿ ತೆಗೆದುಬಿಟ್ಟಿದ್ದಾರೆ; ಚಂದ್ರಗುಪ್ತನ ಅಭಿಪ್ರಾಯವೆ ನಮ್ಮ ಅಭಿಪ್ರಾಯವು, ಎಂಬುದನ್ನೂ ಅದರ ಕೆಳಗಿರುವ ನಮ್ಮೆಲ್ಲರ ಸಮ್ಮತಿಗಳನ್ನೂ ಮಾತ್ರ ಇಟ್ಟುಕೊಂಡಿದ್ದಾರೆ ಎಂದು ಪೂರ್ವದಲ್ಲಿ ಚಂದ್ರಗುಪ್ತನು ಕೇಶವದಾಸನಿಗೆ ಬರೆದ ಪತ್ರದ ವರ್ತಮಾನವನ್ನು ಹೇಳಿ, ಅವನನ್ನು ಸಮಾಧಾನಪಡಿಸಿದನು.

ಆಗ ಮಲಯಕೇತು — ಆಯಿತು, ಹಾಗಾದರೆ ಇವರೆಲ್ಲ ನಮ್ಮಲ್ಲಿರಲಿ; ಇವರ ಸೇನೆಗೆ ಸಂಬಳವನ್ನೆಲ್ಲ ನೀನೆ ನೇಮಿಸು ಎಂದನು. ಬಾಗುರಾಯಣನು ಅಪ್ಪಣೆಯಂತೆಯೆ ಸೇನಾಪತಿಗಳನ್ನು ಕರೆಯಿಸಿ, ಅವರವರಿಗೆ ಉಚಿತವಾದ ಸಂಬಳಗಳನ್ನು ನಿಯಮಿಸುತ್ತಿದ್ದನು.

ಇಷ್ಟಾಗುವಾಗ ಅಮಾತ್ಯನು ಬಂದನು; ಭದ್ರಭಟಾದಿಗಳನ್ನು ನೋಡಿದನು; ಮನಸ್ಸಿನಲ್ಲಿ — ಏನಿದು? ಮೊದಲು ಪಾಟಲೀಪುರದಲ್ಲಿರು

ವಾಗ ನಾನು ಇವರಿಗೆಲ್ಲ ಯಜಮಾನನು; ಈಗ ಇಲ್ಲಿ ಸರ್ವಾಧಿಕಾರಿ; ಹೀಗಿದ್ದೂ ಇವರು ಮೊದಲು ನನ್ನನ್ನು ಕಾಣದೆ, ಬಾಗುರಾಯಣನ ಮುಖದಿಂದಲೆ ಅರಸನನ್ನು ಕಂಡು, ಇಲ್ಲಿಯೂ ಸೇನಾಪತಿಗಳಾಗುವುದಕ್ಕೆ ಪ್ರಯತ್ನಮಾಡುತ್ತಾರೆ? ಇದರಲ್ಲಿ ಏನಾದರೂ ಒಳಸಂಚು ಇರಲಿಕ್ಕೂ ಸಾಕು; ಆದರೆ ಈಗ ಬಂದರವನ್ನು ಬಿಡುವುದು ಸರಿಯಲ್ಲ; ಬಿಟ್ಟರೆ ಅನ್ಯ ರಾಜರನ್ನು ಆಶ್ರೈಸಿ, ಸಮಯಾಂತರದಲ್ಲಿ ನಮಗೆಯೆ ಎದುರು ನಿಲ್ಲಲಿಕ್ಕೂ ಸಾಕು; ಇಲ್ಲವೆ ಪುನಃ ಹಿಂದೆ ಹೋಗಿ ಪಾಟಲೀಪುರವನ್ನೆ ಸೇರಿ, ಚಂದ್ರ ಗುಪ್ತನನ್ನೆ ಆಶ್ರೈಸಲೂ ಬಹುದು; ಆದುದರಿಂದ ಬಂದವರನ್ನು ಇಲ್ಲಿಯೆ ನಿಲ್ಲಿಸಿಕೊಳ್ಳಬೇಕು; ಹೆಚ್ಚಿನ ಸ್ವಾತಂತ್ರ್ಯಗಳನ್ನು ಮಾತ್ರ ಕೊಡದಿದ್ದರೆ ಸರಿ ಎಂದು ಯೋಚಿಸಿಕೊಂಡಿದ್ದನು.

ಆಗ ಮಲಯಕೇತು ಅಮಾತ್ಯನನ್ನು ನೋಡಿ—ಅಮಾತ್ಯರೆ! ಇವರು ನಿಮಗೆ ಗೊತ್ತಿದೆಯಷ್ಟೆ! ಈಗ ನಮ್ಮ ಆಶ್ರಯಕ್ಕೆ ಬಂದಿದ್ದಾರೆ; ಬೇಕಾದ ಏರ್ಪಾಡುಗಳನ್ನೆಲ್ಲ ನೀವೆ ಮಾಡಿಸಿರಿ ಎಂದು ಹೇಳಿದನು. ಅಮಾತ್ಯನು—ಸರಿ, ಒಳ್ಳೆಯದು, ಆಗಲಿ, ಎಂದು ಭದ್ರಭಟಾದಿಗಳೊಡನೆ 'ಯಾವಾಗ ಬಂದಿರಿ? ಸೌಖ್ಯವೆ? ಮನೆ ಮಂದಿಯೆಲ್ಲ ಸುಖವಾಗಿದ್ದಾರೆಯೆ?' ಎಂದು ಮೊದಲಾಗಿ, ಯೋಗಕ್ಷೇಮಗಳನ್ನು ವಿಚಾರಿಸಿ, 'ನಾಳೆ ಕಾಣುವ' ಎಂದು ಹೊರಟು ತನ್ನ ಬಿಡಾರಕ್ಕೆ ಬಂದನು.

ಮರುದಿನ ಭದ್ರಭಟಾದಿಗಳನ್ನು ತನ್ನ ಬಿಡಾರಕ್ಕೆ ಕರೆಯಿಸಿ ಅಮಾತ್ಯನು—ನಮಗೆ ರಾಜಕಾರ್ಯಕ್ಕಾಗಿ ಪಾಟಲೀಪುರಕ್ಕೆ ದಂಡೆತ್ತಿಕೊಂಡು ಹೋಗಬೇಕಾಗಿದೆ; ಆದುದರಿಂದ ಸೇನೆಗಳೆಲ್ಲವೂ ಸಿದ್ಧವಾಗಿರಲಿ; ಎಂದು ಹೇಳಿ, ಒಬ್ಬನಿಗೆ ಯುದ್ಧನಾವೆಗಳನ್ನು ಕಾಯುವ ಕೆಲಸವನ್ನೂ, ಇನ್ನೊಬ್ಬನಿಗೆ ಅನ್ನೋದಕಗಳನ್ನು ಸಿದ್ಧಪಡಿಸುವ ಊಳಿಗವನ್ನೂ, ಮತ್ತೊಬ್ಬನಿಗೆ ದಾರಿಗಳನ್ನು ಸರಿಮಾಡಿಸುವ ಉದ್ಯೋಗವನ್ನೂ, ಹೀಗೆ ಪ್ರತಿಯೊಬ್ಬರಿಗೂ ಸಾಮಾನ್ಯವಾದ ಕಾರ್ಯಗಳನ್ನೆ ನೇಮಿಸಿದನು. ಸೇನಾಪತಿಗಳ ಮನಸ್ಸಿಗಿದು ಸಮ್ಮತವಾಗದಿದ್ದರೂ ಒಪ್ಪಿಕೊಂಡು ಹಾಗೆಯೆ ಆಗಲಿ ಎಂದು ಹೊರಟುಹೋದರು.

ಈ ರೀತಿಯ ರಾಕ್ಷಸನ ಕೃತ್ಯಗಳನ್ನು ಸಮಿದ್ಧಕನ ಮುಖದಿಂದ ತಿಳಿದು ಚಾಣಕ್ಯನು, ರಾಕ್ಷಸನ ಬುದ್ಧಿಗೆ ಮೆಚ್ಚಿ, ಸಂತೋಷಪಟ್ಟು,

ಮನಸ್ಸಿನಲ್ಲಿ—ಲೋಕದಲ್ಲಿ ಸ್ವಾಮಿಭಕ್ತಿಯಲ್ಲಿಯೂ, ಬುದ್ಧಿಕೌಶಲ್ಯದಲ್ಲಿಯೂ, ಕಾರ್ಯದಕ್ಷತೆಯಲ್ಲಿಯೂ, ಸತ್ಯಸಂದತೆಯಲ್ಲಿಯೂ, ಧೀರತ್ವದಲ್ಲಿಯೂ ಒಬ್ಬರಿಂದೊಬ್ಬರು ಮೇಲಾದವರು ಅನೇಕರಿರುವರು; ಆದರೆ ತನ್ನ ಒಡೆಯರು ಸಮೂಲವಾಗಿ ನಾಶಹೊಂದಿದರೂ, ಇನ್ನೂ ತನ್ನ ಸ್ವಾಮಿಭಕ್ತಿಯನ್ನು ಬಿಡದೆ, ಭೋಗಾಸಕ್ತಿಯನ್ನು ಬಿಟ್ಟು ಸ್ವಾಮಿದ್ರೋಹಿಯನ್ನು ನಾಶಮಾಡಬೇಕೆಂದು ಸಾಹಸಮಾಡುತ್ತಾನೆ; ಆಃ! ಇವನೀಗ ನಿಜವಾದ ಮಂತ್ರಿ; ಚಂದ್ರಗುಪ್ತನಿಗೆ ರಾಜ್ಯವು ಸ್ಥಿರವಾಗಬೇಕಾದರೂ ಇವನೆ ಮಂತ್ರಿಯಾಗಬೇಕು ಎಂದು ಯೋಚಿಸುತ್ತಿದ್ದನು.

## ೯. ಮುದ್ರಿಕಾ ತಸ್ಕರಣ.

ಚಾಣಕ್ಯನು ತನ್ನ ಕುಟೀರದಲ್ಲಿ ಆಲೋಚಿಸುತ್ತ ಕುಳಿತಿದ್ದನು; ಆಗ ಒಬ್ಬನು ಬಂದು ಬಾಗಿಲಲ್ಲಿ ನಿಂದಿರುವ ಶಿಷ್ಯನನ್ನು ನೋಡಿ—ಅಯ್ಯಾ! ಬ್ರಹ್ಮಲೋಕದಲ್ಲಿರುವ ಮರಾಳ ಪಕ್ಷಿಯ ಭಾವಚಿತ್ರವು ನನ್ನಲ್ಲಿದೆ; ಇದನ್ನು ನೋಡಿ ಇದರ ಅಭಿಪ್ರಾಯವನ್ನು ಹೇಳುವವರು ಇಲ್ಲಿ ಯಾರಾದರೂ ಇದ್ದಾರೆಯೆ? ಎಂದು ಕೇಳಿದನು. ಅದಕ್ಕೆ ಶಿಷ್ಯನು "ನಿಲ್ಲು" ಎಂದು ಒಳಗೆ ಹೋಗಿ ಚಾಣಕ್ಯನಿಗೆ ತಿಳಿಸಿದನು. ಅವನು ಒಳಗೆ ಬರಲಿ ಎಂದನು. ಹಾಗೆಯೆ ಶಿಷ್ಯನು ಹೊರಗೆ ಬಂದು ಅವನನ್ನು ಒಳಗೆ ಹೊಗಿಸಿದನು.

ಚಾಣಕ್ಯ—ಏನಯ್ಯಾ, ಮರಾಳನೆ? ಇಷ್ಟು ದಿನ ಎಲ್ಲಿದ್ದೆ? ಏನು ಮಾಡುತಿದ್ದೆ?

ಮರಾಳ—ಸ್ವಾಮಿಾ! ತಾವು ಹೇಳಿದಂತೆಯೆ ಮಾಡುತಿದ್ದೆನು; ಈ ಪಟ್ಟಣದಲ್ಲಿ ಮೂವರು ಹೊರತು ಉಳಿದವರೆಲ್ಲರೂ ಚಂದ್ರಗುಪ್ತನಲ್ಲಿ ವಿಶ್ವಾಸವುಳ್ಳವರೆ.

ಚಾಣಕ್ಯ—ಆ ಮೂವರು ಯಾರು?

ಮರಾಳ—ಜೀವಸಿದ್ಧಿಯೊಬ್ಬನು, ಶಕಟದಾಸನು ಇನ್ನೊಬ್ಬನು, ಚಂದನದಾಸನು ಮತ್ತೊಬ್ಬನು. ಆ ಚಂದನದಾಸನಲ್ಲಿ ರಾಕ್ಷಸನ ಹೆಂಡತಿ ಮಕ್ಕಳು ಇರುವಂತೆ ತೋರುತ್ತದೆ.

ಚಾಣಕ್ಯ—ಅದು ಹೇಗೆ?

ಮರಾಳ—ನಾನು ತಂಬೂರಿಯನ್ನು ಹಿಡಿದುಕೊಂಡು ಮನೆ ಮನೆಗಳಿಗೆ ಹೋಗಿ ಪದ್ಯಗಳನ್ನು ಹೇಳುತ್ತಲೂ, ಈ ಚಿತ್ರಪಟಗಳನ್ನು ತೋರಿಸುತ್ತಲೂ, ಕಡೆಗೆ ಚಂದನದಾಸನ ಮನೆಗೆ ಹೋದೆನು. ಅಲ್ಲಿಯೂ ಪದ್ಯಗಳನ್ನು ಹೇಳಿ, ಪಟಗಳನ್ನು ತೋರಿಸುತ್ತಿರುವಾಗ ಸಾಧಾರಣ ಐದು ವರ್ಷ ಪ್ರಾಯದ ಒಂದು ಮಗು—ನೋಡುವಾಗ ಅಮಾತ್ಯರಾಕ್ಷಸನನ್ನು ಸುಲಿದು ತಂದಂತೆ ಇದೆ—ಒಳಗಿನಿಂದ ಓಡಿ ಬಂದು, ಕೈಚಪ್ಪಾಳೆ ಹೊಡೆದುಕೊಂಡು ತಕತಕನೆ ಕುಣಿಯುತಿತ್ತು; ನಾನು ಮಗುವನ್ನೆ ನೋಡುತಿದ್ದೆನು. ಆಗ ಗರ್ಭಿಣಿಯೊಬ್ಬಳು ಒಳಗಿನಿಂದ ಬೇಗ ಬೇಗನೆ ಬಂದು ಮಗುವನ್ನು ಎತ್ತಿಕೊಂಡು ಹೋದಳು; ಅವಳ ಬೆರಳಿನಲ್ಲೊಂದು ಉಂಗುರವಿತ್ತು; ಅದು ಅವಳ ಬೆರಳಿಗೆ ಸರಿಯಾಗುವುದಿಲ್ಲ; ಅದರಲ್ಲೇನೊ ಅಕ್ಷರಗಳೂ ಇದ್ದುವು.

ಚಾಣಕ್ಯ—ಸರಿ, ಗೊತ್ತಾಯಿತು; ಆ ಮೂವರಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಸುತ್ತೇನೆ; ನೀನು ನಿನ್ನ ಕೆಲಸದಲ್ಲಿಯೆ ಇರು; ಎಂದು ಅವನನ್ನು ಕಳುಹಿಸಿದನು. ಬಳಿಕ ಸಿದ್ಧಾರ್ಥಕನನ್ನು ಕರೆದು ಕಿವಿಯಲ್ಲಿ ಹೀಗೆ ಹೀಗೆಂದು ಹೇಳಿಕಳುಹಿದನು. ಅವನು ಹೊರಟು ಹೋಗಿ ಅತಿಧೂರ್ತೆಯಾದೊಬ್ಬಳು ಸೂಲಗಿತ್ತಿಯನ್ನು ಕರೆದು, ಅವಳ ಕೈಯಲ್ಲಿ ಒಂದು ಉಂಗುರವನ್ನು ಕೊಟ್ಟು, ಏನೊ ಹೇಳಿ ಅವಳನ್ನು ಕಳುಹಿಸಿ, ಪುರದ ತಳವಾರನನ್ನು ಕರೆದು, ಅವನೊಡನೆಯೂ ಏನೇನೊ ಮಾತನಾಡಿಕೊಂಡಿದ್ದು, ಕಡೆಗೆ ಅವನನ್ನೂ ಕಳುಹಿಸಿ, ತಾನು ತನ್ನಷ್ಟಕ್ಕೆ ಹೋದನು.

ಮರುದಿನ ಮಧ್ಯಾಹ್ನದ ಮೇಲೆ ಚಂದ್ರಗುಪ್ತ ಚಾಣಕ್ಯರು ಆ ಸ್ಥಾನದಲ್ಲಿ ಕುಳಿತುಕೊಂಡಿದ್ದರು; ಅಲ್ಲಿಗೆ ತಳವಾರನೊಬ್ಬನು ಬಂದು ಕೈಮುಗಿದು—ಬುದ್ಧೀ! ಇಂದು ಒಬ್ಬಳು ಹಾರುವಿತಿಯು ಹೆರಿಗೆಯ ವೇಳೆಯಲ್ಲಿ ಅಲ್ಲಿದ್ದ ಸೂಲಗಿತ್ತಿ ಏನೊ ಹೊಟ್ಟೆಗಿಚ್ಚಿನಿಂದ ಹಿಳ್ಳೆಯನ್ನು ಕೊಂದು ಹಾಕಿ, ತಲೆತಪ್ಪಿಸಿಕೊಂಡು ಓಡಿಹೋದಳಂತೆ, ಎಂದನು.

ಆಗ ಚಾಣಕ್ಯನು—ಇದಕ್ಕೆ ಮೊದಲು ಹೀಗೆ ಎಷ್ಟು ನಡೆದಿದೆಯೊ ಏನೊ! ಒಳ್ಳೆಯದು! ಈ ಊರಿನಲ್ಲಿರುವ ಮಂತ್ರಸಾನಿಯರನ್ನೆಲ್ಲ ಹಿಡಿದು, ವಿಚಾರಿಸಿ, ತಕ್ಕದಂಡನೆಯನ್ನು ಮಾಡಿ, ಮುಂದೆ ಇಂತಹ ದುಷ್ಕೃತ್ಯವು ನಡೆಯದಂತೆ ಮಾಡು ಎಂದನು.

ತಳವಾರನು ಅಪ್ಪಣೆ, ಎಂದು ಹೊರಟು, ಬೀದಿಬೀದಿಗಳಲ್ಲಿ, ಕೇರಿ ಕೇರಿಗಳಲ್ಲಿ ಹುಡುಕಿಹುಡುಕಿ, ಕಂಡಕಂಡ ಸೂಲಗಿತ್ತಿಯರನ್ನು ಹಿಡಿದು ಕೊಂಡು ಹೋಗುತಿದ್ದನು. ಆ ವೇಳೆಯಲೊಬ್ಬಳು ಓಡಿಹೋಗಿ, ಚಂದನದಾಸನ ಮನೆಯನ್ನು ಹೊಕ್ಕು, ಬಾಗಿಲೆಡೆಯಲ್ಲಿ ಅಮರಿ ನಿಂತು ಕೊಂಡಳು. ಆಕೆಯನ್ನು ನೋಡಿ ಮನೆಯವರು—ನೀನು ಯಾರು? ಯಾಕೆ ಬಂದೆ? ಎಂದು ಕೇಳಿದರು. ಅವಳು ಎಲ್ಲರ ಕಾಲುಗಳನ್ನು ಹಿಡಿದು ಕೊಂಡು—ಅಮ್ಮಾ! ಅರಮನೆಯವರು ಈ ಊರ ಸೂಲಗಿತ್ತಿಯರನ್ನೆಲ್ಲ ಹಿಡಿದು, ಎಲ್ಲಿಗೊ ಪರದೇಶಕ್ಕೆ ಕಳುಹಿಸುತ್ತಾರಂತೆ! ನಾನು ನಿಮ್ಮ ಹಾಗೆಯೆ ನಾಲ್ಕು ಮಕ್ಕಳುಮರಿಗಳುಳ್ಳವಳು; ಈ ಗೌಜಿ ನಿಲ್ಲುವ ವರೆಗೆ ನಾಲ್ಕು ದಿನ ಎಲ್ಲಿಯಾದರೂ ಕಣ್ಮರೆಯಾಗಿ ನಿಲ್ಲಬೇಕಾಗಿದೆ ಎಂದು ಕೈ ಜೋಡಿಸಿ ಬೇಡಿಕೊಂಡಳು. ಆಗ ಚಂದನದಾಸನ ಹೆಂಡತಿ—ನಮ್ಮ ಅಮಾತ್ಯರ ಹೆಂಡತಿಗೆ ತಿಂಗಳು ತುಂಬಿತು, ಸಮಯಕ್ಕೆ ಬೇಕಾಗುವಾಗ ಸೂಲಗಿತ್ತಿಯರು ಸಿಕ್ಕುತ್ತಾರೆಯೊ, ಇಲ್ಲವೊ? ಆದುದರಿಂದ ಇವಳು ಇಲ್ಲಿಯೇ ಇರಲಿ, ಎಂದು ಯೋಚಿಸಿ—ಆಯಿತು, ನೀನು ಇಲ್ಲಿಯೆ ಇರು ಎಂದಳು. ಅವಳು—ಅಮ್ಮಾ! ಬದುಕಿದೆನು; ನಿಮಗೆ ಪುಣ್ಯಸಿಕ್ಕೀತು; ಎಂದುಕೊಂಡು ಅಲ್ಲಿಯೆ ಹೊರಗಣ ಕೆಲಸಗಳನ್ನು ಮಾಡಿಕೊಂಡು ಇದ್ದಳು. ಮತ್ತೊಂದು ದಿನ ರಾಕ್ಷಸನ ಹೆಂಡತಿಗೆ ಬೇನೆಬರುವ ಲಕ್ಷಣ ಗಳು ತೋರಿ ಬಂದುವು; ಆಗ ಆ ಸೂಲಗಿತ್ತಿಯನ್ನು ಕರೆದು ಹೆರಿಗೆಯ ಮನೆಗೆ ಕಳುಹಿಸಿದರು. ಅವಳು ಎಲ್ಲರಿಗಿಂತಲೂ ಪ್ರೌಢೆ; ಬಸಿರಿಯನ್ನು ಬೇಕು ಬೇಕಾದಂತೆ ಅಕ್ಕರು ಹೇಳಿ ಸಂತೈಸಿದಳು; ರಾಕ್ಷಸ ಭಾರ್ಯೆ ಹೆಮ್ಮಕ್ಕಳ ಕಟ್ಟಳೆಯಂತೆ, ಮೈಮೇಲಣ ಚಿನ್ನ ಚಿಗುರುಗಳನ್ನೆಲ್ಲ ತೆಗೆದು ಅವಳ ಕೈಗೆ ಕೊಟ್ಟು, ಉಟ್ಟ ಸೀರೆಯನ್ನು ಬಿಚ್ಚಿ, ಮತ್ತೊಂದು ತುಂಡ ನ್ನುಟ್ಟು, ಬೇನೆಗೆ ನರಳುತ್ತ, ಮಗುವನ್ನು ಹೆರುತ್ತಿದ್ದಳು. ಸೂಲಗಿತ್ತಿ ತನ್ನ ಕೈಯಲ್ಲಿರುವ ಕೃತ್ರಿಮವಾದ ಮುದ್ರೆಯುಂಗುರವನ್ನು ಅಲ್ಲಿಟ್ಟು, ರಾಕ್ಷಸನ ಉಂಗುರವನ್ನು ತೆಗೆದು ಮೆಲ್ಲನೆ ಸೊಂಟದಲ್ಲಿ ಕುತ್ತಿ, ಕೆಲಸವೆಲ್ಲ ಮುಗಿದ ಮೇಲೆ, ಆಭರಣಗಳನ್ನೆಲ್ಲ ಒಪ್ಪಿಸಿ ಲೆಕ್ಕಕೊಟ್ಟು, ತನ್ನ ಸಂಬಳ ವನ್ನೂ ತೆಗೆದುಕೊಂಡು ಹೊರಟು ಬಂದು ಆ ಉಂಗುರವನ್ನು ಸಿದ್ಧಾರ್ಥಕನ ಕೈಗೆ ಕೊಟ್ಟಳು. ಅವನು ಅದನ್ನು ತಂದು ಚಾಣಕ್ಯನಿಗೆ ಒಪ್ಪಿಸಿದನು.

ಚಾಣಕ್ಯನು ಉಂಗುರವನ್ನು ತೆಗೆದುಕೊಂಡು ಹೀಗೆ ಆಲೋಚಿಸಿ, ಸಿದ್ಧಾರ್ಥಕನನ್ನು ಕುಳ್ಳಿರಿಸಿಕೊಂಡು—"ಮಿತ್ರನೆ! ಈ ಕಾಗದದಲ್ಲಿರುವುದು ವೈದಿಕ ಲಿಪಿ, ಹೊರೆದು ಕಾಣುವುದಿಲ್ಲ; ಆದುದರಿಂದ ನಿನ್ನ ಸ್ನೇಹಿತ ನಾದ ಶಕಟದಾಸನಲ್ಲಿಗೆ ಹೋಗಿ, ಸ್ಫುಟವಾದ ಅಕ್ಷರಗಳಿಂದ ಒಂದು ಪ್ರತಿಯನ್ನು ಮಾಡಿಸಿಕೊಂಡು ಬಾ" ಎಂದು ಅವನ ಕೈಯಲ್ಲಿ ಕಾಗದವನ್ನು ಕೊಟ್ಟನು. ಅವನು ಆ ಕಾಗದವನ್ನು ನೋಡಿ—ಇದರಲ್ಲಿ ಏನೊ ಒಂದು ಇರಬೇಕು, ಎಂದು ಯೋಚಿಸಿಕೊಂಡು, ಶಕಟದಾಸನ ಮನೆಗೆ ಬಂದು ಕಾಗದವನ್ನು ಕೊಟ್ಟು—"ದಾಸರೆ! ಇದರಲ್ಲಿ ಒಂದು ವಿಶೇಷವಿದೆಯಂತೆ, ಇದು ಪ್ರಾಕೃತದಲ್ಲಿ ಬರೆಯಲ್ಪಟ್ಟಿದೆ; ಇದರ ಅಕ್ಷರಗಳನ್ನು ವ್ಯತ್ಯಾಸ ಮಾಡಿದರೆ ಸಂಸ್ಕೃತ ಶ್ಲೋಕವಾಗುವುದಂತೆ; ಹಿಂದೆ ಮುಂದೆ ಮಾಡಿ ಓದಿದರೆ, ಚಿತ್ರಬಂಧವಾಗುವುದಂತೆ; ಹೀಗೆ ಒಬ್ಬ ಕವಿ ಹೇಳಿ ಪ್ರತಿ ಮಾಡಿಸಿ ಕೊಡಬೇಕೆಂದು ನನ್ನ ಕೈಗೆ ಕೊಟ್ಟನು; ನನಗಿದು ಏನೆಂದೂ ತಿಳಿಯುವುದಿಲ್ಲ; ಒಂದು ಪ್ರತಿ ಮಾಡಿ ಕೊಟ್ಟು ಬಿಡಿರಿ" ಎಂದು ಹೇಳಿದನು. ಶಕಟದಾಸನು ಬರೆದು ಕೊಟ್ಟನು. ಸಿದ್ಧಾರ್ಥಕನು ಅದನ್ನು ತೆಗೆದು ಕೊಂಡು ಬಂದು ಚಾಣಕ್ಯನಿಗೆ ಒಪ್ಪಿಸಿದನು.

ಚಾಣಕ್ಯನು ಅದನ್ನು ತೆಗೆದುಕೊಂಡು ಒಳಗೆ ಹೋಗಿ, ರಾಕ್ಷಸನ ಮುದ್ರೆಯುಂಗುರದಿಂದ ಅದಕ್ಕೆ ಮುದ್ರೆಮಾಡಿ, ಸಿದ್ಧಾರ್ಥಕನನ್ನು ನೋಡಿ—"ನಿನ್ನಿಂದ ನಮಗೆ ಅನೇಕ ಕೆಲಸಗಳಾದುವು; ಇನ್ನೂ ಆಗ ಲಿಕ್ಕಿದೆ" ಎಂದು ಕಿವಿಯಲ್ಲಿ ಹೇಳಬೇಕಾದುದನ್ನು ಹೇಳಿ, ಆ ಕಾಗದವನ್ನು ಕೊಟ್ಟು ಕಳುಹಿಸಿದನು.

## ೧೦. ದಾಸನ ವಿಚಾರಣೆ

ಅನಂತರ ಚಾಣಕ್ಯನು ತನ್ನ ಕುಟೀರದ ಹೊರಜಗುಲಿಯ ಮೇಲೆ ಕುಳಿತು ಗಡ್ಡಕ್ಕೆ ಕೈಹಿಡಿದು, ಮೇಲೆ ನೋಡಿಕೊಂಡು ಆಲೋಚಿಸುತ್ತಿದ್ದನು. ಆಗ ಅಲ್ಲಿಗೆ ಒಬ್ಬ ಕಂಚುಕಿ ಬಂದು ಕೈಮುಗಿದು—"ಬುದ್ಧೀ! ಪರ್ವ ತೇಶ್ವರನ ಆಭರಣಗಳನ್ನು ಏನು ಮಾಡಬೇಕು? ಕೇಳಿ ಬಾ, ಎಂದು ರಾಯರು ಕಳುಹಿಸಿದರು" ಎಂದನು.

ಚಾಣಕ್ಯನು ಹೀಗೆ ನೋಡಿ—'ನಾನು ಉತ್ತಮರಾದ ಬ್ರಾಹ್ಮಣ

ರನ್ನು ಕಳುಹಿಸುತ್ತೇನೆ, ಅವರಿಗೆ ಕೊಡಲಿ' ಎಂದು ವಿಶ್ವಾವಸು ಮೊದಲಾದ ಮೂರು ಮಂದಿ ಬ್ರಾಹ್ಮಣರನ್ನು ಕರೆದು—'ನೀವೀಗ ಇವನ ಒಟ್ಟಿಗೆ ಅರಮನೆಗೆ ಹೋಗಿರಿ; ಅರಸನು ನಿಮಗೆ ಆಭರಣ ದಾನಗಳನ್ನು ಕೊಡುವನು; ಅವುಗಳನ್ನು ಧರಿಸಿಕೊಂಡು ಬಂದು ನನ್ನನ್ನು ನೋಡಿ ಹೋಗಿರಿ' ಎಂದು ಹೇಳಿ, ಕಂಚುಕಿಯನ್ನು ನೋಡಿ—'ನಾವು ಹೇಳಿದೆವೆಂದು ಹೇಳು' ಇನ್ನು ಮುಂದೆ ನಿಮ್ಮ ಅರಸನು ಪ್ರತಿಯೊಂದಕ್ಕೂ ನಮ್ಮನ್ನು ಕೇಳುವ ಅಗತ್ಯವಿಲ್ಲ; ಯಾವಾಗಲೂ ಹೀಗೆಯೇ ಮಾಡಿದರೆ, ಅವನು ಮುಂದೆ ಸ್ವತಃ ರಾಜ್ಯಭಾರವನ್ನು ಮಾಡಲಿಕ್ಕುಂಟೊ? ಸ್ವಲ್ಪ ಅವನ ತಲೆಯ ಮೇಲೆ ಭಾರವು ಬೀಳಬೇಕು; ಪರದೇಶ ವಿಚಾರಗಳೇನಾದರೂ ಇದ್ದರೆ ಮಾತ್ರ ನಮಗೆ ತಿಳಿಸಲಿ' ಎಂದು ಹೇಳಿ ಕಳುಹಿಸಿದನು. ಕಂಚುಕಿ, 'ಅಪ್ಪಣೆ' ಎಂದು ಆ ಬ್ರಾಹ್ಮಣರೊಡನೆ ಬಂದು, ಚಾಣಕ್ಯನ ಅಪ್ಪಣೆಯನ್ನು ವಿವರವಾಗಿ ತಿಳಿಸಿದನು.

ಚಂದ್ರಗುಪ್ತನು ಕಂಚುಕಿಯ ಮಾತನ್ನು ಕೇಳಿ, ಬಂದ ಬ್ರಾಹ್ಮಣರಿಗೆ ದಾನವನ್ನು ಕೊಟ್ಟು ಕಳುಹಿಸಿ, "ಇದರಲ್ಲಿ ಏನೊ ಇದೆ" ಎಂದು ನೆನಸಿಕೊಂಡು, ಅಂದಿನಿಂದ ಪರಾಪೇಕ್ಷೆಯಿಲ್ಲದೆ ಸ್ವರಾಜ್ಯ ವಿಚಾರವನ್ನು ತಾನೆ ಮಾಡುತಿದ್ದನು.

ಬ್ರಾಹ್ಮಣರು ದಾನವನ್ನು ತೆಗೆದುಕೊಂಡು ಅಲಂಕೃತರಾಗಿ ಚಾಣಕ್ಯನ ಬಳಿಗೆ ಬಂದರು. ಅವರನ್ನು ನೋಡಿ ಚಾಣಕ್ಯನು ಗುಟ್ಟಾಗಿ ಏನೊ ಹೇಳಿ ಕಳುಹಿಸಿ, ಶಿಷ್ಯನನ್ನು ಕರೆದು—'ಆ ಜೀವಸಿದ್ಧಿಯೇ ವಿಷಕನ್ಯೆಯ ಮುಖದಿಂದ ನಮ್ಮ ಪರ್ವತರಾಯನ ಜೀವವನ್ನು ತೆಗೆದವನು; ಆದಕಾರಣ ತಳವಾರರಿಗೆ ಪಟ್ಟಣದಲ್ಲೆಲ್ಲ ಸಾರಿ, ಅವನನ್ನು ಗಡಿಪಾರು ಮಾಡುವಂತೆ ನಾವು ಹೇಳಿದೆವೆಂದು ಹೇಳು' ಎಂದು ಕಳುಹಿಸಿದನು. ಅವನು ಹೋಗಿ ತಳವಾರರೊಡನೆ ಹೇಳಿ ಬಂದನು.

ಬಳಿಕ ಇನ್ನೊಬ್ಬ ಶಿಷ್ಯನನ್ನು ನೋಡಿ—"ಪಶುಲೋಮ! ಈಗಲೆ ಹೋಗಿ ಆ ಬಳೆಗಾರ ಸೆಟ್ಟಿ ಚಂದನದಾಸನನ್ನು ಕರೆದುಕೊಂಡು ಬಾ" ಎಂದನು.

ಪಶುಲೋಮನು ಹೋಗಿ ಗುರುವಿನ ಅಪ್ಪಣೆಯನ್ನು ಆ ಸೆಟ್ಟಿಗೆ ತಿಳಿಸಿದನು. ಅವನು ಮನಸ್ಸಿನಲ್ಲಿ—'ಆಃ! ಚಾಣಕ್ಯನನ್ನು ನೋಡಿದರೆ ನಿರಪರಾಧಿಗೂ ಕೈಕಾಲು ಬೀಳುವುದು! ನನ್ನನ್ನಿನ್ನು ಕೇಳಲೇ ಬೇಡ!

ಏನೆಲ್ಲ ಆಗುವುದೊ? ಆಗಲಿ, ಮಿತ್ರಕಾರ್ಯಕ್ಕಾಗಿ ಬಂದುದನ್ನೆಲ್ಲ ಅನು ಭವಿಸಬೇಕು' ಎಂದುಕೊಂಡು, ಬಂದವನನ್ನು ನೋಡಿ—“ಅಯ್ಯಾ! ನಾನು ಉಟ್ಟಿರುವ ಬಟ್ಟೆಯೆಲ್ಲ ಕೊಳೆಯಾಗಿ ಹೋಗಿದೆ; ದೊಡ್ಡವರ ಬಳಿಗೆ ಹೋಗು ವುದಲ್ಲವೆ? ಮಡಿ ಬಟ್ಟೆಯನ್ನುಟ್ಟುಕೊಂಡು ಬರುತ್ತೇನೆ, ಸ್ವಲ್ಪ ಕುಳಿತು ಕೊಳ್ಳಿರಿ'' ಎಂದು ಒಳಗೆ ಹೋಗಿ, ತನ್ನ ಮಿತ್ರನಾದ ಧನಸೇನನನ್ನು ಕರೆದು—‘ಆ ಅನಿಷ್ಟ ಬ್ರಾಹ್ಮಣನು ಜನ ಕಳುಹಿಸಿದ್ದಾನೆ; ಹೋದ ಮೇಲೆ ಏನಾಗುವುದೊ? ಗೊತ್ತಿಲ್ಲ! ನೀನು ಅಮಾತ್ಯರ ಹೆಂಡತಿ ಮಕ್ಕಳನ್ನು ಮೆಲ್ಲಗೆ ಇಲ್ಲಿಂದ ತಪ್ಪಿಸಿ, ಇನ್ನೊಂದು ಕಡೆಯಲ್ಲಿರಿಸಿ ಕಾದುಕೊಂಡಿರ ಬೇಕು' ಎಂದು ಹೇಳಿ ಬಟ್ಟೆಯನ್ನುಟ್ಟುಕೊಂಡು ಹೊರಗೆ ಬಂದು, ಶಿಷ್ಯ ನೊಡನೆ ಹೊರಟನು.

ಚಂದನದಾಸನು ಬರುವುದನ್ನು ನೋಡಿ, ಚಾಣಕ್ಯನು—ಓ—ಹೋ—ಹೋ—ಹೋ! ಏನಯ್ಯಾ? ಚಂದನದಾಸರು ಬಹಳ ಅಪ ರೂಪವು?

ಕೈಬೆರಳುಗಳನ್ನು ತಿರುಪಿಕೊಂಡು ಚಂದನದಾಸನು—ಊ—ಹೂ-ಹೂ—ಹೂ! ತಮ್ಮ ದಯ; ಗೃಹಕೃತ್ಯದ ತಾಪತ್ರಯಗಳಿಂದ ಸ್ವಲ್ಪ ಅಪರೂಪವಾಗಿ ಹೋಯಿತು.

ಚಾಣಕ್ಯ—ಅದೆಲ್ಲ ಇರಲಿ; ಕುಳಿತುಕೊಳ್ಳಿರಿ; ಕ್ಷೇಮವೆ?

ಚಂದ—ತಮ್ಮ ದಯದಿಂದ ಇದು ವರೆಗೆ ಕ್ಷೇಮವೆ.

ಚಾಣ—ವ್ಯಾಪಾರಗಳೆಲ್ಲ ಹೇಗೆ ನಡೆಯುತ್ತಿವೆ?

ಚಂದ—ಅಲ್ಲಿಂದಲ್ಲಿಗೆ, ತಂತು ಮಾತ್ರ ನಡೆದುಕೊಂಡಿದೆ.

ಚಾಣ—ಹೂಂ! ಅದು ಹಾಗಾಯಿತು; ಈಗ ಚಂದ್ರಗುಪ್ತನ ವಿಷಯವಾಗಿ ಊರಲ್ಲೆಲ್ಲಾ ಏನು ಹೇಳುತ್ತಾರೆ?

ಚಂದ—ಏನು ಹೇಳುವುದು? ಚಂದ್ರಗುಪ್ತ ಮಹಾರಾಯರಿಗೆ ಸರಿಯೆ ಇಲ್ಲವೆಂದು ಹೇಳುತ್ತಾರೆ.

ಚಾಣ—ಹಾಗಾದರೆ ಅಂತಹ ಪ್ರಜೆಗಳಿಂದ ಅರಸರು ಪ್ರತ್ಯುಪಕಾರ ವನ್ನು ಬಯಸುವುದು ಒಂದು ಪದ್ಧತಿಯಲ್ಲವೆ?

ಚಂದ—ಓಹೋ! ಅದಕ್ಕೇನು? ಎಲ್ಲರೂ ಅಪ್ಪಣೆಯಂತೆ ಶಕ್ತಿ ಮೀರಿ ನಡೆದುಕೊಳ್ಳಲಿಕ್ಕೆ ಸಿದ್ಧರೆ.

ಚಾಣ—ಶಕ್ತಿವಿಾರಿ ನಡೆಯಲಿಕ್ಕೆ ಇದೇನು ನಂದರ ಆಳಿಕೆಯೆ? ನೀವೆಲ್ಲರೂ ಸುಖದಿಂದಿದ್ದರೆ ಅದುವೆ ಚಂದ್ರಗುಪ್ತನಿಗೊಂದು ಸಂತೋಷವು.

ಚಂದ—ಛೀ! ಅಲ್ಲವಪ್ಪಾ! ನಮ್ಮೆಲ್ಲವರನ್ನೂ ಉತ್ತಮ ರೀತಿಯಿಂದ ನಡೆಯಿಸಬೇಕು.

ಚಾಣ—ದೊರೆಗಳಿಗೆ ಅಪ್ರೀತಿಯನ್ನು ಉಂಟುಮಾಡದಿದ್ದರೆ ಸುರಕ್ಷಿತರಾಗಿರುವಿರಿ.

ಚಂದ—ದುಷ್ಟನಾದವನು ದೊರೆಗಳಿಗೆ ಅಪ್ರೀತಿಯನ್ನು ಉಂಟುಮಾಡಿಯಾನು.

ಚಾಣ—ಹಾಗಾದರೆ ಮೊದಲನೆಯ ರಾಜದ್ರೋಹಿ ನೀನು.

ಚಂದ—(ಬುದ್ಧಾ! ಬುದ್ಧಾ!! ಎಂದು ತನ್ನ ದೇವರನ್ನು ಸ್ಮರಿಸುತ್ತ) ಸ್ವಾಮಿಾ! ಬೆಂಕಿಯೊಡನೆ ಹುಲ್ಲಿಗೆ ಜಗಳವುಂಟೆ?

ಚಾಣ—ರಾಜದ್ರೋಹಿಗಳಾದ ರಾಕ್ಷಸನ ಹೆಂಡಿರು ಮಕ್ಕಳನ್ನು ಇದುವರೆಗೂ ಮನೆಯಲ್ಲಿ ಅಡಗಿಸಿಟ್ಟುಕೊಂಡು, ಇನ್ನು ಅರಸರಿಗೆ ಅರಿಕೆ ಮಾಡದಿರುವುದು ಅಪರಾಧವೊ? ಅಲ್ಲವೋ?

ಚಂದ—ಬುದ್ಧೀ! ಯಾರೊ ಸುಳ್ಳು ಹೇಳಿರಬೇಕು; ಈ ವಿಷಯುವೆ ನನಗೆ ಗೊತ್ತಿಲ್ಲ!

ಚಾಣ—ಗೊತ್ತಿದ್ದರೆ ನಿನ್ನ ಆಸ್ತಿಯನ್ನೆಲ್ಲ ಅರಮನೆಯ ಭಂಡಾರಕ್ಕೆ ಕೂಡಿಸಿ, ನಿನಗೆ ಕಠಿಣವಾದ ಶಿಕ್ಷೆಯನ್ನು ಮಾಡಬಹುದಲ್ಲ!

ಚಂದ—ಹಾಗಾದರೆ ನಾನು ಸತ್ಯವನ್ನು ಹೇಳುತ್ತೇನೆ; ರಾಕ್ಷಸನು ಹೊರಟು ಹೋಗುವಾಗ ಅವನ ಹೆಂಡತಿ ಮಕ್ಕಳನ್ನು ನನ್ನ ಮನೆಯಲ್ಲಿ ಬಿಟ್ಟುಹೋಗಿದ್ದನು; ಆ ಮೇಲೆ ಅವರು ತಪ್ಪಿಸಿಕೊಂಡು ಎಲ್ಲಿಗೋ ಓಡಿ ಹೋಗಿದ್ದಾರೆ; 'ಅದುದರಿಂದ ಅರಿಕೆಮಾಡಿಕೊಳ್ಳಲಿಕ್ಕೆ ಸ್ವಲ್ಪ ಹಿಂಜರಿದೆನು.

ಚಾಣ— ಏನಯ್ಯಾ ಸೆಟ್ಟಿ? ಮೊದಲು 'ಗೊತ್ತೆ ಇಲ್ಲ, ಆ ಮೇಲೆ ಗೊತ್ತುಂಟು. ಈಗ ಎಲ್ಲಿಗೊ ತಪ್ಪಿಸಿಕೊಂಡು ಹೋಗಿದ್ದಾರೆ'! ಇದೇನು ಎರಡು ನಾಲಗೆ?

ಚಂದ—ಬುದ್ಧೀ! ಹೆದರಿ ಬಾಯಿತಪ್ಪು ಬಂದು ಹೋಯಿತು.

ಚಾಣ—ಚಂದ್ರಗುಪ್ತನ ಆಳಿಕೆಯಲ್ಲಿ ಬಾಯಿ ತಪ್ಪು ಸಹ ಬರ

ಕೂಡದು; ಯಾಕೆ ಸುಮ್ಮನೆ ಅಡಿಯಲ್ಲಿ ಬಿದ್ದುಕೊಂಡು ಮೂಗು ಮೇಲೆ ಎಂದು ಹೇಳುವುದು? ತಂದೊಪ್ಪಿಸು.

ಚಂದನದಾಸನು ಮನಸ್ಸಿನಲ್ಲಿ—'ಆಃ! ತಲೆಯ ಮೇಲೆ ಹಾವು ಬುಸುಗುಟುತ್ತಿದೆ; ಔಷಧವು ಕಾಡಿನಲ್ಲಿದೆ; ಏನೆಲ್ಲ ಆಗುವುದೋ? ಕಷ್ಟ!' ಎಂದು ಚಿಂತಿಸುತಿದ್ದನು. ಆಗ ಹೊರಗೆ ಆಗುತ್ತಿರುವ ಕಲಕಲ ಧ್ವನಿಯನ್ನು ಕೇಳಿ ಚಾಣಕ್ಯನು—'ಅದೇನು ಬೊಬ್ಬೆ? ನೋಡಿ ಬಾ! ಎಂದು ಶಿಷ್ಯನನ್ನು ಕಳುಹಿಸಿದನು. ಅವನು ನೋಡಿ ಬಂದು—'ಅದು ಪರ್ವತರಾಯನನ್ನು ವಿಷಕನ್ಯೆಯ ಮುಖದಿಂದ ಕೊಲ್ಲಿಸಿದ ಕ್ಷಪಣಕನನ್ನು ರಾಜದೂತರು ಅವಮಾನ ಪಡಿಸಿ, ಊರಿನಿಂದ ಹೊರಗೆ ಓಡಿಸುವುದು' ಎಂದನು.

ಚಾಣ—ಹೂಂ! ಮಾಡಿದ ಕರ್ಮವನ್ನು ಅನುಭವಿಸುತ್ತಾನೆ; ಅನುಭವಿಸಲಿ. ಸೆಟ್ಟೀ! ನೋಡಿದೆಯಾ! ರಾಜದ್ರೋಹಿಗಳಿಗೆ ಇದುವೆ ಗತಿ. ಬೇಗನೆ ತಂದು ಒಪ್ಪಿಸಿ ಬಿಡು.

ಚಂದ—ನಿಜವಾಗಿ ನನಗೆ ಗೊತ್ತಿಲ್ಲ.

ಅಷ್ಟರಲ್ಲಿ ಪುನಃ ಬೀದಿಯ ಕಡೆಯಿಂದ ಕೋಲಾಹಲವು ಕೇಳಿಸಿತು. ಆಗ—'ನೋಡು ನೋಡು, ಅದೇನು?' ಎಂದು ಚಾಣಕ್ಯನು ಪುನಃ ಶಿಷ್ಯನನ್ನು ಕಳುಹಿಸಿದನು. ಅವನು ನೋಡಿ ಬಂದು—'ಇದು ರಾಜದ್ರೋಹಿಯಾದ ಶಕಟದಾಸನನ್ನು ಅರಸನ ಅಪ್ಪಣೆಯಂತೆ ಶೂಲಕ್ಕೆ ಹಾಕಲಿಕ್ಕೆ ಬೀದಿಯಲ್ಲಿ ಸಾರಿಕೊಂಡು ತೆಗೆದುಕೊಂಡು ಹೋಗುವುದು' ಎಂದನು.

ಚಾಣ—'ಮಾಡಿದುದನ್ನು ಉಣ್ಣುತ್ತಾನೆ; ಉಣ್ಣಲಿ,' ಎಂದು ಚಂದನದಾಸನನ್ನು ನೋಡಿ—'ನೋಡಿದೆಯಾ! ರಾಜದ್ರೋಹಿಗಳಿಗೆ ಆಗುತ್ತಿರುವ ಅವಸ್ಥೆಗಳನ್ನೆಲ್ಲ ಕಣ್ಣಾರೆ ಕಂಡು, ಇನ್ನೂ ಗೊತ್ತಿಲ್ಲವೆಂದು ಹೇಳುತ್ತೀಯೋ? ಅಯ್ಯೋ! ಹುಚ್ಚಾ! ನಿನ್ನ ಹೆಂಡತಿ ಮಕ್ಕಳಿಗೆ ಯಾರು ಗತಿ?' ಬೇಗನೆ ತಂದೊಪ್ಪಿಸು.

ಚಂದ—ನೀವು ಹೀಗೆಲ್ಲ ನನ್ನನ್ನು ಹೆದರಿಸುವುದು ಸುಮ್ಮನೆ; ಅಮಾತ್ಯರ ಹೆಂಡತಿ ಮಕ್ಕಳು ನನ್ನಲಿ ಇದ್ದರೂ ನಾನು ತಂದು ಕೊಡುವವನಲ್ಲ; ಇಲ್ಲದಿರುವುದನ್ನು ಎಲ್ಲಿಂದ ತಂದುಕೊಡಲಿ?

ಚಾಣ—ಸೆಟ್ಟೀ! ಇದು ನಿಶ್ಚಯವೆ?

ಚಂದ—ಹೌದು, ನಿಶ್ಚಯುವೆ.

ಚಾಣ—(ಕಣ್ಣು ಕೆರಳಿಸಿಕೊಂಡು) ದುಷ್ಟನೆ! ನೀನು ಮಾಡಿದ ತಪ್ಪಿಗೆ ತಕ್ಕ ಫಲವನ್ನು ಅನುಭವಿಸುತ್ತಿ.

ಚಂದ—ಏನಪ್ಪಾ! ನಿಮಗೆ ಅಧಿಕಾರವಿದ್ದುದನ್ನೆಲ್ಲ ತೋರಿಸಿ ಬಿಡಿರಿ, ನಾನು ಸಿದ್ಧನಾಗಿಯೆ ಬಂದಿದ್ದೇನೆ.

ಚಾಣ—(ಶಿಷ್ಯನನ್ನು ನೋಡಿ) 'ನೋಡು! ಈ ಪಾಪಿಯ ಮನೆಯಲ್ಲಿರುವುದನ್ನೆಲ್ಲ ಅರಮನೆಯ ಭಂಡಾರಕ್ಕೆ ಸೇರಿಸಿ, ಇವನನ್ನೂ ಇವನ ಹೆಂಡತಿ ಮಕ್ಕಳನ್ನೂ ಹಿಡಿದು ಸೆರೆಮನೆಯಲ್ಲಿಡುವಂತೆ ದುರ್ಗರಕ್ಷಕನಿಗೆ ಹೇಳು. ನಾನು ಈಗಲೆ ಚಂದ್ರಗುಪ್ತನಿಗೆ ತಿಳಿಸಿ, ಇವನಿಗೆ ಮಾಡುತ್ತೇನೆ ಬಗೆ!' ಎಂದು ಹೊರಟು ಹೋದನು.

ಅತ್ತ ಚಂಡಾಲರು ಶಕಟದಾಸನನ್ನು ಶೂಲಕ್ಕೆ ಹಾಕಲಿಕ್ಕೆ ಕೊಂಡು ಹೋಗುತ್ತಿರುವಾಗ, ಸಿದ್ಧಾರ್ಥಕನು ನೋಡಿ, ಖಡ್ಗವನ್ನು ಝಳಪಿಸುತ್ತ ಓಡಿ ಬಂದು, ಆ ಕಟುಕರ ಮೇಲೆ ಬಿದ್ದನು; ಅವರು ಹೆದರಿ ಅವನನ್ನು ಬಿಟ್ಟು ದಿಕ್ಕುಗೆಟ್ಟು ಓಡಿಹೋದರು. ಆಗ ಸಿದ್ಧಾರ್ಥಕನು ಚಾಣಕ್ಯ ಚಂದ್ರಗುಪ್ತರನ್ನು ಬೈದು—'ಶಕಟದಾಸ! ಹೆದರಬೇಡ; ಇಲ್ಲಿಂದ ಹೊರಡು, ಎಲ್ಲಿಗಾದರೂ ಹೋಗುವ, ಎಂದು ಅವನನ್ನು ಕರೆದುಕೊಂಡು ಪರ್ವತ ರಾಜ್ಯಾಭಿಮುಖನಾಗಿ ನಡೆದನು.

ಆಗ ಚಾಣಕ್ಯನ ಶಿಷ್ಯನು ಬಂದು —ಸ್ವಾಮೀ! ಶಕಟದಾಸನನ್ನು ಶೂಲಕ್ಕೆ ಹಾಕಲಿಕ್ಕೆಂದು ಕೊಂಡುಹೋಗುತ್ತಿರುವಾಗ ಸಿದ್ಧಾರ್ಥಕನೆಂಬವನು ಕತ್ತಿ ಹಿಡಿದುಕೊಂಡು ಬಂದು ಹೊಲೆಯರನ್ನೆಲ್ಲ ಓಡಿಸಿ, ಅವನನ್ನು ಎಲ್ಲಿಗೊ ಕರೆದುಕೊಂಡು ಹೋದನಂತೆ.

ಚಾಣ—ಓಡಿ ಹೋಗು, ಆ ಸಿದ್ಧಾರ್ಥಕನೂ ಶಕಟದಾಸನೂ ಎಲ್ಲಿಗೆಯೇ ಹೋಗಿರಲಿ, ಹಿಡಿದು ತರುವಂತೆ ಬಾಗುರಾಯಣನಿಗೆ ಹೇಳು.

ಶಿಷ್ಯನು ಹೋಗಿ ಬಂದು—ಬಾಗುರಾಯಣನು ಇಲ್ಲ; ಅವನು ಅಂದೆ ಹೊರಟು ಹೋಗಿದ್ದಾನಂತೆ.

ಚಾಣ—ಹಾಗಾದರೆ, ಆ ಮೋಸಗಾರನನ್ನು ಹಿಡಿದು ತರುವಂತೆ ಭದ್ರಭಟಾದಿಗಳಿಗೆ ಹೇಳಿ ಬಾ.

ಅವನು ವಿಚಾರಿಸಿ ಬಂದು—ಒಬ್ಬರೂ ಇಲ್ಲ; ಎಲ್ಲರೂ ಕಾಣೆ.

ಚಾಣಕ್ಯನು ಆಶ್ಚರ್ಯಪಟ್ಟು,—'ಆಃ! ಎಲ್ಲವರೂ ಮೋಸಗಾರರೆ, ಇರಲಿ, ನೋಡಿಕೊಳ್ಳುವ' ಎಂದು ಆಹ್ನಿಕಕ್ಕೆ ಹೊರಟು ಹೋದನು.

## ೧೧. ರಾಕ್ಷಸ ಶಕಟದಾಸರ ಸಂಯೋಗ

ಈಗ ಚಂದ್ರಗುಪ್ತನು ದೊಡ್ಡ ಕಾರಭಾರಿಯಾಗಿದ್ದಾನೆ; ಸ್ವತಂತ್ರನಾಗಿ ರಾಜ್ಯಕಾರ್ಯಗಳನ್ನು ಮಾಡುತ್ತಾನೆ. ಪ್ರತಿವರ್ಷವೂ ಶರತ್ಕಾಲದಲ್ಲಿ ಕೌಮುದೀ ಮಹೋತ್ಸವವನ್ನು ಆಚರಿಸುವ ವಾಡಿಕೆಯೊಂದು ಆ ಊರಿನಲ್ಲಿ ಪ್ರಾಕಿನಿಂದಲೇ ನಡೆದು ಬಂದಿತ್ತು; ಚಂದ್ರಗುಪ್ತನ ಕಾರಭಾರದಲ್ಲಿ ಇದು ಮೊದಲನೆಯದು. ಆದುದರಿಂದ ನಂದನಾಶದಿಂದ ವ್ಯಾಕುಲಿತರಾದ ಪ್ರಜೆಗಳನ್ನು ಆನಂದಸಾಗರದಲ್ಲಿ ಓಲಾಡಿಸಬೇಕೆಂದು 'ಈ ಬರುವ ಶುದ್ಧ ಪೌರ್ಣಮಿಯ ದಿನ ನಮ್ಮ ವರ್ಷದ ವರ್ಧಂತಿಯಾಗಬೇಕು; ಹುಣ್ಣಿಮೆಯ ಸಮಯದಲ್ಲಿ ನಾವು ಹುಟ್ಟಿದ ಕಾರಣ ನಮಗೆ ಚಂದ್ರಗುಪ್ತನೆಂದು ಹೆಸರಾಯಿತು; ಆದುದರಿಂದ ಇಂದು ಮೊದಲುಗೊಂಡು ಬಹುಳ ಪಂಚಮಿಯ ವರೆಗೆ ಹದಿನೈದು ದಿನ ಈ ಉತ್ಸವವನ್ನು ಮಾಡಿಸುವೆನು,' ಎಂದು ನಿಶ್ಚಯಿಸಿ ದೂತರನ್ನು ನೋಡಿ—

'ಇಂದಿನಿಂದ ಬರುವ ಬಹುಳ ಪಂಚಮಿಯ ವರೆಗೆ ನಮ್ಮ ಪಟ್ಟಣದಲ್ಲಿ ಕೌಮುದೀ ಮಹೋತ್ಸವವಾಗಬೇಕು. ನಗರವೆಲ್ಲ ಸಿಂಗರಿಸಲ್ಪಡಲಿ; ನಮ್ಮ ಸುಗಾಂಗವೆಂಬ ಮಾಳಿಗೆ ತಳಿರುಗುಡಿ ತೋರಣಗಳಿಂದಲೂ; ಮುತ್ತಿನ ಜಲ್ಲರಿ ಮೇಲುಕಟ್ಟುಗಳಿಂದಲೂ ಅಲಂಕೃತವಾಗಲಿ; ಪಟ್ಟಣಿಗರೆಲ್ಲರೂ ತಮ್ಮ ತಮ್ಮ ಸ್ತ್ರೀಜನ ಸಮೇತರಾಗಿ, ಬಂಧುಬಾಂಧವರೊಡನೆ ಗಂಧಮಾಲ್ಯಾದ್ಯಲಂಕಾರಗಳಿಂದ ಸಂತೋಷಚಿತ್ತರಾಗಿರಲಿ; ದೇವಾಲಯಗಳಲ್ಲಿ ಉತ್ಸವಗಳು ನಡೆಯಲಿ; ವಿದ್ವಾಂಸರಿಗೂ ಸ್ನೇಹಿತರಿಗೂ ಬೊಕ್ಕಸದಿಂದ ಬೇಕಾದುದು ಕಳುಹಿಸಲ್ಪಡಲಿ; ರಾಯಬೀದಿಗಳೆಲ್ಲ ಸಂಗೀತ ನರ್ತನಗಳಿಂದ ಮೆರೆಯಲಿ; ಬ್ರಾಹ್ಮಣರಿಗೆ ಭೋಜನಾದಿ ಸತ್ಕಾರಗಳಾಗಲಿ; ಬಡವರಿಗೂ ದಿಕ್ಕಿಲ್ಲದವರಿಗೂ ಅನ್ನವಸ್ತ್ರಗಳನ್ನು ಕೊಡಲಿ; ಸೆರೆಮನೆಯಲ್ಲಿರುವವರನ್ನೆಲ್ಲಾ ಬಿಡಲಿ' ಎಂದು ನಿರೂಪಿಸಿದನು. ಒಡನೆಯೆ ದೂತರು ಹೋಗಿ ಬೀದಿಬೀದಿಗಳಲ್ಲಿ ನಿಂತು ಸಾರಿದರು.

ಈ ಗದ್ದಲವನ್ನು ಕೇಳಿ ಚಾಣಕ್ಯನು ಶಿಷ್ಯನನ್ನು ನೋಡಿ—ಅದೇನು ಕೋಲಾಹಲವು? ನೋಡಿ ಬಾ.

ಶಿಷ್ಯನು ನೋಡಿ ಬಂದು—ಸ್ವಾಮಿಾ! ಚಂದ್ರಗುಪ್ತನ ಅಪ್ಪಣೆಯಂತೆ ಕೌಮುದೀ ಮಹೋತ್ಸವಕ್ಕಾಗಿ ಪಟ್ಟಣದಲ್ಲೆಲ್ಲ ಡಂಗುರ ಸಾರುತ್ತಾರೆ.

ಚಾಣಕ್ಯನು ಹೀಗೆ ನೋಡಿ—ಹೋಗು, ಹೋಗು; ಈ ಉತ್ಸವಗಳೊಂದೂ ಬೇಡ; ನಿಲ್ಲಿಸಬೇಕೆಂದು ನಾವು ಹೇಳಿದ್ದೇವೆಂದು ಹೇಳು.

ಶಿಷ್ಯನು ಹೋಗಿ ರಾಜದೂತರನ್ನು ಕುರಿತು—ಅಯ್ಯಾ! ಚಾಣಕ್ಯರ ಅಪ್ಪಣೆಯಾಗಿದೆ; ಉತ್ಸವಗಿತ್ಸವಗಳೇನೂ ಬೇಡವಂತೆ; ನೀವೆಲ್ಲ ಹಿಂದಕ್ಕೆ ಹೋಗಬೇಕಂತೆ.

ಇದನ್ನು ಕೇಳಿ, ದೂತರು ತಮ್ಮೊಳಗೆ—'ಚಾಣಕ್ಯರ ಅಪ್ಪಣೆಯನ್ನು ಮಿಾರಿದರೆ ಮೋಸವೆ,' ಎಂದು ಸಾರುವುದನ್ನು ಬಿಟ್ಟು ಹಿಂದೆ ಹಿಂದೆ ಸಾರಿದರು. ಅದನ್ನು ನೋಡಿ ಪಟ್ಟಣಿಗರು—'ಇದೇನು? ರಾಜನ ಅಪ್ಪಣೆಗೆ ಚಾಣಕ್ಯನು ವಿರೋಧವಾಗಿದ್ದಾನೆ? ಏನಾದರೂ ಅವರೊಳಗೆ ಮನಸ್ತಾಪವುಂಟಾಗಿದೆಯೆ? ಎಂದು ತಮ್ಮೊಳಗೆ ಗುಜುಗುಜು ಗುಟ್ಟುತಿದ್ದರು.

ಹೀಗಿರಲು ಒಬ್ಬ ಹಾವಾಡಿಗನು ಅಲ್ಲಲ್ಲಿ ತಿರುಗಾಡಿಕೊಂಡು, ಇದನ್ನೆಲ್ಲ ತಿಳಿದು, ತನ್ನ ಮನಸ್ಸಿನಲ್ಲಿ—'ರಾಕ್ಷಸನ ಧೀರತೆಯನ್ನೂ ಮಲಯಕೇತುವಿನ ಯುದ್ಧಸನ್ನಾಹವನ್ನೂ ನೋಡಿದರೆ, ಪಾಟಲೀಪುರವು ಈಗಲೆ ಧ್ವಂಸವಾಯಿತೆಂದು ಹೇಳಬೇಕು; ಇಲ್ಲಿ ಚಾಣಕ್ಯನ ತಂತ್ರಗಳನ್ನೆಲ್ಲ ನೋಡಿದರೆ, ಕಣ್ಣುಗಟ್ಟಿ ಕಾಡಿಗೆ ಬಿಟ್ಟಂತಾಗುತ್ತದೆ! ಇವರಿಬ್ಬರಲ್ಲಿ ಜಯಲಕ್ಷ್ಮಿ ಯಾರಿಗೆ ಹೂಮಾಲೆ ಹಿಡಿದಿರುವಳೊ? ಒಟ್ಟಾರೆ ಇದು ಗೋಡೆಯಲ್ಲಿ ಕುಳಿತ ಬೆಕ್ಕು ಎಂದು ನೆನಸಿಕೊಂಡು ಪರ್ವತ ರಾಜ್ಯವನ್ನು ಸೇರಿ, ಅಮಾತ್ಯನ ಮನೆಯ ಬಾಗಿಲಿಗೆ ಬಂದು ಅಂಗಳದಲ್ಲಿ ಕುಳಿತು, ನಾಗಸರವನ್ನು ಊದುತ್ತ ಎಡಗೈಯಲ್ಲಿ ಮಂಗನ ಸೊಂಟಕ್ಕೆ ಹಗ್ಗವನ್ನು ಹಾಕಿ ಹಿಡಿದುಕೊಳ್ಳುತ್ತ—'ತಾಳಿಗಡೋ ಮಂಗಣ್ಣಾ! ಒಂದು ಲಾಗ ಹಾಕು ಮಂಗಣ್ಣಾ! ತಾ; ತಿತ್ತಿರಿ ತಿರಿ ತಿರಿ ತತ್ತತಾಲಿಗ ಮಂಗಣ್ಣಾ!' ಎಂದು ಕುಣಿಸಿದನು.

ಆಗ ಮನೆಯ ಕಾವಲುಗಾರರು ನೋಡಿ—ಹಾವಾಡಿಗನೆ! ನಿನ್ನ ಈ ಪೆಟ್ಟಿಗೆಯೊಳಗಿರುವ ಹಾವುಗಳು ಹೇಗೆ ನಿನ್ನ ವಶವಾದುವು?

ಹಾವಾಡಿಗ—ಅದೆಲ್ಲ ಇರಲಿ, ಮೊದಲು ಈ ಮನೆ ಯಾರದೆಂದು ಹೇಳಿರಿ.

ದೂತರು—ಅಮಾತ್ಯರದು.

ಹಾವಾಡಿಗ—ಅಮಾತ್ಯರದೋ? ನಿಮ್ಮ ಅಮಾತ್ಯರು ತಮ್ಮ ಮಂತ್ರಾಲೋಚನೆಗಳಿಂದ ಹೇಗೆ ಶತ್ರುಗಳನ್ನು ವಶಮಾಡುವರೋ ಹಾಗೆಯೆ ನಾವು ಮಂತ್ರೌಷಧಗಳಿಂದ ಸರ್ಪಗಳನ್ನು ವಶಮಾಡಿಕೊಳ್ಳುತ್ತೇವೆ. ಆದುದರಿಂದ ನಿಮ್ಮ ಅಮಾತ್ಯರೂ ನಾವೂ ಸರಿ, ಎಂದು ಹೋಗಿ ಹೇಳಿರಿ.

ದೂತರು—ಥೂ! ಮೂಢನೆ! ಹಾವುಗಳನ್ನು ಹಿಡಿದ ಮಾತ್ರಕ್ಕೆ ನೀನು ಅಮಾತ್ಯರಿಗೆ ಸರಿಯೆ ?

ಹಾವಾಡಿಗ—ಅಯ್ಯೋ! ದೂತರೆ! ನನ್ನನ್ನು ಮೂಢನೆಂದು ಹೇಳುತ್ತೀರಲ್ಲ! ನಾನು ಪ್ರಾಕೃತ ಬಾಷೆಯಲ್ಲಿ ದೊಡ್ಡ ಕವಿ. ನೋಡಿರಿ, ನಾನು ಬರೆದ ಈ ಪ್ರಬಂಧವನ್ನು ಅಮಾತ್ಯರಿಗೆ ತೋರಿಸಿರಿ, ಆ ಮೇಲೆ ಅವರೆ ಏನು ಹೇಳುತ್ತಾರೆ ಕೇಳಿರಿ' ಎಂದು ಕಾಗದವನ್ನು ಕೊಟ್ಟನು.

ಆಗ ಒಳಗಿದ್ದ ರಾಕ್ಷಸನು ಮನಸ್ಸಿನಲ್ಲಿ—'ನಾನು ಹೊರಟು ಬಂದ ಮೇಲೆ ಪಾಟಲೀಪುರದಲ್ಲಿರುವ ನಮ್ಮ ಕಡೆಯವರು ಮಾಡಬೇಕಾದ ಕೆಲಸಗಳನ್ನು ಮಾಡದೆ ಇರಲಿಕ್ಕಿಲ್ಲ. ಸದ್ಯದ ಅಲ್ಲಿನ ವರ್ತಮಾನವೇನೂ ಗೊತ್ತಾಗಲಿಲ್ಲ' ಎಂದು ಯೋಚಿಸಿ, ದೂತನನ್ನು ನೋಡಿ — 'ನಮ್ಮನ್ನು ಕಾಣಬೇಕೆಂದು ಯಾರಾದರೂ ಹೊಸಬರು ಬಂದರೆ, ತಡೆಯದೆ, ಒಳಗೆ ಬಿಡಿರಿ' ಎಂದನು.

ದೂತನು—'ಅಪ್ಪಣೆ' ಎಂದು ಹೊರಗೆ ಹೋಗಿ ಬಂದು—'ಸ್ವಾಮಿಾ! ವಿಶೇಷವಾಗಿ ಯಾರೂ ಬರಲಿಲ್ಲ; ಒಬ್ಬ ಹಾವಾಡಿಗನು ಬಂದಿದ್ದಾನೆ; ಇದು ಅವನು ಕೊಟ್ಟ ಕಾಗದವು, ಎಂದು ಕಾಗದವನ್ನು ಮುಂದರಿಸಿದನು.

ರಾಕ್ಷಸನು ಅದನ್ನು ಓದಿ ನೋಡಿ, ಆಲೋಚಿಸಿ — 'ಇದರಲ್ಲಿ, ತುಂಬಿ ಹೂವಿನ ಬಂಡನ್ನುಂಡು ಇನ್ನೊಂದೆಡೆಯಲ್ಲಿ ಕಾರಿದರೆ ಅದು ಇನಿದಾಗಿ ಜನಕ್ಕೆ ಪ್ರಿಯವಾಗಿರುವುದು, ಎಂದಿದೆ; ಗೊತ್ತಾಯಿತು ಅಲ್ಲಿನ ವರ್ತಮಾನವನ್ನು ಇಲ್ಲಿ ಬಂದು ತಿಳಿಸಿದರೆ ಅದರಿಂದ ನಿಮಗೆ ಹಿತವಾಗುವುದು, ಎಂದು ಇದರ ಅರ್ಥವು; ಅವನು ನಮ್ಮ ಗೂಢಚಾರನೆ ಆಗಿರಬೇಕು' ಎಂದು ತಿಳಿದು, ದೂತನೊಡನೆ—'ಅವನನ್ನು ಇಲ್ಲಿಗೆ ಬರಲಿಕ್ಕೆ

ಹೇಳು' ಎಂದನು. ಅವನು ಹೋಗಿ ಹಾವಾಡಿಗನನ್ನು ಕರೆತಂದು ಮುಂದೆ ನಿಲ್ಲಿಸಿ, ಹಿಂದಿರುಗಿದನು.

ರಾಕ್ಷಸನು ಅವನನ್ನು ನೋಡಿ, ಏಕಾಂತಕ್ಕೆ ಕರೆದು--'ಏನು ವಿರಾಧಗುಪ್ತನೆ? ಚಂದ್ರಗುಪ್ತನು ಪಾಟಲೀಪುರವನ್ನು ಹೊಕ್ಕ ಮೇಲೆ' ಮಲಯಕೇತು ಅಲ್ಲಿಂದ ಓಡಿ ಬಂದ ಮೇಲೆ, ಏನೇನು ವಿಶೇಷಗಳು ನಡೆದುವು?' ಎಂದು ಕೇಳಿದನು. ಅದಕ್ಕೆ ವಿರಾಧಗುಪ್ತನು, ರಾಕ್ಷಸನ ಕಡೆಯ ಗೂಢ ಪುರುಷರೆಲ್ಲ ನಾಶವಾದುದನ್ನು ಒಂದುಳಿಯದಂತೆ ವಿಸ್ತರಿಸಿ ಹೇಳಿದನು. ಇದನ್ನು ಕೇಳಿ ಅಮಾತ್ಯನು—'ಅಃ! ಚಂದ್ರಗುಪ್ತನ ದೈವ ಬಲವೆ!' ಎಂದು ಕಣ್ಣೀರು ತುಂಬಿದನು. ಬಳಿಕ ಅವನನ್ನು ನೋಡಿ— ಅದು ಹಾಗಿರಲಿ, ಚಂದ್ರಗುಪ್ತ ಚಾಣಕ್ಯರು ಹೇಗಿದ್ದಾರೆ?

ವಿರಾಧಗುಪ್ತ—ಆ ಚಾಣಕ್ಯನೊಬ್ಬನಿಗೆ ಚಂದ್ರಗುಪ್ತನ ವಿರೋಧಿಗಳಾದವರರನ್ನೆಲ್ಲ ಹಿಡಿದು ತರಿಸಿ, ಶಿಕ್ಷಿಸುವುದೊಂದೇ ಕೆಲಸವು; ಜೀವಸಿದ್ಧಿ ಎಂಬ ಕ್ಷಪಣಕನೊಬ್ಬನಿಗೆ ಮಾಡಿದ ಅಪಮಾನವನ್ನು ಮನುಷ್ಯ ಜನ್ಮದಲ್ಲಿ ಬಂದವರು ನೋಡಬಾರದು! ಇಲ್ಲಿ ನಡೆಯುತ್ತಿರುವ ಮೋಸ ಕೃತ್ಯಗಳಿಗೆಲ್ಲ ಶಕಟದಾಸನೆ ಕಾರಣಪುರುಷನೆಂದು ಅವನನ್ನು ಹಿಡಿದು ತರಿಸಿ, ಪ್ರಾಣ ದಂಡನೆ ವಿಧಿಸಿ, ಶೂಲಕ್ಕೇರಿಸಲಿಕ್ಕೆಂದು ಎಳೆದುಕೊಂಡು ಹೋಗುತ್ತಿರುವುದನ್ನು ಕಣ್ಣಾರೆ ಕಂಡು ಬಂದೆನು. ಮತ್ತೆ ಚಂದನದಾಸನನ್ನು ಕರೆಯಿಸಿ ನಯಭಯಗಳಿಂದ ಅವನನ್ನು ಬಹಳವಾಗಿ ನಿರ್ಬಂಧ ಪಡಿಸಿದನು; ಅವನು ಒಂದಕ್ಕೂ ಮಿದಿಯದಿರಲು, ಕಡೆಗೆ ಅವನ ಸರ್ವಸ್ವವನ್ನೂ ಅಪಹರಿಸಿ, ಹೆಂಡತಿ ಮಕ್ಕಳೊಡನೆ ಸೆರೆಮನೆಗೆ ಕಳುಹಿಸಿದನು.

ರಾಕ್ಷಸ—ಅಯ್ಯೋ! ನನ್ನ ದೆಸೆಯಿಂದ ಇಂತಿತಹ ದೊಡ್ಡ ಮನುಷ್ಯರಿಗೆಲ್ಲ ಈ ಬಟ್ಟೆಯಾಯಿತು! ಇನ್ನು ಏನೆಲ್ಲ ಆಗಿರುವುದೊ!' ಎಂದು ಯೋಚಿಸುತ್ತಿರುವಾಗ, ದೂತನೊಬ್ಬನು ಒಳಗೆ ಬಂದು—'ಶಕಟದಾಸನು ಬಂದಿದ್ದಾನೆ,' ಎಂದನು. ಆಗ ರಾಕ್ಷಸನು ವಿರಾಧಗುಪ್ತನನ್ನು ನೋಡಿ—'ಇದೇನಾಶ್ಚರ್ಯವು?' ಎಂದು ಕೇಳಿದನು.

ವಿರಾಧಗುಪ್ತ—ಹಾಗಾದರೆ ದೇವರು ಅವನ ತಲೆಯಲ್ಲಿ ಗುದ್ದಲಿಯಿಂದ ಬರೆದಿರಬೇಕು.

ರಾಕ್ಷಸ—ಶಕಟದಾಸನನ್ನು ಬರಲಿಕ್ಕೆ ಹೇಳು. (ದೂತನು ಕರೆದು ತರುವನು.)

ಶಕಟದಾಸನನ್ನು ನೋಡಿ, ರಾಕ್ಷಸನು ಏನಯ್ಯಾ ! ಆ ಹುಲಿಯ ಬಾಯಿಯಿಂದ ಹೇಗೆ ತಪ್ಪಿಸಿಕೊಂಡು ಬಂದೆ ? ಕುಳಿತುಕೊ.

ಶಕಟದಾಸ—ಸ್ವಾಮಿಾ ! ಚಂಡಾಲರು ನನ್ನನ್ನು ಶೂಲಕ್ಕೆ ಹಾಕಲು ಹಿಡಿದುಕೊಂಡು ಹೋಗುತ್ತಿರುವಾಗ ನನ್ನ ಸ್ನೇಹಿತನಾದ ಸಿದ್ಧಾರ್ಥಕನೆಂಬವನು ಕತ್ತಿ ಹಿಡಿದುಕೊಂಡೇ ಓಡಿ ಬಂದು ಅವರ ಮೇಲೆ ಬಿದ್ದನು; ಅವನು ಬಿದ್ದ ಭರಕ್ಕೆ ಹೊಲೆಯರೆಲ್ಲ ದಿಕ್ಕುಪಾಲಾಗಿ ಕಂಡ ಕಡೆಗೆ ಓಡಿ ಹೋದರು ; ಆ ಮೇಲೆ ನಾವಿಬ್ಬರೂ ಇಲ್ಲಿಗೆ ಬಂದೆವು.

ರಾಕ್ಷಸ—'ಸಂತೋಷವಾಯಿತು' ಎಂದು ಅವನನ್ನು ಒಳಗೆ ಕರೆದು—ಏನಯ್ಯಾ ! ಸಿದ್ಧಾರ್ಥಕನೆ ! ನೀನು ಮಾಡಿದ ಉಪಕಾರಕ್ಕೆ ಏನು ಕೊಟ್ಟರೂ ಕೊಡಬಹುದು; ತೆಗೆದುಕೊ !' ಎಂದು ತನ್ನ ಮೈಮೇಲಿರುವ ಆಭರಣಗಳನ್ನು ತೆಗೆದುಕೊಟ್ಟನು.

ಸಿದ್ಧಾರ್ಥಕನು ಕೊಟ್ಟುದನ್ನು ತೆಗೆದುಕೊಂಡು—ಸ್ವಾಮಿಾ ! ನನಗಿಲ್ಲಿ ಪರಿಚಯಸ್ಥರೆಂದು ಯಾರೂ ಇಲ್ಲ; ಸದ್ಯಕ್ಕೆ ಇದು ನಿಮ್ಮಲ್ಲಿಯೆ ಇರಲಿ; ಬೇಕಾದಾಗ ಕೇಳಿ ತೆಗೆದುಕೊಂಡೇನು' ಎಂದು ಪುನಃ ಹಿಂದೆ ಕೊಟ್ಟನು.

ರಾಕ್ಷಸ—ಶಕಟದಾಸ ! ಹಾಗೆಯೆ ಮಾಡು.

ಶಕಟದಾಸನು ಒಳಗಿನಿಂದ ಒಂದು ಕರಡಿಗೆಯನ್ನು ತಂದು, ಆಭರಣಗಳನ್ನೆಲ್ಲ ಅದರೊಳಗಿಟ್ಟು, ಮುದ್ರೆಯನ್ನು ಹಾಕುತಿದ್ದನು. ಆಗ ಸಿದ್ಧಾರ್ಥಕನು—'ಇಗೊ ! ಈ ಉಂಗುರದಿಂದ ಮುದ್ರೆ ಮಾಡು' ಎಂದು ಒಂದು ಉಂಗುರವನ್ನು ಕೊಟ್ಟನು. ಶಕಟದಾಸನು ಅದರಲ್ಲಿರುವ ಅಕ್ಷರಗಳನ್ನು ನೋಡಿ ರಾಕ್ಷಸನೊಡನೆ—'ಇದರಲ್ಲಿ ನಿಮ್ಮ ಹೆಸರಿದೆ' ಎಂದು ತೋರಿಸಿದನು.

ರಾಕ್ಷಸನು ಉಂಗುರವನ್ನು ನೋಡಿ—'ಹೆಂಡತಿಯ ಕೈಯಲ್ಲಿ ಕೊಟ್ಟ ಉಂಗುರವು ಇವನಿಗೆ ಹೇಗೆ ಸಿಕ್ಕಿತು ?' ಎಂದು ಯೋಚಿಸಿ—'ಇದು ನಿನಗೆ ಎಲ್ಲಿ ಸಿಕ್ಕಿತು ?' ಎಂದು ಕೇಳಿದನು.

ಸಿದ್ಧಾರ್ಥಕ—ಒಂದು ದಿನ ನಾನು ಹೀಗೆಯೆ ಬೀದಿಯಲ್ಲಿ ತಿರು

ಗಾಡಿಕೊಂಡು ಹೋಗುತ್ತಿರುವಾಗ ಬಳೆಗಾರ ಸೆಟ್ಟಿ ಚಂದನದಾಸನ ಮನೆಯ ಬಾಗಿಲಿನಲ್ಲಿ ಇದು ಬಿದ್ದುಕೊಂಡಿತ್ತು; ನನ್ನ ಕಣ್ಣಿಗೆ ಬಿತ್ತು. 'ಸಿಕ್ಕಿದುದನ್ನು ಬಿಟ್ಟರೆ ಕಲಿತುದು ಬುದ್ಧಿಯಲ್ಲ' ಎಂದು ಹೆಕ್ಕಿ ಸೊಂಟದಲ್ಲಿ ಕುತ್ತಿಕೊಂಡೆನು.

ಆಗ ರಾಕ್ಷಸನು ಮನಸ್ಸಿನಲ್ಲಿ, 'ಇದು ಇವನ ಕೈಗೆ ಸಿಕ್ಕಿದುದು ಉತ್ತಮವಾಯಿತು' ಎಂದು ನೆನಸಿಕೊಂಡಿದ್ದನು. ಆಗ ಶಕಟದಾಸನು— 'ಮಿತ್ರನೆ! ಈ ಉಂಗುರದಲ್ಲಿ ಅಮಾತ್ಯರ ಹೆಸರಿದೆ; ಆದುದರಿಂದ ಇದು ಅವರದೆ ಆಗಿರಬೇಕು; ನೀನೆ ಅವರಿಗೆ ಒಪ್ಪಿಸು' ಎಂದನು. ಅದಕ್ಕೆ ಸಿದ್ಧಾರ್ಥಕನು—'ಹಾಗೊ?' ಎಂದು ತಾನೆ ಅಮಾತ್ಯನಿಗೆ ಒಪ್ಪಿಸಿದನು.

ರಾಕ್ಷಸನು ಅದನ್ನು ತೆಗೆದುಕೊಂಡು ಶಕಟದಾಸನ ಕೈಯಲ್ಲಿ ಕೊಟ್ಟು—'ಇಂದಿನಿಂದ ನಮ್ಮ ಕಾಗದ ಪತ್ರಗಳಿಗೆಲ್ಲ ಇದರಿಂದಲೆ ಮುದ್ರೆ ಮಾಡು' ಎಂದನು. ಆಗ ಸಿದ್ಧಾರ್ಥಕನು—'ಅಮಾತ್ಯರೆ! ಈಗ ಇನ್ನೊಂದು ಅರಿಕೆ ಇದೆ. ನಾನು ಚಾಣಕ್ಯನಿಗೆ ವಿರೋಧವನ್ನು ಮಾಡಿ ತಪ್ಪಿಸಿಕೊಂಡು ಬಂದವನು; ಏನು ಮಾಡುವುದು?' ಎಂದು ಕೇಳಿದನು. ರಾಕ್ಷಸನು—'ಮಾಡುವುದೇನು? ಇಲ್ಲಿಯೆ ಇರುವುದು' ಎಂದು ಶಕಟದಾಸನನ್ನು ನೋಡಿ—'ನೀವಿಬ್ಬರೂ ಒಟ್ಟಿಗೆಯೆ ಇದ್ದುಕೊಳ್ಳಿರಿ; ಬಹಳ ದಣಿದು ಬಂದಿದ್ದೀರಿ, ಬಿಡಾರಕ್ಕೆ ಹೋಗಿರಿ' ಎಂದು ಕಳುಹಿಸಿದನು.

## ೧೨. ಆಭರಣ ವಿಕ್ರಯ

ಶಕಟದಾಸ ಸಿದ್ಧಾರ್ಥಕರನ್ನು ಬಿಡಾರಕ್ಕೆ ಕಳುಹಿಸಿ, ಅಮಾತ್ಯನು ವಿರಾಧಗುಪ್ತನೊಡನೆ—'ಮತ್ತೇನು?' ಎಂದು ಕೇಳಿದನು.

ವಿರಾಧಗುಪ್ತ—ಮತ್ತೊಂದಿದೆ; ಭದ್ರಭಟಾದಿಗಳನ್ನು ಹೊರಡಿಸಿದ ಕಾರಣವೊ? ಅಥವಾ ಬೇರೇನಾದರೂ ಇದೆಯೊ? ಗೊತ್ತಿಲ್ಲ. ಚಂದ್ರಗುಪ್ತ ಚಾಣಕ್ಯರೊಳಗೆ ಈಗ ಸ್ವಲ್ಪ ಅಷ್ಟಷ್ಟೆ, ಎಂದು ಜನರು ಮಾತನಾಡಿಕೊಳ್ಳುತಿದ್ದರು. ಆದರೂ ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕೆಂದು ನಾನು ಅಲ್ಲಿಯೆ ಇದ್ದುಕೊಂಡು ಪರೀಕ್ಷಿಸುತಿದ್ದೆನು. ಮತ್ತೊಂದು ದಿನ ಕೌಮುದೀ ಮಹೋತ್ಸವವು ನಡೆಯುವಂತೆ ದೂತರು ಚಂದ್ರಗುಪ್ತನ ಅಪ್ಪಣೆಯನ್ನು ಪಟ್ಟಣದಲ್ಲೆಲ್ಲ ಸಾರುತಿದ್ದರು; ಆ ಗದ್ದಲವನ್ನು ಕೇಳಿ

ಚಾಣಕ್ಯನು ತಡೆಯಲಾರದೆ—ಬಂದವರು ಹಿಂದಕ್ಕೆ ಹೋಗಿರಿ, ಉತ್ಸವ ಗಿತ್ಸವಗಳು ಈಗ ಅಗತ್ಯವಿಲ್ಲ, ಎಂದು ಕಣ್ಣು ಕೆಂಪುಮಾಡಿಕೊಂಡು ಆ ಸಾರುವವರನ್ನು ಹಿಂದಕ್ಕೆ ಓಡಿಸಿದನು; ಇದನ್ನು ಕಂಡು ಪಟ್ಟಣಿಗರು 'ಇದೇನು ಹೀಗಾಯಿತು? ಮೊದಲು ಹಾಲುನೀರುಗಳಂತಿದ್ದವರು ಈಗ ಎಣ್ಣೆಸೀಗೆಗಳಂತಾದರು?' ಎಂದು ತಮ್ಮ ತಮ್ಮೊಳಗೆ ಗುಜುಗುಜು ಗುಟ್ಟುತ್ತಿರುವುದನ್ನು ಕೇಳಿ, ಕೂಡಲೆ ಹೊರಟು ಬಂದೆನು,' ಎಂದು ಅರಿಕೆ ಮಾಡಿದನು.

ಇದನ್ನು ಕೇಳಿ ರಾಕ್ಷಸನು ಸಂತೋಷಪಟ್ಟು—'ಆಡುವವರ ಮಕ್ಕಳು ಆಡಬೇಕು, ಬೇಡುವವರ ಮಕ್ಕಳು ಬೇಡಬೇಕು; ಈ ಚಂದ್ರಗುಪ್ತನೂ ರಾಜ್ಯಭಾರ ಮಾಡುವುದೆಂದರೆ ಮತ್ತೇನು ಉಳಿಯಿತು? ಇಷ್ಟಾದುದು ಸಾಲದು, ಇನ್ನೂ ಇವರೊಳಗೆ ಹಗೆ ಹೆಚ್ಚಿಬರುವಂತೆ ಮಾಡಬೇಕು' ಎಂದು ನೆನಸಿ, ವಿರಾಧಗುಪ್ತನನ್ನು ನೋಡಿ,—'ನಿನ್ನೊಡನೆ ಈ ಕರಭಕನನ್ನೂ ಕಳುಹಿಸುತ್ತೇನೆ; ನೀನು ಇದುವೆ ವೇಷದಿಂದ ಪುನಃ ಪಾಟಲೀಪುರಕ್ಕೆ ಹೋಗಿ, ಅಲ್ಲಿ ನಡೆದ ವಿಶೇಷ ವಿಷಯಗಳನ್ನು ಇವನ ಮೂಲಕ ಇಲ್ಲಿಗೆ ತಿಳಿಸು,' ಎಂದು ಹೇಳಿ, ಕರಭಕನನ್ನು ಕರೆದು—'ನೋಡು! ಚಂದ್ರಗುಪ್ತನ ಓಲಗದಲ್ಲಿರುವ ಕಲಶಕ ವಿಜಯರೆಂಬ ವಂದಿಗಳು ನಮ್ಮ ಕಡೆಯವರು, ಚಂದ್ರಗುಪ್ತ ಚಾಣಕ್ಯರಿಗೇನಾದರೂ ಸಭೆಯಲ್ಲಿ ಮಾತಿಗೆ ಮಾತು ಬರುವ ಸಂಭವವಿದ್ದರೆ, ಸಂಭವವನ್ನು ನೋಡಿಕೊಂಡು, ಮತ್ತಷ್ಟು ಅವರೊಳಗೆ ಹಿಡಿದು ಬರುವಂತೆ ಸ್ತುತಿಪಾಠಗಳಿಂದ ಹೊಗಳುವಂತೆ ಅವರೊಡನೆ ಹೇಳು, ಈ ಕುದುರೆಗಳನ್ನು ಹತ್ತಿಕೊಂಡು ನೀವಿಬ್ಬರೂ ಹೋಗಿರಿ ಎಂದು ಕಳುಹಿಸಿದನು. ಅವರು ನೆಟ್ಟನೆ ಕುಸುಮಪುರಕ್ಕೆ ಬಂದು ಆ ವಂದಿಗಳನ್ನು ಕಂಡು, ಅಮಾತ್ಯನ ಹೇಳಿಕೆಯನ್ನು ತಿಳಿಸಿದರು.

ಅಮಾತ್ಯನು ಮುಂದಣ ರಾಜಕಾರ್ಯವನ್ನು ಆಲೋಚಿಸುತ್ತ ಬಿಡಾರದಲ್ಲಿ ಕುಳಿತುಕೊಂಡಿದ್ದನು. ಆ ಸಮಯದಲ್ಲಿ ಮೂರು ಮಂದಿ ಪರದೇಶದ ವರ್ತಕರು ಬಂದು ಮನೆಯ ಬಳಿಯಲ್ಲಿ ನಿಂದು—'ನಾವು ಪರವೂರಿನಿಂದ ಬಂದ ವ್ಯಾಪಾರಿಗಳು, ನಮ್ಮಲ್ಲಿ ಬೇಕುಬೇಕಾದ ರೀತಿಯ ಆಭರಣಗಳೆಲ್ಲ ಇವೆ, ನಿಮ್ಮ ಯಜಮಾನರಿಗೆ ತಿಳಿಸಿರಿ' ಎಂದು ಕಾವಲುಗಾರರೊಡನೆ ಹೇಳಿದರು. ಅವರು ಒಳಗೆ ಬಂದು ತಿಳಿಸಿ, ಅಪ್ಪಣೆಯ

ಪ್ರಕಾರ ಹೊರಗೆ ಹೋಗಿ, ಆ ವರ್ತಕರನ್ನು ಒಳಗೆ ಕರೆದುಕೊಂಡು ಬಂದರು. ರಾಕ್ಷಸನು ಅವರ ಕೈಯಲ್ಲಿರುವ ಮೂರು ಕರಡಿಗೆಗಳ ಆಭರಣ ಗಳನ್ನೂ ನೋಡಿ, 'ಚಿಂತೆಯಿಲ್ಲ, ಯೋಗ್ಯವಾದ ಒಡವೆಗಳು ಎಂದು ನೆನಸಿ, 'ಇವುಗಳ ಕ್ರಯವನ್ನು ಕೊಟ್ಟು, ತೆಗೆದು ಪೆಟ್ಟಿಗೆಯಲ್ಲಿಟ್ಟು ಬಿಡು' ಎಂದು ಶಕಟದಾಸನೊಡನೆ ಹೇಳಿದನು; ಅವನು ಹಾಗೆಯೆ ಮಾಡಿದನು.

ಇತ್ತ ಈ ರೀತಿಯಲ್ಲಿರಲು, ಅತ್ತ ಪಾಟಲೀಪುರದಲ್ಲಿ ಚಂದ್ರಗುಪ್ತನು ಮಿತಪರಿವಾರದೊಡನೆ ಬಂದು ಸುಗಾಂಗ ಪ್ರಸಾದವನ್ನೇರಿ, ಪೀಠದಲ್ಲಿ ಕುಳಿತು, ನಾಲ್ಕು ದಿಕ್ಕುಗಳನ್ನೂ ನೋಡುತಿದ್ದನು. ಬೀದಿ ಮಾಳಿಗೆ ಗಳೆಲ್ಲ ಎಂದಿನಂತೆಯೆ ಅಲಂಕೃತವಾಗದೆಯೆ ಇದ್ದುವು. ಆಗಲವನು ಬಳಿಯ ಊಳಿಗದವನನ್ನು ನೋಡಿ—'ಏನು! ಕೌಮುದೀ ಮಹೋತ್ಸವದ ಕುರುಹುಗಳೊಂದೂ ಕಾಣಿಸುವುದಿಲ್ಲ? ನಮ್ಮ ಅಪ್ಪಣೆಯಂತೆ ನಡೆದು ಕೊಳ್ಳುವ ಇಷ್ಟವು ಪಟ್ಟಣಿಗರಿಗಿಲ್ಲವೇ?' ಎಂದು ಕೇಳಿದನು.

ಊಳಿಗದವನು—ಸ್ವಾಮೀ! ಅಪ್ಪಣೆಯಂತೆ ನಡೆಯದಿರುವುದೆಂದ ರೇನು? ಆದರೆ ಅರಿಕೆಮಾಡಿಕೊಳ್ಳಲಿಕ್ಕೆ ಭಯಪಡುತ್ತೇನೆ.

ಚಂದ್ರ—ಹಾಗೆಂದರೇನು, ಚಾಣಕ್ಯರು ಅಡ್ಡಿಮಾಡಿದರೆ?

ಊಳಿ—ಬುದ್ಧೀ! ಹೌದು.

ಚಂದ್ರ—ನೀನು ಹೋಗಿ ನಮ್ಮ ಯಜಮಾನರ ಬಳಿಯಲ್ಲಿ ನಿಂತು 'ಚಂದ್ರಗುಪ್ತನು ತಮಗೆ ತಲೆ ಬಗ್ಗಿಸಿ, ನಮಸ್ಕಾರ ಮಾಡಿದನು. ಸಮಯ ವಿದ್ದರೆ ಬರಬೇಕಂತೆ,' ಎಂದು ಹೇಳಿ ಕರೆದುಕೊಂಡು ಬಾ.

ಊಳಿಗದವನು 'ಅಪ್ಪಣೆ' ಎಂದು ಹೊರಟು, ಚಾಣಕ್ಯನ ಪರ್ಣ ಶಾಲೆಗೆ ಬಂದು, ಉರಿಯುವ ಕಿಚ್ಚಿದೊಂದು ಮೂರ್ತಿಯೆಂಬಂತೆ ದರ್ಭಾ ಸನದ ಮೇಲೆ ಕುಳಿತು, ಶಿಷ್ಯರಿಗೆ ಧರ್ಮೋಪದೇಶವನ್ನು ಮಾಡುತ್ತಿರುವ ಮುನಿಗೆ ಕೈಮುಗಿದು—'ಜೀಯಾ!' ಎಂದು ದೂರದಲ್ಲಿಯೆ ಬಾಯಿಗೆ ಕೈ ಹಿಡಿದುಕೊಂಡು ನಿಂತನು.

ಚಾಣ—ಏನು ಬಂದೆ?

ಊಳಿ—ಬುದ್ಧೀ! ರಾಯರು ಮಹಾತ್ಮರ ಪಾದಗಳಿಗೆ ತಲೆಯಿಂದ ಅಡ್ಡಬಿದ್ದರು; ಇಲ್ಲಿ ವಿಶೇಷ ಕಾರ್ಯವಿಲ್ಲದಿದ್ದರೆ ಒಮ್ಮೆ ತಮ್ಮ ದರ್ಶನ ವಾಗಬೇಕೆಂದು ಹೇಳಿ, ಸುಗಾಂಗ ಪ್ರಸಾದದಲ್ಲಿ ಬಂದು ಕುಳಿತಿರುವರು.

ಚಾಣ—ಅವನು ಮಾಡಿದ ನಮಸ್ಕಾರವು ದೇವರಿಗೆ ಸಲಲಿ; ಅರಸು ನಮಗೀಗ ಆಳನ್ನು ಕಳುಹಿಸಿದ್ದಾನೆ! ಹಾಗಾದರೆ ನಾವೇ ಉತ್ಸವವನ್ನು ನಿಲ್ಲಿಸಿದವರೆಂದು ನಿಮ್ಮಲ್ಲಿ ಯಾರೋ ಅವನಿಗೆ ಕಿವಿಸುರಿದಿರಬೇಕು.

ಊಳಿಗದವನು ಗಡಗಡನೆ ನಡುಗಿ—ಬುದ್ಧೀ! ಇಲ್ಲ; ಅವರೆ ಉಪ್ಪರಿಗೆಯಲ್ಲಿ ಕುಳಿತು ಸುತ್ತು ಮುತ್ತು ನೋಡಿ ತಿಳಿದುಕೊಂಡರು.

ಚಾಣ—ಹೌದು! ಹೌದು! ನೀವೆಲ್ಲ ಕೂಡಿ, ಅವನಿಗೆ ಏನೇನೊ ಕರ್ಣಮಂತ್ರವನ್ನು ಹೇಳಿ ನಮ್ಮಲ್ಲಿರುವ ಪೂಜ್ಯಬುದ್ಧಿಯನ್ನು ತಪ್ಪಿಸಿದಿರಲ್ಲವೆ? ಆಗಲಿ, ಅದರಿಂದೇನು?' ಎಂದು ತನ್ನ ಪ್ರಧಾನ ಶಸ್ತ್ರವನ್ನು ಕೈಯಲ್ಲಿ ಹಿಡಿದುಕೊಂಡು ಹೊರಟು ಬಂದನು.

## ೧೩. ಅಂತಃಕಲಹ

ಚಂದ್ರಗುಪ್ತನು ಚಂದ್ರಶಾಲೆಯ ಮೇಲೆ ಸಿಂಹಾಸನಾರೂಢನಾಗಿ ಕುಳಿತುಕೊಂಡು, ಬೀದಿಗಳನ್ನು ಅತ್ತಿತ್ತ ನೋಡುತ್ತಿರುವಾಗ, ಚಾಣಕ್ಯನು ದೂತನೊಡನೆ ಮಾಳಿಗೆಯನ್ನು ಏರಿ ಬರುವುದನ್ನು ಕಂಡು, ದಿಗ್ಗನೆದ್ದು ಬಂದು ದಂಡಪ್ರಣಾಮವಾಗಿ ನಮಸ್ಕರಿಸಿದನು.

ಚಾಣ—ಸರ್ವೋತ್ತಮನಾಗಿಯೂ, ಆಯುಷ್ಮಂತನಾಗಿಯೂ ಬಾಳು.

ಚಂದ್ರ—'ವೇದತುಲ್ಯವಾದ ತಮ್ಮ ಆಶೀರ್ವಾದ ಬಲದಿಂದ ಇದುವರೆಗೂ ಹಾಗೆಯೆ ಇದ್ದೇನೆ; ಕುಳಿತುಕೊಳ್ಳಬೇಕು,' ಎಂದು ಸುವರ್ಣ ಪೀಠವನ್ನು ಮುಂದಿರಿಸಿದನು.

ಚಾಣಕ್ಯನು ಕುಳಿತುಕೊಂಡು—ಈಗ ನಮ್ಮನ್ನು ಕರೆಯಿಸಿದ ಕಾರ್ಯವೇನು?

ಚಂದ್ರ—ತಮ್ಮ ದರ್ಶನದಿಂದ ಧನ್ಯನಾಗಬೇಕೆಂದು.

ಚಾಣ—ಈ ರಂಗಿನ ಮಾತುಗಳೆಲ್ಲ ಬೇಡ; ಕಾರಣವಿಲ್ಲದೆ ಕಾರ್ಯವಿದೆಯೇ?

ಚಂದ್ರ—ಹಾಗಾದರೆ ಕೇಳಿರಿ; ನೀವು ಕೌಮುದೀ ಮಹೋತ್ಸವವನ್ನು ನಿಲ್ಲಿಸಿದಿರಂತೆ; ಯಾಕೆ?

ಚಾಣ—ಹಾಗಾದರೆ ನೀನು ನಮ್ಮನ್ನು ವಿಚಾರಿಸಲಿಕ್ಕೆ ಕರೆಯಿಸಿದೆ.

ಚಂದ್ರ—ವಿಚಾರಿಸುವುದಕ್ಕಲ್ಲ; ಅರಿಕೆ ಮಾಡಿಕೊಳ್ಳಲಿಕ್ಕೆ.

ಚಾಣ—ಅರಸನೆ! ಚಾಣಕ್ಯನು ಕನಸಿನಲ್ಲಾದರೂ ಪ್ರಯೋಜನವಿಲ್ಲದ ಕಾರ್ಯಕ್ಕೆ ಕೈಹಾಕನೆಂದು ನಿನಗೆ ಗೊತ್ತಿಲ್ಲವೆ?

ಚಂದ್ರ—ಸ್ವಾಮಿ! ಅದನ್ನು ತಿಳಿಯಲಿಕ್ಕೆಂದೆ ಕರೆಯಿಸಿದೆನು.

ಚಾಣ—ಹಾಗಾದರೆ ಕೇಳು—ಸ್ವಾಯತ್ತ, ಸಚಿವಾಯತ್ತ, ಉಭಯಾಯತ್ತ ಎಂದು ದಂಡನೀತಿ ಶಾಸ್ತ್ರದಲ್ಲಿ ಸಿದ್ಧಿ ಮೂರು ವಿಧವಾಗಿದೆ. ನೀನು ಸಚಿವಾಯುತ್ತ ಸಿದ್ಧಿಯುಳ್ಳವನು; ಆದುದರಿಂದ ನಿನಗೆ ಫಲದ ವಿಚಾರವು ಯಾಕೆ? ಏನಿದ್ದರೂ ನಾವೆ ನೋಡಿಕೊಳ್ಳುತ್ತೇವೆ.

ಆಗ ಚಂದ್ರಗುಪ್ತನು ಕೋಪದಿಂದ ಮೋರೆಯನ್ನು ತಿರುಗಿಸಿಬಿಟ್ಟನು.

ಇದುವೆ ಸಮಯವೆಂದು ಆ ಕಲಶಕ ವಿಜಯರೆಂಬ ವಂದಿಗಳು, ರಾಯನ ಮುಂದೆ ನಿಂದು ಮೊದಲನೆಯವನು—'ಮಾನಶಾಲಿಗಳೆಂಬ ನಕ್ಷತ್ರಗಳ ನಡುವೆ, ತಾನು ತಾನಾಗಿ ಬೆಳಗುವ ಚಂದ್ರನಂತೆ; ನೀನಖಿಲ ರಾಜ ತಾರಾಗಣದ ನಡುವಿನಲಿ, ಕಾಣಿಸುವೆ ನಮ್ಮೊಡೆಯ ಜೀಯಾ! ಪರಾಕು, ಎಂದೂ, ಎರಡನೆಯವನು—'ಮದಗಜವ ಬಡಿದು ಮುಕ್ಕುವ ಸಿಂಹರಾಜನಿಗೆ, ಇದಿರಾಗಿ ಜಿಂಕೆಗಳು ಬಂದು ನಿಂದು, ಬದುಕುವುವೆ? ನಿನ್ನ ತೆರದ ರಸನಾಜ್ಞಾಭಂಗ, ಒದಗಿರಲದೆಂತು ಸೈರಿಸುವುದುಂಟೆ? ವಸ್ತ್ರಭೂಷಣಗಳನ್ನು ಧರಿಸಿಕೊಂಡಿರಲಷ್ಟು ಮಾತ್ರಕ್ಕೆ ಮಾನವನು ಪ್ರಭುವಾದನೆ? ಅತ್ಯಧಿಕವಾದ ಆಜ್ಞಾಶಕ್ತಿಯುಳ್ಳವನೆ ಧಾತ್ರೀಶ ನಿನ್ನಂತೆ ಬಹು ಪರಾಕು! ಎಂದೂ ಹೊಗಳಿದರು.

ವಂದಿಗಳು ಹೊಗಳುವುದನ್ನು ಕೇಳಿ ಚಾಣಕ್ಯನು ಮನಸ್ಸಿನಲ್ಲಿ—'ಇವರು ರಾಕ್ಷಸನ ಕಡೆಯವರು, ನಮ್ಮೊಳಗೆ ಮನಸ್ತಾಪವು ಹೆಚ್ಚಿ ಬರಬೇಕೆಂಬುದೆ ಈ ಹೊಗಳಿಕೆಯ ಅಭಿಪ್ರಾಯವು; ಇರಲಿ, ಆ ರಾಕ್ಷಸನು ಎಲ್ಲಿಗೆ ಹೋದನು?' ಎಂದು ಯೋಚಿಸುತಿದ್ದನು.

ಆಗ ಚಂದ್ರಗುಪ್ತನು—ಈ ವಂದಿಗಳಿಗೆ ಸಾವಿರ ಸಾವಿರ ಮೋಹರಗಳನ್ನು ಕೊಡಿರೆಂದು ಉಗ್ರಾಣದವರಿಗೆ ಹೇಳಿದನು.

ಚಾಣ—ವೃಷಲನೆ! ಇದೇನು ದುಂದುಗಾರಿಕೆ? ದ್ರವ್ಯವನ್ನು ಸಂಗ್ರಹಿಸಬೇಕಾದರೆ ಎಷ್ಟು ಶ್ರಮವಿದೆ ಎಂಬುದು ಸಂಪಾದಿಸುವವರಿಗೆನೆ ಗೊತ್ತು; ಅದೆಲ್ಲ ನಿನ್ನ ಹಾಗಿರುವವರಿಗೇನು ಗೊತ್ತು? ಕೊಡಕೂಡದು.

ಚಂದ್ರ—ಇದೇನು? 'ಮನಸ್ಸಿಲ್ಲದ ಅತ್ತೆಗೆ ಉಪ್ಪಿನ ಕಾಯಿಯಲ್ಲಿ ಕಲ್ಲು' ಎಂಬಂತೆ, ನಾನು ಏನು ಹೇಳಿದರೂ ಅದಕ್ಕೆ ನಿಮ್ಮದೊಂದು ಅಡ್ಡಿ ಇದ್ದೇ ಇದೆ. ಹಾಗಾದರೆ ಇದು ಅರಸುತನವಲ್ಲ. ನನಗೊಂದು ಸೆರೆಮನೆ. ಚಾಣ—ಹೌದೊ! ತಾನು ಮಾಡಿದುದನ್ನು ಮೆಚ್ಚ ಮಾಡದೆ, ಇನ್ನೊಬ್ಬರು ಮಾಡಿಟ್ಟಿರುವುದನ್ನು ತಿಂದುಕೊಂಡಿರುವುದು ಹಾಗೆಯೆ. ನಾನು ಹೀಗೆ ಹೇಳಿದ ಮಾತು ಅಪಮಾನವೆಂದು ನೀನು ಗ್ರಹಿಸುವುದಾದರೆ, ನಿನ್ನ ರಾಜ್ಯವಿಚಾರವನ್ನೆಲ್ಲ ನೀನೆ ನೋಡಿಕೊ.

ಚಂದ್ರ—ಸ್ವಾಮಿ! ಆದೀತು. ಹಾಗಾದರೆ ನನ್ನ ರಾಜ್ಯ ವಿಚಾರ ವನ್ನು ನೋಡಿಕೊಳ್ಳಲಿಕ್ಕೆ ನಾನು ಸಾಕು.

ಚಾಣ—ಹಾಗಾದರೆ ಇನ್ನು ಮುಂದೆ ನಮ್ಮ ಮೇಲೆ ಯಾವ ಭಾರವೂ ಇಲ್ಲ; ಹಾಗೆಯೆ ಮಾಡಿಕೊ; ನಮ್ಮ ದಾರಿಯನ್ನು ನಾವು ನೋಡಿಕೊಳ್ಳುತ್ತೇವೆ.

ಚಂದ್ರ—ನಾನು ಉತ್ಸವವನ್ನು ನಿಲ್ಲಿಸಲಿಕ್ಕೆ ಕಾರಣವೇನೆಂದು ಕೇಳಿ ಬಿಟ್ಟುದು ದೊಡ್ಡ ತಪ್ಪಾಗಿ ಹೋಯಿತಲ್ಲವೆ ?

ಚಾಣ—ನಿನ್ನ ಈ ಸುಟ್ಟ ಉತ್ಸವವನ್ನು ಮಾಡದೆ ಇದ್ದರೆ ಅದರಿಂದ ಯಾವ ಮಹತ್ಕಾರ್ಯವು ಕೆಟ್ಟು ಹೋಗುತ್ತದೆಯೊ? ದೋಷವೇನು?

ಚಂದ್ರ—ನನ್ನ ಮಾತೊಂದು ಹಾಳಾಗುವುದು ದೋಷವಲ್ಲವೆ ?

ಚಾಣ—'ನಿನ್ನ ಮಾತು ಹಾಳಾಗುವುದೆ ಮೊದಲನೆಯ ಪ್ರಯೋಜ ನವು; ರಾಜಾಧಿರಾಜರೆಲ್ಲ ಯಾವಾತನ ಬಾಯಿಂದ ಬಿದ್ದ ಮಾತನ್ನು ಮಹಾಪ್ರಸಾದವೆಂದು ತಮ್ಮ ತಲೆಯ ಮೇಲೆ ಧರಿಸುತ್ತಿರುವರೊ, ಅಂತಹ ನಿನ್ನ ಅಪ್ಪಣೆ ನಮ್ಮಲ್ಲಿ ಒಂದು ಕಸಕ್ಕೆ ಸಮವೆಂದರೆ, ನಿನ್ನ ಪ್ರಭುತ್ವವು ವಿನಯದಿಂದ ಅಲಂಕೃತವಾಗಿ, ನಿನಗೆ ಕೀರ್ತಿಯುಂಟಾದೀತು; ಇದು ನಿನಗೊಂದು ಮರ್ಯಾದೆ. ಎರಡನೆಯ ಪ್ರಯೋಜನವೇನೆಂದರೆ— ಈ ಕಾಗದವನ್ನು ನೋಡು, ಎಂದು ಸೊಂಟದಲ್ಲಿ ಕುತ್ತಿಕೊಂಡಿದ್ದ ಭದ್ರಭಟಾದಿಗಳ ಕಾಗದವನ್ನು ಕೊಟ್ಟನು. ಅದರಲ್ಲಿ

ಶ್ರೀಮಾನ್ ಚಂದ್ರಗುಪ್ತ ಮಹಾರಾಯರ ದಿವ್ಯಸನ್ನಿಧಿಯಲ್ಲಿ—ಭದ್ರಭಟಾದಿ ಸೇನಾಪತಿಗಳು ಬರೆದು ಒಪ್ಪಿಸಿದ ನಿವೇದನ ಪತ್ರಿಕೆ.

**ನಾವೆಲ್ಲರೂ ಕೋಪಿಸಿಕೊಂಡು ಹೋದವರಂತೆ ಪಾಟಾಲೀಪುರದಿಂದ ಹೊರಟು, ದೇಶಾಂತರದಲ್ಲಿ ಹೋಗಿ, ನಿಮ್ಮ ಕಾರ್ಯದಲ್ಲಿ ಜಾಗ್ರತೆಯುಳ್ಳವರಾಗಿಯೂ ಭೃತ್ಯ ಭಾವವುಳ್ಳವರಾಗಿಯೂ ಇರುತ್ತೇವೆ.**

ಎಂದು ಬರೆದಿತ್ತು. ಅದನ್ನು ನೋಡಿಕೊಂಡು—

ಚಂದ್ರ—ಸೇನಾಪತಿಗಳೆಲ್ಲರೂ ಇಲ್ಲಿಂದ ಬಿಟ್ಟು ಹೊರಟು ಹೋಗಲಿಕ್ಕೆ ಕಾರಣವೇನು?

ಚಾಣ—ಭದ್ರಭಟ ಪುರುಷದತ್ತರು ಸ್ತ್ರೀಮದ್ಯದ್ಯೂತಾಶಕ್ತರು; ಆದುದರಿಂದ ಅವರನ್ನು ಕೆಲಸದಿಂದ ತೆಗೆಯಬೇಕಾಯಿತು. ರಾಜಸೇನನೂ, ಡಿಂಗಿರಾತನೂ ಏನು ಕಾರಣವೊ? ಅವರೇ ಮಲಯಕೇತುವನ್ನು ಆಶ್ರೈಸಿಕೊಂಡು ಹೋಗಿರಬಹುದು. ಬಾಗುರಾಯಣನೊಬ್ಬನು ಅಂದೆ ಅಲ್ಲ ಸಲ್ಲದ ಮಾತುಗಳಿಂದ ಮಲಯಕೇತುವಿನ ಕಿವಿ ತುಂಬಿಸಿ, ಇಲ್ಲಿಂದ ಕರೆದುಕೊಂಡು ಹೋಗಿ ಅವನ ಮಂತ್ರಿಯಾಗಿದ್ದಾನೆ. ಲೋಹಿತಾಕ್ಷ ವಿಜಯ ವರ್ಮರು ಅನ್ಯರ ಅಭಿವೃದ್ಧಿಯನ್ನು ಸಹಿಸಲಾರದ ಹೊಟ್ಟೆಕಿಚ್ಚಿನವರು; ಆದುದರಿಂದ ತಾವಾಗಿಯೆ ಹೊರಟು ಹೋದರು. ಇವರೆಲ್ಲರ ದುರ್ಬೋಧನೆಗಳಿಂದ ಉಳಿದವರು ಹೋಗಿರಬಹುದು. ಮುಖ್ಯ ಕಾರಣವಿಷ್ಟೆ.

ಚಂದ್ರ—ಹಾಗಾದರೆ ಇವರೆಲ್ಲರೂ ನಿಮ್ಮ ದೃಷ್ಟಿಯಿಂದ ಅಪರಾಧಿಗಳು; ಎಂದ ಮೇಲೆ ಯಾಕೆ ಸುಮ್ಮನೆ ಬಿಟ್ಟಿರಿ? ಸಾಮರ್ಥ್ಯವಿಲ್ಲದೆಯೊ? ಕಾರ್ಯಕ್ಕಾಗಿಯೊ?

ಚಾಣ—ಏನು? ಸಾಮರ್ಥ್ಯವಿಲ್ಲದೆ! ಕಾರ್ಯಕ್ಕಾಗಿ ದಂಡಿಸಲಿಲ್ಲ. ಇವರನ್ನು ದಂಡಿಸಿದರೆ, ನಂದರಲ್ಲಿ ಅನುರಕ್ತರಾದವರಿಗೆ ನಮ್ಮ ವಿಷಯದಲ್ಲಿರುವ ಭೀತಿ ಹೋಗದು ಎಂಬುದರಿಂದ ಬಿಟ್ಟುಬಿಟ್ಟೆನು.

ಚಂದ್ರ—ಹಾಗಾದರೆ ಅವರನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಬಹುದಾಗಿತ್ತಲ್ಲ?

ಚಾಣ—ಒಮ್ಮೆ ಕೆಲಸದಿಂದ ತೆಗೆದು, ಪುನಃ ಅವರನ್ನೆ ಇಟ್ಟುಕೊಂಡರೆ, "ನಮ್ಮನ್ನು ಬಿಟ್ಟರೆ ಇವರಿಗೆ ಉಪಾಯವಿಲ್ಲ'' ಎಂದು ಆ ಜನರು ತಿಳಿದುಕೊಂಡಾರು: ಮತ್ತು ಇವರಲ್ಲಿ ಕೆಲವರು ಮೊದಲೆ ಬೇಕಾದಷ್ಟು ದ್ರವ್ಯಗಳನ್ನು ಕೂಡಿಸಿ ಇಟ್ಟುಕೊಂಡಿದ್ದಾರೆ. ಆದುದರಿಂದ ತಮ್ಮ ಮೇಲೆ ಎಲ್ಲಿ ತೆರಿಗೆ ಬರುವುದೊ ಎಂದು ಯೋಚಿಸಿಕೊಂಡು ಅರಸನ

ಹಾನಿಯನ್ನೆ ಬಯಸುತ್ತಿದ್ದರು. ಅಂತಹವರನ್ನು ಇಟ್ಟುಕೊಳ್ಳುವುದಾದರೂ ಹೇಗೆ? ಇವರೆಲ್ಲರೂ ಹೋಗಿ ಮಲಯಕೇತುವನ್ನು ಸೇರಿ, ಪುನಃ ನಮ್ಮ ಮೇಲೆ ದಂಡೆತ್ತಿಕೊಂಡು ಬರುವ ಯೋಚನೆಯಲ್ಲಿರುವಾಗ ಕೋಟೆ ಕೊತ್ತಳಗಳನ್ನು ಭದ್ರಪಡಿಸಿ, ಸೈನ್ಯಗಳನ್ನು ಸಿದ್ಧಗೊಳಿಸಿಕೊಂಡಿರುವುದು ಬಿಟ್ಟು, ನಿನಗೀಗ ಕೌಮುದೀ ಮಹೋತ್ಸವದ ಹುಚ್ಚು ತಲೆಗೆ ಏರಿ ಕೊಂಡಿದೆ; ಏನು ಹೇಳಬೇಕು? ಇದಕ್ಕಾಗಿಯೆ ಉತ್ಸವವನ್ನು ನಿಲ್ಲಿಸಿದೆನು.

ಚಂದ್ರ—ಹಾಗಾದರೆ ಈ ಅನರ್ಥಗಳಿಗೆಲ್ಲ ಮೂಲಕಾರಣನಾದ ಮಲಯಕೇತುವನ್ನು ಇಲ್ಲಿಂದಲೆ ಕೊಂದು ಬಿಡದೆ ಹೋಗಲಿಕ್ಕೆ ಯಾಕೆ ಬಿಟ್ಟಿರಿ?

ಚಾಣ—ಮಲಯಕೇತುವನ್ನು ಕೊಂದುಬಿಟ್ಟರೆ ಪರ್ವತರಾಯ ನನ್ನೂ ನಾವೇ ಕೊಲ್ಲಿಸಿದವರು, ಎಂಬುದೊಂದು ಅಪವಾದವು ನಮ್ಮ ತಲೆಯ ಮೇಲೆ ಬರುತ್ತದೆ; ಕೊಲ್ಲದೆ ಅರ್ಧರಾಜ್ಯವನ್ನು ಅವನಿಗೆ ಕೊಟ್ಟಿದ್ದರೆ, ಅಪವಾದ ಮಾತ್ರ ತಪ್ಪುತಿತ್ತು; ಅದರೊಂದಿಗೆ ಅರ್ಧರಾಜ್ಯವೂ ತಪ್ಪುತಿತ್ತು, ಆದುದರಿಂದ ಬಿಟ್ಟೆವು.

ಚಂದ್ರ—ಇದು ಹೀಗಾಯಿತು. ಅಮಾತ್ಯನನ್ನು ಯಾಕೆ ಹೋಗಲಿಕ್ಕೆ ಬಿಟ್ಟಿರಿ?

ಚಾಣ—ಅವನು ಬಹು ಕಾಲದಿಂದ ನಂದರ ಮಂತ್ರಿಯಾಗಿದ್ದನು; ಪ್ರಜಾರಂಜಕನೂ, ಬುದ್ಧಿ ಬಲ ಪೌರುಷಯುಕ್ತನೂ ಆದ ರಾಕ್ಷಸನು ಇಲ್ಲಿಯೆ ಇದ್ದರೆ, ನಮ್ಮೊಳಗೆಯೆ ಏನಾದರೂ ಕಸಟಿನ ಬೀಜವನ್ನು ತಂದು ಹಾಕಿಯಾನು; ಹೊರಗಿದ್ದರೆ, ಇಲ್ಲಿನ ಗುಟ್ಟು ಅವನಿಗೆ ಹೇಗೆ ಗೊತ್ತಾದೀತು? ಬೇಕಾದರೆ ಹೇಗಾದರೂ ಮಾಡಿ, ಅವನನ್ನು ಹಿಡಿದು ತರಬಹುದು ಎಂದು ನೆನಸಿ ಬಿಟ್ಟೆವು.

ಚಂದ್ರ—ಬಿಟ್ಟುದೇನು? ಹಿಡಿದುಕೊಳ್ಳಲಿಕ್ಕೆ ನಿಮ್ಮಿಂದ ಆಗಲಿಲ್ಲ ವೆಂದು ಹೇಳಿರಿ.

ಚಾಣ—ಏನು ಹೇಳುವೆಯೊ? ರಾಕ್ಷಸನೆಂದರೆ ಸಾಮಾನ್ಯನಲ್ಲ, ಮಹಾ ಪರಾಕ್ರಮಿ, ಹಿಡಿಯಲಿಕ್ಕೆಂದು ಹೋದರೆ, ನಿಷ್ಕಾರಣವಾಗಿ ನಿನ್ನ ಸೈನ್ಯವು ನಾಶವಾಗುತ್ತದೆ; ಅವನು ಮಾನವಂತನಾದುದರಿಂದ, ಸಿಕ್ಕಿ

ಬೀಳುವ ಸಂಭವವು ಕಂಡುಬಂದರೆ, ತನ್ನ ಪ್ರಾಣವನ್ನಾದರೂ ಕಳೆದು ಕೊಳ್ಳಲಿಕ್ಕೂ ಸಾಕು. ಮುಂದೆ ಅವನಿಂದ ನಮಗೆ ಕೆಲಸವಿದೆ, ನಿನ್ನ ಸೈನ್ಯವು ನಾಶವಾದರೂ ಇಲ್ಲವೆ ಅವನು ಆತ್ಮಹತ್ಯೆ ಮಾಡಿಕೊಂಡರೂ ಪೆಟ್ಟಿರಡೂ ನಿನಗೆಯೆ ಎಂದು ಬಲಾತ್ಕರಿಸದೆ ಬಿಟ್ಟೆವು.

ಚಂದ್ರ—ನೀವು ಎಷ್ಟೆ ಹೇಳಿರಿ; ರಾಕ್ಷಸನು ನಿಮಗಿಂತಲೂ ಒಂದು ತೂಕ ಬಲವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಚಾಣ—ಹೌದೋ? ರಾಕ್ಷಸನು ಬುದ್ಧಿವಂತನೆಂದು ಹೇಳಿದ ಮೇಲೆ ನಾವು ಬುದ್ಧಿಹೀನರೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ? ನಿನ್ನ ರಾಕ್ಷಸನು ಬುದ್ಧಿವಂತನಾಗಿ ಮಾಡಿದುದಾದರೂ ಏನು?

ಚಂದ್ರ—ಮಾಡಿದುದೇನೊ? ಅವನು ಇಲ್ಲಿರುವಾಗ ನಮ್ಮನ್ನು ಕೆಳಗೆ ಮೇಲೆ ಮಾಡುತಿದ್ದನು; ಗುಣಕ್ಕೆ ಮತ್ಸರವುಂಟೆ? ನನಗೆ ಕರ್ತೃತ್ವ ಶಾಲಿಗಳಲ್ಲಿಯಲ್ಲದೆ ಮತ್ತೊಬ್ಬರಲ್ಲಿ ಸ್ವಜನಾಭಿಮಾನವಿಲ್ಲ.

ಚಾಣ—ಸರಿ, ಸರಿ, ಹೌದು! ರಾಕ್ಷಸನು ಮಾಡಿದುದು ಇಷ್ಟೆ ಅಲ್ಲವೆ? ನಿನ್ನ ವೈರಿಗಳಾದ ಆ ನಂದರ ಬೀಜವನ್ನು ಹುರಿದು, ನಾವು ಈ ರಾಜ್ಯಾಧಿಪತ್ಯವನ್ನು ನಿನಗೆ ಕೊಟ್ಟಂತೆ, ಅವನು ನಿನ್ನನ್ನು ಬಿಟ್ಟು ಮಲಯಕೇತುವನ್ನು ಹಿಡಿದು, ಈ ರಾಷ್ಟ್ರಾಧಿಪತ್ಯವನ್ನು ಅವನಿಗೇನಾ ದರೂ ಕೊಟ್ಟನೇ?

ಚಂದ್ರ—ನನ್ನ ಅದೃಷ್ಟದಿಂದ ನನಗೆ ಈ ರಾಜ್ಯವು ಕೈವಶವಾಯಿ ತೆಂದು ನೆನಸದೆ ನೀವು ಯಾವಾಗಲೂ ಹೀಗೆಲ್ಲ ತಲೆಯ ಮೇಲೆ ಕೈಹಾಕಿ ಮಾತನಾಡುವುದೇನು?

ಚಾಣ—ಬೇಡಾ! ನೋಡು! ಆ ನಂದರನ್ನು ಧ್ವಂಸಮಾಡದೆ, ಈ ಬಿಚ್ಚಿಹೋದ ಜುಟ್ಟನ್ನು ಕಟ್ಟುವುದಿಲ್ಲನೆಂದು ಶಪಥಮಾಡಿ ನಿನ್ನ ರಾಕ್ಷಸನು ನೋಡುತ್ತಿರುವಾಗಲೆ ಅವರ ತುಪ್ಪುಳನ್ನು ತೂರಿದರೂ ಇನ್ನೂ ನನ್ನ ಕೋಪವು ಇಳಿಯಲಿಲ್ಲ.

ಚಂದ್ರ—ಈ ಬಾಯಿಬಡಿಕತನವಲ್ಲ ಯಾಕೆ ಸ್ವಾಮಿ! ನಮ್ಮಿಂದೆಲ್ಲ ಏನಾದೀತು? ಅವರಿಗೆ ಕಾಲ ಬಂದಿತ್ತು.

ಚಾಣ—ಕಾಲ, ಕಾಲ ಎಂದು ಪೌರುಷವಿಲ್ಲದವರು ಹೇಳುವುದು.

ಚಂದ್ರ —'ಏನು ಸ್ವಾಮೀ! ತಿಳಿವಳಿಕೆಯುಳ್ಳವರು ಹೀಗೆಲ್ಲ ತಮ್ಮನ್ನು ತಾವೆ ಹೊಗಳಿಕೊಂಡಾರೆ?

ಚಾಣ—'ಏನು! ಕೂಲಿಗಳಲ್ಲಿ ಮಾತನಾಡಿದಂತೆ ನಮ್ಮಲ್ಲಿಯೂ ಆಡುವೆ? ಪುನಃ ಪ್ರತಿಜ್ಞೆಮಾಡಬೇಕೆಂದು ನಮ್ಮ ನಾಲಿಗೆ ಕುಣಿಯುತ್ತಿದೆ; ನಂದನಾಶದಿಂದ ತಣಿದ ನಮ್ಮ ಕೋಪಾಗ್ನಿಯನ್ನು ಈಗ ನೀನು ಪುನಃ ಊದಿ ಉರಿಗೊಳಿಸುವೆಯಲ್ಲವೆ?' ಎಂದು ಕಿಡಿಕಿಡಿಯಾಗಿ, ಹಲ್ಲು ಕಡಿದು, ಹುಬ್ಬು ಗಂಟಿಕ್ಕಿದನು.

ಈ ವೀರಾವೇಶವನ್ನು ನೋಡಿ ಚಂದ್ರಗುಪ್ತನು ಹೆದರಿಹೋದನು. ಅದನ್ನು ತಿಳಿದು ಚಾಣಕ್ಯನು—'ಆಯಿತೊ! ಸುಮ್ಮನೆ ಮಾತಿಗೆ ಮಾತು ಹೇಳಿ ಇನ್ನೂ ಇನ್ನೂ ಇದನ್ನು ಬಳೆಯಿಸುವುದರಿಂದ ಏನೂ ಪ್ರಯೋಜನವಿಲ್ಲ; ನಮಗಿಂತಲೂ ರಾಕ್ಷಸನೆ ಮೇಲೆ ಎಂದು ನಿನ್ನ ಮನಸ್ಸಿನಲ್ಲಿ ಆದ ಮೇಲೆ ನಾವಿನ್ನು ಇಲ್ಲಿ ಯಾಕೆ ಇರಬೇಕು? ಇಗೊ! ಈ ಪ್ರಾಧಾನ್ಯಶಸ್ತ್ರವನ್ನು ಅವನಿಗೆಯೆ ಕೊಟ್ಟು, ಅವನ ಮುಖದಿಂದಲೆ ನಿನ್ನ ರಾಜಕಾರ್ಯನಿರ್ವಾಹವನ್ನು ಮಾಡಿಸಿಕೊ; ನಮಗೇನು? ನಮ್ಮ ಮನಸ್ಸಿಗೆ ಕಂಡಂತೆ ಇರುತ್ತೇವೆ, ಎಂದು ಪ್ರಾಧಾನ್ಯಶಸ್ತ್ರವನ್ನು ಅವನ ಮುಂದಿಟ್ಟು, ಸಭೆಯಿಂದ ಹೊರಟುಹೋದನು.

ಆಗ ಚಂದ್ರಗುಪ್ತನು ಬಳಿಯಲ್ಲಿರುವ ಕಂಚುಕಿಯನ್ನು ನೋಡಿ— 'ಇಂದಿನಿಂದ ಚಾಣಕ್ಯರು ಮಂತ್ರಿಯಲ್ಲ; ಚಂದ್ರಗುಪ್ತ ಮಹಾರಾಯರೆ ಎಲ್ಲವನ್ನು ನೋಡಿಕೊಳ್ಳುವರು. ಯಾವ ಕೆಲಸವಿದ್ದರೂ ಅಧಿಕಾರಿಗಳು ಚಾಣಕ್ಯನಲ್ಲಿಗೆ ಹೋಗುವ ಅಗತ್ಯವಿಲ್ಲ, ಎಂದು ರಾಯಬೀದಿಗಳಲ್ಲಿ ಸಾರಿಸು' ಎಂದು ಹೇಳಿದನು.

ಅವನು 'ಅಪ್ಪಣೆ, ಎಂದು ಕೈ ಮುಗಿದು, ತನ್ನ ಮನಸ್ಸಿನಲ್ಲಿ,— 'ಇದೇನು, ರಾಮಾಯಣದೊಳಗೊಂದು ಪಿಟ್ಕಾಯಣವು? ಇಂದಿನ ವರೆಗೆ ಚಾಣಕ್ಯರನ್ನು 'ಯಜಮಾನರು ಯಜಮಾನರು, ಎಂದು ಹೇಳುತಿದ್ದು, ಈಗ ಚಾಣಕ್ಯನು ಎಂದು ಏಕವಚನ ಸಹ ಮಾಡಿಬಿಟ್ಟರು? ನಿಜವಾಗಿಯೂ ಚಾಣಕ್ಯರ ಅಧಿಕಾರವು ಇಲ್ಲಿಗೆ ಮುಗಿಯಿತೆಂದು ತೋರುತ್ತಿದೆ,' ಎಂದು ಯೋಚಿಸುತಿದ್ದನು.

ಆಗ ಚಂದ್ರಗುಪ್ತನು ಅವನನ್ನು ನೋಡಿ—ಏನೊ, ಬಹಳ ಆಲೋಚನೆ?

ಕಂಚುಕಿ —ಬುದ್ಧೀ! ಮತ್ತೇನೂ ಇಲ್ಲ; ಈಗ ನಮ್ಮ ಒಡೆಯರು ಸ್ವತಂತ್ರರಾದರು ಎಂದು ಯೋಚಿಸುತಿದ್ದೇನೆ.

ಚಂದ್ರ—ನಿನ್ನ ಆಲೋಚನೆಗಳೆಲ್ಲ ಸಾಕು; ಹೇಳಿದಂತೆ ಮಾಡು, ಹೋಗು ನಡೆ.

ಕಂಚುಕಿ-'ಬುದ್ಧೀ!' ಎಂದು ಹೊರಟುಹೋಗಿ ರಾಯಬೀದಿಗಳಲ್ಲಿ ಸಾರಿದನು.

## ೧೨. ಮಲಯಕೇತು ಭಾಗುರಾಯಣರ ಅಮಾತ್ಯ ಗೃಹಪ್ರವೇಶ.

ಅಮಾತ್ಯನೂ, ಶಕಟದಾಸನೂ ಬಿಡಾರದೊಳಗೆ ಕುಳಿತುಕೊಂಡು, ಮುಂದಣ ಕಾರ್ಯದಲ್ಲಿ ಹೇಗೆ ಹೇಗೆ ಮಾಡಿದರೆ ಹೇಗೆ ಹೇಗೆ ಸಾಗೀತು ಎಂಬ ವಿಷಯವಾಗಿ ಚರ್ಚಿಸುತಿದ್ದರು. ಆಗ ದೂರದಲ್ಲಿ ಬಾಯಿಗೆ ಕೈ ಹಿಡಿದು ನಿಂತಿರುವ ಕರಭಕನನ್ನು ನೋಡಿ ಅಮಾತ್ಯನು—'ಯಾರದು, ಕರಭಕನೇ? ಬಂದೆಯಾ? ಕುಳಿತುಕೊ!' ಎಂದು ಹೇಳಿ ಚಂದನದಾಸನು ಹೇಳುವ ಮಾತಿಗೆ ಪ್ರತ್ಯುತ್ತರವನ್ನು ಹೇಳುತಿದ್ದನು.

ಪಾಟಲೀಪುರದಿಂದ ಗೂಢಚಾರನೊಬ್ಬನು ಅಮಾತ್ಯನ ಬಳಿಗೆ ಬಂದಿರುವನೆಂದು ದೂತರ ಮುಖದಿಂದ ತಿಳಿದು, ಭಾಗುರಾಯಣನು ಮಲಯಕೇತುವಿನ ಬಳಿಗೆ ಬಂದು ಆ ವಿಷಯವನ್ನು ಅವನಿಗೆ ತಿಳಿಸಿದನು. ಅವನು ಅವರೊಳಗೆ ಏನೇನು ಮಾತುಕತೆಗಳು ನಡೆಯುತ್ತವೆ ಎಂದು ತಿಳಿಯಬೇಕೆಂದು, ಅಮಾತ್ಯನ ತಲೆನೋವನ್ನು ವಿಚಾರಿಸುವ ನೆವದಿಂದ ಹೊರಟು, ಬಳಿಯಲ್ಲಿರುವ ಕಂಚುಕಿಯನ್ನು ನೋಡಿ—'ಎಲೊ! ನಾವು ಅಮಾತ್ಯರ ಮನೆಗೆ ಹೋಗುತ್ತೇವೆ; ಇಲ್ಲಿಂದ ಅಲ್ಲಿಯ ವರೆಗೂ ನಡೆ ಬಿಡಿಸಿ, ಅವರ ಮನೆಯ ಬಾಗಲಲ್ಲಿ ನೀನೆ ನಿಂದು, ನಾವು ಒಳಹೊಕ್ಕ ಮೇಲೆ ಯಾರೂ ಅಲ್ಲಿಗೆ ಬಾರದಂತೆ ಕಾದಿರು' ಎಂದನು. ಅವನು 'ಅಪ್ಪಣೆ' ಎಂದು ಬಂದು ಆ ಪ್ರಕಾರವೆ ಎಲ್ಲವನ್ನೂ ಸರಿಪಡಿಸಿದನು. ಆಗ

ರಾಜಕುಮಾರನು ಬರುವ ಸುದ್ದಿಯನ್ನು ಅಮಾತ್ಯನಿಗೆ ತಿಳುಹಿಸಲಿಕ್ಕಾಗದೆ ಅಲ್ಲಲ್ಲಿಯ ಜನರು ಅಲ್ಲಲ್ಲಿಯೇ ಇದ್ದರು. ಆ ಸಮಯದಲ್ಲಿ ರಾಜಕುಮಾರನು ಕಾಲುನಡೆಯಲ್ಲಿಯೆ ಹೊರಡಲು, ಬಾಗುರಾಯಣನೂ, ಅವನ ಪರಿಜನವೂ, ಭದ್ರಭಟಾದಿ ಸೇನಾಪತಿಗಳೂ ರಾಜಪುತ್ರನನ್ನು ಅನುಸರಿಸಿ ಬರುತಿದ್ದರು.

ಆಗ ಮಲಯಕೇತು ಅವನನ್ನು ನೋಡಿ—'ಅಮಾತ್ಯರು ತಲೆಗುತ್ತಿನಿಂದ ನರಳುತಿದ್ದಾರಂತೆ; ನಾವು ಮಾತ್ರ ಒಳಗೆ ಹೋಗಿ ವಿಚಾರಿಸಿಕೊಂಡು ಬರುತ್ತೇವೆ; ನೀವೆಲ್ಲರೂ ಇಲ್ಲಿಯೆ ನಿಲ್ಲಿರಿ' ಎಂದನು. ಅದಕ್ಕೆ ಭದ್ರಭಟಾದಿಗಳು—'ಸ್ವಾಮಿ! ನಾವು ಅಮಾತ್ಯರ ಮುಖದಿಂದ ತಮ್ಮನ್ನು ಆಶ್ರಯಿಸಲಿಲ್ಲ; ಆ ಚಾಣಕ್ಯನಿದ್ದಲ್ಲಿ ಇರಲಿಕ್ಕಾಗದೆ ಶೇಖರನ ಮುಖದಿಂದಲೆ ತಮ್ಮನ್ನು ಆಶ್ರಯಿಸಿದವರು; ಆಯಿತು, ನಾವು ಇಲ್ಲಿಯೆ ನಿಲ್ಲುತ್ತೇವೆ' ಎಂದರು. ಅದಕ್ಕೆ ಮಲಯಕೇತು, 'ಆಗಲಿ,' ಎಂದು ಬಾಗುರಾಯಣನ ಕೈಯನ್ನು ಹಿಡಿದುಕೊಂಡು ಒಳಗೆ ಹೋದನು.

ಬಾಗುರಾಯಣ—ನಾವೀಗ ಅಮಾತ್ಯನ ತಲೆ ನೋವನ್ನು ವಿಚಾರಿಸಲಿಕ್ಕೆ ಹೋಗುವುದು ಸಹಜವೆ; ಆದರೆ ಪಾಟಲೀಪುರದ ಗುಟ್ಟನ್ನು ಅವನಾಗಿ ಹೇಳಿದರೆ ಮಾತ್ರ ನಾವು ಕೇಳಿಕೊಳ್ಳಬಹುದಷ್ಟೆ.

ಮಲಯಕೇತು—ಆಗಲಿ, ಸಮಯ ಸಿಕ್ಕಿದಂತೆ ಮಾಡುವ. ಈಗ ಭದ್ರಭಟಾದಿಗಳು ರಾಕ್ಷಸನ ವಿಷಯವಾಗಿ ಹೇಳಿದ ಮಾತಿನ ಅರ್ಥವೇನು?

ಬಾಗುರಾಯಣ—(ಯೋಚಿಸಿದಂತೆ ನಟಿಸಿ) ಇದರಲ್ಲಿ ಅಷ್ಟೊಂದು ಗೂಢವೇನಿದೆ? ಗುಣವಂತನಾದ ರಾಯನನ್ನು ಆಶ್ರಯಿಸಬೇಕಾದರೆ, ಅವನ ಆಪ್ತಮಿತ್ರರೂ ಸಮರ್ಥರೂ ಆಗಿರುವವರ ಮುಖದಿಂದಲೆ ಹೊಂದುವುದು ನ್ಯಾಯವೆ.

ಮಲಯಕೇತು—ಹಾಗಾದರೆ ರಾಕ್ಷಸನು ನಮಗೆ ಮಿತ್ರನು ಹೌದಷ್ಟೆ?

ಬಾಗುರಾಯಣ—ರಾಯನೆ! ನೀನು ಹೇಳಿದ ಮಾತು ಸರಿಯೆ; ಆದರೂ ರಾಕ್ಷಸನಿಗೆ ಚಾಣಕ್ಯನಲ್ಲಿರುವಂತೆ ಚಂದ್ರಗುಪ್ತನಲ್ಲಿ ಹಗೆ ಇರಲಿಕ್ಕಿಲ್ಲ. ಚಾಣಕ್ಯನೆಂದರೆ ಮಹಾ ದುರಹಂಕಾರಿ, ಅವನಿಗೆ ಚಂದ್ರಗುಪ್ತನೆಂದರೆ ಹತ್ತಿಯಿಂದ ಹಗುರವು; ಯಾವಾಗಲೂ ''ಹೋಗೊ,

ಬಾರೆೊ'' ಎಂದು ಹೇಳಿಕೊಂಡೆ ಇರುವುದು; ಆದುದರಿಂದ ಸಮಯ ಸಿಕ್ಕಿದಾಗ ಚಂದ್ರಗುಪ್ತನು ಚಾಣಕ್ಯನ ಮಂತ್ರಿತ್ವವನ್ನು ತೆಗೆದು, ರಾಕ್ಷಸ ನನ್ನೆ ಇಟ್ಟುಕೊಳ್ಳಲಿಕ್ಕೂ ಸಾಕು; ಚಂದ್ರಗುಪ್ತನೆಂದರೆ ಎಷ್ಟಾದರೂ ನಂದ ವಂಶದವನೆ. ಇಷ್ಟಲ್ಲದೆ ರಾಕ್ಷಸನ ಹೆಂಡತಿ ಮಕ್ಕಳೂ ಪಾಟಲೀ ಪುರದಲ್ಲಿಯೇ ಸಿಕ್ಕಿಬಿದ್ದು ಕೊಂಡಿದ್ದಾರೆ; ಆದುದರಿಂದ ಅಮಾತ್ಯನು ಚಂದ್ರ ಗುಪ್ತನಲ್ಲಿ ಸಂಧಿಮಾಡಿಕೊಳ್ಳಲಿಕ್ಕೂ ಸಾಕು; ಚಂದ್ರಗುಪ್ತನು ಸಹ ಅದಕ್ಕೆ ಒಪ್ಪಬಹುದು. ಯಾಕೆಂದರೆ — ಅನೇಕ ಕಾಲಗಳಿಂದ ಇವನೆ ಮಂತ್ರಿ ಯಾಗಿದ್ದನು; ಅಲ್ಲದೆ ಪ್ರಜಾರಂಜಕನು; ಕಾರ್ಯದಕ್ಷನು; ಹೀಗಿದ್ದರೆ, ಪಾಟಲೀಪುರದವರೆಲ್ಲವರೂ ಹೀಗಿದ್ದವರೆ ಎಂದು ಭದ್ರಭಟಾದಿಗಳು ಮೊದ ಲಾಗಿಯೆ ನಮಗೆ ಸೂಚಿಸಿದಂತಾಯಿತು.

ಮಲಯಕೇತು — ನಾನು ಹೇಳಿದ ಮಾತು ಖರೆ: ಯಾಕೆಂದರೆ ದೇಶಾಭಿಮಾನವೆಂಬುದು ಪ್ರತಿಯೊಬ್ಬನಲ್ಲಿಯೂ ಇರುತ್ತದಲ್ಲವೆ?

ಈ ರೀತಿಯಾಗಿ ಮಾತನಾಡಿಕೊಂಡು ಅವರಿಬ್ಬರೂ ಒಳಗೆ ಹೊಕ್ಕರು.

## ೧೩. ರಾಕ್ಷಸನ ಪರೀಕ್ಷಣ.

ಆಗ ಅಮಾತ್ಯನು ಶಕಟದಾಸನೊಡನೆ ಆಡುತ್ತಿರುವ ಮಾತುಗಳನ್ನು ನಿಲ್ಲಿಸಿ, ಕರಭಕನನ್ನು ಸಮೀಪಕ್ಕೆ ಕರೆದು ಕುಳ್ಳಿರಿಸಿಕೊಂಡು, — 'ಪಾಟಲೀ ಪುರದ ವರ್ತಮಾನಗಳೇನು?' ಎಂದು ಕೇಳಿದನು.

ಅದನ್ನು ಕೇಳಿ, ಮಲಯಕೇತು ಬಾಗುರಾಯಣನೊಡನೆ — ಈಗ, ಅಮಾತ್ಯನಿಗೂ ಗೂಢಚಾರನಿಗೂ ಕುಸುಮಪುರದ ವಿಷಯವಾಗಿ ಸಂಭಾ ಷಣೆಯಾಗುತ್ತಿದೆ; ನಾವು ಒಳಹೊಕ್ಕರೆ ಅವನು ಗುಟ್ಟನ್ನು ಬಿಡಲಿಕ್ಕಿಲ್ಲ; ಆದುದರಿಂದ ಇಲ್ಲಿಯೆ ನಿಂತು ಎಲ್ಲವನ್ನೂ ತಿಳಿದುಕೊಳ್ಳಬೇಕು,' ಎಂದು ಅವರಿಬ್ಬರೂ ಅಲ್ಲಿಯೆ ನಿಂತು ಕಿವಿಗೊಟ್ಟು ಕೇಳುತಿದ್ದರು.

ಕರಭಕ — ಸ್ವಾಮಿ! ತಮ್ಮ ಅಪ್ಪಣೆಯಂತೆಯೆ ನಾನು ಪಾಟಲೀ ಪುರಕ್ಕೆ ಹೋಗಿ ಸ್ತುತಿಪಾಠಕರಿಗೆ ಹೇಳಿದೆನು; ದೇವರ ದಯೆಯಿಂದಲೂ, ತಮ್ಮ ಮಹತ್ವದಿಂದಲೂ ಅದು ಕೈಗೂಡಿಯೆ ಹೋಯಿತು.

ಮಲಯಕೇತು — ಬಾಗುರಾಯಣ! ಅದು ಕೈಗೂಡಿತೆಂದರೆ ಯಾವುದು?

ಬಾಗುರಾಯಣ — ಇಷ್ಟು ಮಾತ್ರದಿಂದ ಏನೆಂದು ನಿಶ್ಚೈಯಿಸ ಕೂಡದು, ಇನ್ನು ಕೇಳುವ.

ಕರಭಕ – ಕೈಗೂಡಿದುದು ಹೇಗೆಂದರೆ — ತಾನು ಆರಂಭಿಸಿದ ಕೌಮುದೀ ಮಹೋತ್ಸವವನ್ನು ಚಾಣಕ್ಯನು ನಿಲ್ಲಿಸಲು, ಚಂದ್ರಗುಪ್ತನು ತನ್ನ ಆಜ್ಞಾಭಂಗವನ್ನು ಮಾಡಿಸುವುದಕ್ಕೆ ಕಾರಣವೇನು ಎಂದು ತಿಳಿಯು ವುದಕ್ಕಾಗಿ ಚಾಣಕ್ಯನನ್ನು ಕರೆಯಿಸಿ ಕೇಳಿದನು. ಆಗ ಅವರೊಳಗೆ ಮಾತಿಗೆ ಮಾತು ಏರುತ್ತ ಹೋಯಿತು. ಆ ಸಮಯದಲ್ಲಿ ತಮ್ಮ ಅಪ್ಪಣೆಯ ಪ್ರಕಾರ ಚಂದ್ರಗುಪ್ತನಿಗೆ ಚಾಣಕ್ಯನಲ್ಲಿ ಕೋಪ ಹುಟ್ಟುವಂತೆ ವಂದಿಗಳು ಸ್ತುತಿಪದ್ಯಗಳಿಂದ ಹೊಗಳಿದರು.

ರಾಕ್ಷಸನು ಸಂತೋಷಪಟ್ಟು — ಮತ್ತೇನು ನಡೆಯಿತು? ಸಾಮಾನ್ಯ ಮನಷ್ಯರಿಗೆ ಸಹ ತಾವು ಕೈಕೊಂಡ ಕಾರ್ಯಕ್ಕೆ ಅಡ್ಡಿ ಬಂದರೆ ಸಹಿಸ ಲಿಕ್ಕಾಗುವುದಿಲ್ಲ; ಹೀಗಿರುವಲ್ಲಿ ರಾಜಾಧಿರಾಜನಾದವನು ಹೇಗೆ ಸಹಿಸಿ ಯಾನು?

ಕರಭಕ — ಈ ರೀತಿಯಾಗಿ ಒಂದರ ಮೇಲೊಂದು ಮಾತುಗಳು ಬಂದುವು; ಕಡೆಗೆ ಚಂದ್ರಗುಪ್ತನು "ಅಮಾತ್ಯರಿಗಿಂತ ಬುದ್ಧಿವಂತರು ಯಾರಿದ್ದಾರೆ?" ಎಂದು ಮೊದಲಾಗಿ ತಮ್ಮ ಗುಣಗಳನ್ನು ಕೊಂಡಾಡಿ ಚಾಣಕ್ಯನ ಮಂತ್ರಿಪದವನ್ನು ತೆಗೆದುಬಿಟ್ಟನು. ಆ ಕೌಟಿಲ್ಯನು ಮೋರೆ ಕಪ್ಪುಮಾಡಿಕೊಂಡು ಸಭೆಯಿಂದ ಎದ್ದು ಹೊರಟು ಹೋದನು.

ಮಲಯಕೇತು — ಬಾಗುರಾಯಣ! ಸರಿ ಸರಿ! ಚಂದ್ರಗುಪ್ತನು ಅಮಾತ್ಯನನ್ನು ಹೊಗಳಿದವನಂತೆ; ಇನ್ನು ಕೇಳುವುದೆ ಬೇಡ; ಈ ರಾಕ್ಷಸ ನಿಗೆ ಅಲ್ಲಿ ಕೈಯುಂಟು.

ಬಾಗು — ರಾಕ್ಷಸನನ್ನು ಹೊಗಳಿದುದರಿಂದ ಮಾತ್ರವಲ್ಲ; ಚಾಣ ಕ್ಯನ ಅಧಿಕಾರವನ್ನು ತೆಗೆದುದರಿಂದ ಇವನಿಗೆ ಅಲ್ಲಿ ವಿಶೇಷವಾಗಿ ಕೈ ಯುಂಟೆಂದು ಹೇಳಬೇಕು.

ರಾಕ್ಷಸ — ಚಂದ್ರಗುಪ್ತನಿಗೆ ಚಾಣಕ್ಯನಲ್ಲಿ ಕೋಪವುಂಟಾಗುವು ದಕ್ಕೆ ಉತ್ಸವವನ್ನು ನಿಲ್ಲಿಸಿದುದು ಒಂದೆಯೊ, ಬೇರೇನಾದರೂ ಕಾರಣ ವುಂಟೆ?

ಕರಭಕ — ಇನ್ನೂ ಒಂದುಂಟು; ಮಲಯಕೇತುವನ್ನೂ ನಿಮ್ಮನ್ನೂ ತಿಳಿದು ತಿಳಿದೂ ಪಾಟಲೀಪುರದಿಂದ ಹೊರಡಲಿಕ್ಕೆ ಬಿಟ್ಟನೆಂಬುದು.

ರಾಕ್ಷಸ — ಶಕಟದಾಸ ಇನ್ನು ಚಂದ್ರಗುಪ್ತನು ನಮ್ಮ ಚೀಲದಲ್ಲಿ ಬಿದ್ದನು; ಚಂದನದಾಸನ ಬಂಧನವೂ ನಿವೃತ್ತಿಯಾಯಿತು; ನೀನು ನಿನ್ನ ಹೆಂಡತಿ ಮಕ್ಕಳನ್ನು ನೋಡುವೆ.

ಮಲಯಕೇತು — ಬಾಗುರಾಯಣ! ಚಂದ್ರಗುಪ್ತನು ಚೀಲದಲ್ಲಿ ಬಿದ್ದನು, ಎಂದರೇನು?

ಬಾಗುರಾಯಣ — ಏನೆಂದರೇನು? ಚಾಣಕ್ಯನದು ಮುಗಿಯಿತು; ಇನ್ನು ತಾನೆ ಅವನ ಮಂತ್ರಿಯೆಂದು.

ರಾಕ್ಷಸ — 'ಚಾಣಕ್ಯನು ಈಗಲೂ ಪಾಟಲೀಪುರದಲ್ಲಿಯೆ ಇದ್ದಾನೊ? ಸಿಟ್ಟಿನಿಂದ ಭಾಷೆ ತೊಟ್ಟುಕೊಂಡು ಎಲ್ಲಿಯಾದರೂ ಹೊಗಿದ್ದಾನೊ?'

ಕರಭಕ — ಅವನು ತಪೋವನಕ್ಕೆ ಹೋಗುತ್ತಾನೆ ಎಂಬ ಸುದ್ದಿಯುಂಟು.

ರಾಕ್ಷಸ — 'ಶಕಟದಾಸ! ನಂದರು ಅವಮಾನ ಪಡಿಸಿದುದಕ್ಕೆ ಘೋರ ಪ್ರತಿಜ್ಞೆಯನ್ನು ಮಾಡಿ, ಪೂರಯಿಸಿಕೊಂಡವನು, ಈಗ ತನ್ನಿಂದಲೆ ತಲೆಯೆತ್ತಿದ ಈ ಚಂದ್ರಗುಪ್ತನಿಂದಾದ ಅವಮಾನವನ್ನು ಸಹಿಸಿಕೊಂಡು ಸುಮ್ಮನೆ ಹೋಗುವನೆಂದರೆ, 'ಇದಷ್ಟು ಸರಿಯಾಗಿ ತೋರುವುದಿಲ್ಲ,' ಎಂದು ಚಾರನನ್ನು ನೋಡಿ — 'ಚಾಣಕ್ಯನು ಹೋಗುವನೆಂಬುದು ನಿಜವೊ? ಗಾಳಿ ಸುದ್ದಿಯೊ?

ಮಲಯಕೇತು — ಬಾಗುರಾಯಣ! ಚಾಣಕ್ಯನು ಪ್ರತಿಜ್ಞೆಮಾಡುವುದರಿಂದಲೂ, ತಪೋವನಕ್ಕೆ ಹೋಗುವುದರಿಂದಲೂ ಇವನಿಗೆ ಪ್ರಯೋಜನವೇನು?

ಬಾಗುರಾಯಣ — ಚಾಣಕ್ಯನು ತಾನು ನಟ್ಟ ಕೈಯಿಂದಲೆ ಕೀಳುವುದು ಉಚಿತವಲ್ಲವೆಂದು ಕೀರ್ತಿಯಲ್ಲಿ ಕಣ್ಣಿಟ್ಟು, ಈ ಚಂದ್ರಗುಪ್ತನೆಂದರೆ ಒಬ್ಬ ಕೃತಘ್ನನೆಂದು ನೆನಸಿ, ಇನ್ನಿವನ ಮೋರೆಯನ್ನು ನೋಡಬಾರದೆಂದು ತಪೋವನಕ್ಕೆ ಹೋಗಲಿಕ್ಕೆ ಸಾಕು; ಚಾಣಕ್ಯನು ಎಷ್ಟೆಷ್ಟು ದೂರನಾದಸೊ

ತಾನು ಚಂದ್ರಗುಪ್ತನಿಗೆ ಅಷ್ಟಷ್ಟು ಹತ್ತಿರವಾಗುವನೆಂದು ಇವನ ಅಭಿಪ್ರಾಯವಿರಬಹುದು.

ಶಕಟದಾಸ—"ಅಮಾತ್ಯರೆ! ಚಾಣಕ್ಯನು ಹೋಗುವುದು ನಿಜವಾಗಿದ್ದೀತು; ಯಾಕೆಂದರೆ—ಚಂದ್ರಗುಪ್ತನೆಂದರೆ, ಅನೇಕಾನೇಕ ಅರಸರಿಂದ ಪೂಜಿಸಲ್ಪಡುವವನು; ಅಂತಹವನು ಚಾಣಕ್ಯನಿಂದಾದ ಆಜ್ಞಾಭಂಗವನ್ನು ಎಷ್ಟು ಮಾತ್ರಕ್ಕೂ ಸಹಿಸುವವನಲ್ಲ; ಅವನಿಗೆ ನಿಮ್ಮ ಪರಾಕ್ರಮವೂ, ಕಾರ್ಯನಿರ್ವಾಹ ಶಕ್ತಿಯೂ ಗೊತ್ತಿದೆಯಷ್ಟೆ? ಹೀಗೇನೋ ಆಲೋಚನೆ ಮಾಡಿ, ಚಾಣಕ್ಯನ ಅಧಿಕಾರವನ್ನು ತೆಗೆದಿದ್ದನು. ಮತ್ತೆ ಚಾಣಕ್ಯನು ನಂದರ ಮೇಲೆ ಪ್ರತಿಜ್ಞೆಯನ್ನು ಮಾಡಿಬಿಟ್ಟನು ಏನೊ ಕೈಗೂಡಿ ಹೋಯಿತು! ಇನ್ನೂ ಇನ್ನೂ ಪ್ರತಿಜ್ಞೆಮಾಡಿ, ಅದು ನಡೆಯದಿದ್ದರೆ, ಮೋರೆಗೆ ಮಸಿಯಲ್ಲವೆ ಎಂದು ಇದ್ದಲ್ಲಿಗೆಯೆ ಮರ್ಯಾದೆಯಿಟ್ಟುಕೊಂಡು ಹೋದಾನು.

ರಾಕ್ಷಸ—ಹೌದು, ಉತ್ತಮನಾದವನು ಕೀರ್ತಿಯಲ್ಲಿಯೆ ದೃಷ್ಟಿಯಿಟ್ಟಿನು; ಕಾಮಕ್ರೋಧಾದಿಗಳಿಗೆ ಎಂದಿಗೂ ಒಳಗಾಗನು; ಮತ್ತು ರಾಜನಾದವನು ಕಾರ್ಯದಕ್ಷರನ್ನೆ ಪುರಸ್ಕರಿಸುವನು; ಆದರಿಂದ ಅವನ ಪದವಿಯೂ ನಿಷ್ಕಂಟಕವಾಗುವುದು.

ಬಾಗುರಾಯಣ—ಮಲಯಕೇತು! ಈಗಿನ ಮಾತು ಕೇಳಿತಲ್ಲ! ಅಂಗೈ ಹುಣ್ಣಿಗೆ ಕನ್ನಡಿ ಯಾಕೆ? ಚಂದ್ರಗುಪ್ತನಲ್ಲಿ ಇವನಿಗೆ ಅಭಿಮಾನವಿದೆ ಎಂಬುದರಲ್ಲಿ ಇನ್ನು ಅನುಮಾನವೇನು?

ಮಲಯಕೇತು—ಇನ್ನು ಮುಂದೆ ಇವನ ಗುಣವನ್ನು ಚೆನ್ನಾಗಿ ಪರೀಕ್ಷಿಸದೆ ಏನೊಂದೂ ಮುಂದಣ ಕಾರ್ಯಕ್ಕೆ ಕೈಹಾಕಬಾರದೆಂದಾಯಿತು.

ರಾಕ್ಷಸ—ಕರಭಕ! ನೀನು ಬಹಳ ದಣಿದಿರುವೆ; ಹೊರ ಹೋಗಿ ಸ್ವಲ್ಪ ವಿಶ್ರಮಿಸಿಕೊ.

ಅವನು "ಅಪ್ಪಣೆ" ಎಂದು ಎದ್ದು ಹೋದನು. ಆಗ ಬಾಗುರಾಯಣನೂ ಮಲಯಕೇತುವೂ ಒಳಹೊಕ್ಕು ಅಮಾತ್ಯನ ಬಳಿಗೆ ಬಂದರು. ಮಲಯಕೇತು ಬರುವುದನ್ನು ನೋಡಿ, ಅಮಾತ್ಯನು ತಾನೆ ಎದ್ದು ಬಂದು ಕೈಹಿಡಿದು ಕರೆದು ಕೊಂಡು ಹೋಗಿ, ಹಾಸಿಗೆಯಲ್ಲಿ ಕುಳ್ಳಿರಿಸಿಕೊಂಡು—

'ಏನಯ್ಯಾ! ಬಡವರ ಮನೆಗೆ ಭಾಗ್ಯದೇವತೆಯು ಬಂದು ಬಿಟ್ಟಿತು; ಏನು ಫಕ್ಕನೆ ಬಂದು ಬಿಟ್ಟೆ?' ಎಂದು ಕೇಳಿದನು.

ಮಲಯಕೇತು—ನಿಮಗೆ ತಲೆನೋವು ಎಂದು ಸುದ್ದಿಕೇಳಿತು; ನೋಡಿಹೋಗುವ, ಎಂದು ಬಂದು ಬಿಟ್ಟೆನು.

ರಾಕ್ಷಸ—ಇದು ಈಗಲೆ ಹೋಗುವ ತಲೆನೋವಲ್ಲ; ಹೋಗಬೇಕಾದರೆ, ನೀನು ರಾಜಾಧಿರಾಜನಾದುದನ್ನು ಈ ಕಣ್ಣುಗಳಿಂದ ನೋಡಬೇಕು.

ಮಲಯಕೇತು—ತಾವೆ ನನ್ನ ಕಡೆಯಲ್ಲಿರುವಾಗ ಅದಕ್ಕೊಂದು ಅನುಮಾನವೆ? ಈಗ ನಾವು ಇಲ್ಲಿ ಇಷ್ಟು ದೊಡ್ಡ ಸೇನೆಯನ್ನು ಕಟ್ಟಿಕೊಂಡು, ವೈರಿಗಳಿಗೆ ಯಾವಾಗ ಕಷ್ಟ ಬರುತ್ತದೆ ಎಂದು ಕೊರಳುದ್ದ ದೂಡುತ್ತ ಎಷ್ಟು ದಿನ ಕಾಲಹರಣಮಾಡಬೇಕು?

ರಾಕ್ಷಸ—ಇನ್ನು ನೋಡುವುದೇನು? ಹೊರಡುವುದೆ. ವೈರಿಗಳಿಗೆ ಕಷ್ಟ ಬಂದಿದೆ.

ಮಲಯಕೇತು—ಏನು ಕಷ್ಟ ಬಂದಿದೆ?

ರಾಕ್ಷಸ—ಮಂತ್ರಿ ವ್ಯಸನವು.

ಮಲಯಕೇತು—ರಾಜನಾದವನಿಗೆ ಮಂತ್ರಿ ವ್ಯಸನವೆಂದರೆ, ಅದು ಅಷ್ಟೊಂದು ದೊಡ್ಡ ವ್ಯಸನವಲ್ಲ.

ರಾಕ್ಷಸ—ನಿನ್ನ ಹಾಗಿದ್ದವರಿಗೆ ಅಲ್ಲ; ಚಂದ್ರಗುಪ್ತನಿಗೆ ಹಾಗೆಯೆ.

ಮಲಯಕೇತು—ಚಾಣಕ್ಯನು ಇರುವ ವರೆಗೆ ಪ್ರಜೆಗಳಿಗೆ ಚಂದ್ರಗುಪ್ತನಲ್ಲಿ ಸ್ವಲ್ಪ ಅಪ್ಪಷ್ಟೆ ಇದ್ದಿರಬಹುದು; ಅವನು ಹೋದ ಮೇಲೆ ಮತ್ತೇನು?

ರಾಕ್ಷಸ—ರಾಯರೇ! ಹಾಗಲ್ಲ, ಪ್ರಜೆಗಳಲ್ಲಿ ಎರಡು ವಿಧದವರಿದ್ದಾರೆ; ಚಂದ್ರಗುಪ್ತನ ಏಳಿಗೆಯನ್ನು ಬಯಸುವವರು ಕೆಲವರು; ನಂದರಲ್ಲಿ ಪ್ರೀತಿ ಇರುವವರು ಕೆಲವರು; ಮೊದಲನೆಯವರಿಗೆ ಚಾಣಕ್ಯನಿಂದಲಾಗಿ ಚಂದ್ರಗುಪ್ತನಲ್ಲಿ ಅಪ್ಪಷ್ಟೆ; ಎರಡನೆಯವರು ಚಂದ್ರಗುಪ್ತನು ಯಾವಾಗ ಸತಂಪಾತಾಳಕ್ಕೆ ತಗ್ಗಲಿಲ್ಲ ಎಂದು ನೋಡಿಕೊಂಡೆ ಇದ್ದಾರೆ. ಈ ಉಭಯರಿಗೂ ಈಗ ಬೇರೆ ದಾರಿಯಿಲ್ಲದೆ ಚಂದ್ರಗುಪ್ತನನ್ನೆ ಹೊಂದಿಕೊಂಡು "ಹೌದಣ್ಣ ಹೌದು" ಎಂದು ಅವನ ತಾಳಕ್ಕೆ ತಕ್ಕ ಕುಣಿದು

ಕೊಂಡಿದ್ದಾರೆ; ಈಗೀಗ ಒಬ್ಬೊಬ್ಬರಾಗಿ ನಿನ್ನನ್ನು ಬಂದು ಸೇರಲಿಕ್ಕೆ ಆರಂಭಿಸಿದ್ದಾರೆ; ಇದಕ್ಕೆ ಮೊದಲು ನಾನೆ ದೃಷ್ಟಾಂತವು.

ಮಲಯಕೇತು—ಹಾಗಾದರೆ ಚಂದ್ರಗುಪ್ತನಿಂದ ಸ್ವತಂತ್ರವಾಗಿ ರಾಜ್ಯಭಾರವಮಾಡಲಿಕ್ಕೆ ಸಾಧ್ಯವಿಲ್ಲವೆ?

ರಾಕ್ಷಸ—ಎಷ್ಟಕ್ಕೂ ಇಲ್ಲ; ಯಾಕೆಂದರೆ, ತಾನೆ ತಾನಾಗಿ ರಾಜ್ಯವನ್ನು ಗಳಿಸಿದವನು, ತಾನೆ ತಾನಾಗಿ ಆಳಬಹುದು; ಇದು ಚಾಣಕ್ಯನ ಬಲದಿಂದಾದ ರಾಜ್ಯವು; ಅವನು ತಪ್ಪಿದ ಮೇಲೆ ಇವನ ನೆಲೆಯೂ ತಪ್ಪಿದ ಹಾಗೆಯೆ. ಮೊಲೆ ಕುಡಿದು ಜೀವಿಸುವ ಮಗು ಅದು ತಪ್ಪಿದರೆ ಹೇಗೆ ಬದುಕಿತು? ಆದುದರಿಂದ ಚಂದ್ರಗುಪ್ತನ ಕೆಲಸವು ಇಲ್ಲಿಗೆ ಮುಗಿಯಿತು.

ಮಲಯಕೇತು—'ಹಾಗಾದರೆ ನಾವೀಗ ದಂಡೆತ್ತಿ ಹೊರಡಬೇಕು; ವೈರಿಗಳ ಅಬಲತೆಯನ್ನೆ ನೋಡುತ್ತಿದ್ದರೆ ಹೇಗೆ ಕಾರ್ಯಸಿದ್ಧಿಯಾದೀತು?

ರಾಕ್ಷಸ—'ಕಾರ್ಯಸಿದ್ಧಿಗೆ ಏನೂ ಅಡ್ಡಿಯಿಲ್ಲ, ಹೇಗೆಂದರೆ—ನೀನು ಮಹಾಪರಾಕ್ರಮಿಗಳಾದ ಸೈನಿಕರಿಂದ ಕೂಡಿದವನು, ಚಾಣಕ್ಯನು ಅಧಿಕಾರನಿವೃತ್ತನಾಗಿ ಹೋಗುತ್ತಾನೆ; ಚಂದ್ರಗುಪ್ತನು ಹೊಸಬನು ಮತ್ತು ಮಂತ್ರಿಯಿಲ್ಲದವನು; ನಾವು ನಿನ್ನ ಕಡೆಯಲ್ಲಿದ್ದೇವೆ, ಮತ್ತೇನು?

ಮಲಯಕೇತು—'ಹಾಗಾದರೆ ನಮ್ಮ ಸೇನೆ ಗೌಡದೇಶದ ಶೋಣಾನದಿಯ ತೀರದಲ್ಲಿ ಹೋಗಿ ಇಳಿಯುವಂತೆ ನೀವೇ ಸೇನಾಪತಿಗಳಿಗೆ ಆಜ್ಞಾಪಿಸಿರಿ;' ಎಂದು ಹೇಳಿ, ರಾಕ್ಷಸನಿಂದ ಯಥೋಚಿತವಾದ ಸನ್ಮಾನವನ್ನು ಹೊಂದಿ, ಬಾಗುರಾಯಣನೊಡನೆ ಹೊರಟು ಅರಮನೆಗೆ ಹೋದನು.

## ೧೪. ಬಾಗುರಾಯಣ ಕ್ಷಪಣಕರ ಸಂವಾದ

ಮೊದಲು ಆರೂಢಮಾಡಿ ಇದ್ದಂತೆ ಮೊದಲಿಗಿಂತಲೂ ಹೆಚ್ಚಾಗಿ ಸಾಮಂತರಾಜರ ಪಡೆಗಳು, ಪಾಟಲೀಪುರಕ್ಕೆ ಹೋಗಿ ಮುತ್ತುವುದಕ್ಕಾಗಿ ಪರ್ವತರಾಜ್ಯ ಮೊದಲುಗೊಂಡು ಅಘನಾಶಿನಿಯ ವರೆಗೆ, ಎಳ್ಳುಹಾಕಲು ಎಡೆಯಿಲ್ಲದಂತೆ, ಒಂದರ ಮೇಲೊಂದು ದಂಡು ಬಂದು ಸೇರುತಿತ್ತು. ನೆಲದುದ್ದಕ್ಕೂ ಸೈನ್ಯವು; ಭೂಮಿಯಿಂದಾಕಾಶದ ವರೆಗೂ ಕೆಂದೂಳಿ;

ಆಗ ಗೌಡದೇಶದ ಪ್ರಜೆಗಳು ಮತ್ತೊಮ್ಮೆ ಗಂಟುಮೂಟೆಗಳನ್ನು ಕಟ್ಟಲಿಕ್ಕೆ ಆರಂಭವನ್ನು ಮಾಡುತ್ತಿದ್ದರು. ಈ ಸಮಯದಲ್ಲಿ ಇದೆಲ್ಲವನ್ನೂ ನೋಡಿ ಕೊಂಡು ಚಾಣಕ್ಯನಿಂದ ಅವಮಾನಿತನಾದ ಕ್ಷಪಣಕನು ಶಾಹುರೀನಗರ ದಲ್ಲಿರುವ ಅಮಾತ್ಯನ ಮನೆಯ ಬಾಗಲಲ್ಲಿ ಬಂದು ನಿಂತುಕೊಂಡಿದ್ದನು. ಆಗ ವಿಜಯಪ್ರಯಾಣಕ್ಕೆ ಮುಹೂರ್ತವನ್ನು ನೋಡಬೇಕೆಂದು ರಾಕ್ಷ ಸನು ಒಳಿಯಲ್ಲಿರುವ ದೂತನನ್ನು ನೋಡಿ 'ಯಾರಾದರು ಜೋಯಿಸ ರಿದ್ದರೆ ಕರೆದುಕೊಂಡು ಬಾ,' ಎಂದನು.

ಊಳಿಗದವನು ಹೊರಗೆ ಬಂದು ನೋಡಿ, ಒಳಗೆ ಹೋಗಿ— 'ಬುದ್ಧೀ! ಬೇರೆ ಯಾರು ಇಲ್ಲ; ನಮ್ಮ ಕ್ಷಪಣಕರು ಬಂದಿದ್ದಾರೆ.

ರಾಕ್ಷಸ—ಊಃ! "ಹೋದಲ್ಲಿ ಬಿಡದು ಹೊಲೆಯರ ದೈವ" ಎಂದು ಇದೊಂದು ಅಪಶಕುನವು ಎಂದು ಭಾವಿಸಿಕೊಂಡು,-'ಹೂಂ! ಒಳಗೆ ಬರಲಿಕ್ಕೆ ಹೇಳು,' ಎಂದನು. ದೂತನು ಕರೆದುಕೊಂಡು ಬಂದು ಮುಂದೆ ನಿಲ್ಲಿಸಿದನು.

ಕ್ಷಪಣಕ—ಧರ್ಮಾತ್ಮರಿಗೆ ಜಯವಾಗಲಿ.

ರಾಕ್ಷಸ—ಏನು ಕ್ಷಪಣಕರೆ ಬಂದಿರಿ? ಕುಳಿತುಕೊಳ್ಳಿರಿ. ನಮ್ಮ ಸ್ವಂತ ವಿಷಯಗಳೇನಿದ್ದರೂ ಎಲ್ಲ ಮತ್ತೆ; ಮೊದಲು ವಿಜಯಪ್ರಯಾಣ ಕ್ಕೊಂದು ಮುಹೂರ್ತವನ್ನು ಹೇಳಿರಿ, ನೋಡುವ.

ಕ್ಷಪಣಕ—(ಕಣ್ಣು ಮುಚ್ಚಿ ಕ್ಷಣಕಾಲವಿದ್ದು, ತೆರೆದು) "ಸರಿ' ಇಂದು ಮಧ್ಯಾಹ್ನದ ಮೇಲೆ ಎಲ್ಲ ಗುಣಗಳಿಂದ ಕೂಡಿದ ತಿಥಿಯೂ, ಪೂರ್ಣ ಅಮಾವಾಸ್ಯೆಯೂ ಬರುತ್ತದೆ; ಉತ್ತರದಿಂದ ದಕ್ಷಿಣಕ್ಕೆ ಹೋಗುವವನಿಗೆ ನಕ್ಷತ್ರವು ಎಡಕಡೆಗೆ ಆಗುತ್ತದೆ; ಆಕ್ಷೇಪವಿಲ್ಲ, ಹೊರಡಬಹುದು."

ರಾಕ್ಷಸ—(ಹಿಂದಣದನ್ನು ನೆನೆದು) "ಏನು ಸ್ವಾಮಿಾ! ನೀವು ಮೊದ ಲೊಂದು ಮುಹೂರ್ತವನ್ನು ಹೇಳಿದ್ದಿರಿ, ಈಗಲೂ ಹಾಗೆಯೆ ಹೇಳ ಬೇಡಿರಿ; ಬೇರೆಯವರೊಡನೆಯೂ ಆಲೋಚಿಸಿಕೊಳ್ಳಿರಿ.

ಕ್ಷಪಣಕ— ಹಾಗಾದರೆ ನೀನು ಹೋಗಿ ಬೇಕಾದವರಲ್ಲಿ ಕೇಳಿಕೊ; ನಾವು ನಮ್ಮ ದಾರಿ ನೋಡುತ್ತೇವೆ.'

ರಾಕ್ಷಸ—'ಇದೇನು ಸ್ವಾಮಿಾ! ನೀವು ಸನ್ಯಾಸಿಗಳಾಗಿ ಇಷ್ಟಕ್ಕೆ ಕೋಪಿಸಿಕೊಳ್ಳುವುದೆ?'

'ಕ್ಷಪಣಕ—ಅಯ್ಯೋ! ನಮಗೆ ನಿನ್ನ ಮೇಲೇನಪ್ಪ ಕೋಪವು?

ರಾಕ್ಷಸ—'ಮತ್ತೆ ಯಾರಿಗೆ ಸ್ವಾಮಿಾ ಕೋಪವು?

ಕ್ಷಪಣಕ—'ಕೋಪವೇನು? ಶಾಂತವೇನು? ತನ್ನವರನ್ನು ಬಿಟ್ಟು ಪರರನ್ನು ಆಶ್ರೈಸಿಕೊಂಡು ಬಂದ ನಿನ್ನ ಮೇಲೆ ಆ ದೈವವೆ ಕೋಪಿಸುತ್ತಿದೆ,' ಎಂದು ಹೇಳಿ, ಹೊರಟು ಹೋಗಿಬಿಟ್ಟನು.

ಆಗ ರಾಕ್ಷಸನ ಬಳಿಯಲ್ಲಿದ್ದ ಸಿದ್ಧಾರ್ಥಕನು ಬಾಗುರಾಯಣನಲ್ಲಿಗೆ ಬಂದು ಮಾತನಾಡಿಕೊಂಡು, ಭದ್ರಭಟಾದಿಗಳಿಗೆ ಹೇಳಬೇಕಾದುದನ್ನೆಲ್ಲ ಹೇಳಿ, ಪುನಃ ರಾಕ್ಷಸನ ಮನೆಗೆ ಬಂದು ಶಕಟದಾಸನನ್ನು ನೋಡಿ 'ನನ್ನ ಹೆಂಡತಿಯ ತವರುಮನೆ ಇಲ್ಲಿಗೆ ಸಮಿಾಪದಲ್ಲಿದೆ; ನಾನು ಊರು ಬಿಟ್ಟು ಹೋದುದನ್ನು ತಿಳಿದು ಅವಳು ತನ್ನ ತಾಯಿಮನೆಗೆ ಹೋಗಿರುವಳಂತೆ; ಒಮ್ಮೆ ಅವರೆಲ್ಲರನ್ನೂ ನೋಡಿ, ನಾನು ಅಮಾತ್ಯರಿಗೆ ಅಚ್ಚುಮೆಚ್ಚಿನ ಬಂಟನೆಂದು ತಿಳಿಸಿ, ಅಮಾತ್ಯರು ಕೊಟ್ಟ ಆಭರಣಗಳನ್ನು ಅವಳಿಗೆ ಕೊಟ್ಟು, ಸಮಾಧಾನಪಡಿಸಿ ಬಂದುಬಿಡುತ್ತೇನೆ' ಎಂದನು. ಶಕಟದಾಸನು 'ಆದೀತು' ಎಂದು ಅಭರಣದ ಕರಡಿಗೆಯನ್ನು ತೆಗೆದುಕೊಟ್ಟನು. ಅವನದನ್ನು ತೆಗೆದುಕೊಂಡು ಉಕ್ಕಡದ ಮಾರ್ಗವಾಗಿ ಹೊರಟುಬಂದನು.

ಆ ಸಮಯದಲ್ಲಿ ಬಾಗುರಾಯಣನು ತಾನೆ ಉಕ್ಕಡದ ಬಳಿಯಲ್ಲಿ ನಿಂತು, ದೇಶದಿಂದ ಹೊರಗೆ ಹೋಗುವವರಿಗೂ, ಒಳಗೆ ಬರುವವರಿಗೂ ಉಂಡಿಗೆಯನ್ನು ಕೊಡುತಿದ್ದನು. ಸಿದ್ಧಾರ್ಥಕನು ಅಲ್ಲಿಗೆ ಬರುತ್ತಿರುವಾಗ ಎದುರಾಗಿ ಕ್ಷಪಣಕನು ಬರುವುದನ್ನು ಕಂಡು,—'ಓಹೊ' ಕ್ಷಪಣಕರಿಗೆ ನಮಸ್ಕಾರವು; ಎಲ್ಲಿಂದ ಬಂದಿರಿ? ಯಾವ ಕಡೆಗೆ ಪ್ರಯಾಣವು? ನಿಮ್ಮ ಕಥೆ ಏನು? ಎಂದು ಕೇಳಿದನು.

ಕ್ಷಪಣಕ—'ಹೀಗೆಯೆ ಹೋಗುತ್ತೇವೆ. ನೀನು ಯಜಮಾನರ ಅಪ್ಪಣೆಯಂತೆ ಹೊರಟುದೆಂದು ತೋರುತ್ತದೆಯಲ್ಲವೆ?

ಸಿದ್ಧಾರ್ಥಕ—'ನೀವು ಜೋಯಿಸರಲ್ಲವೆ? ನಿಮಗೆ ತಿಳಿದೀತು.'

ಕ್ಷಪಣಕ—'ನಿನ್ನ ಬಳಿಯಲ್ಲಿರುವ ಕಾಗದವೆ ತಿಳಿಸುತ್ತದೆ.'

ಸಿದ್ಧಾರ್ಥಕ—'ಅದೆಲ್ಲ ಇರಲಿ, ನಾನೀಗ ಪರದೇಶಕ್ಕೆ ಹೊರಟಿದ್ದೇನೆ; ಪ್ರಯಾಣಕ್ಕೆ ದಿನವು ಹೇಗೆ?

ಕ್ಷಪಣಕ—'ಹ ಹ್ಹ ಹ್ಹ ಹ್ಹಾ! ಕ್ಷೌರಮಾಡಿಸಿಕೊಂಡ ಮೇಲೆ ದಿನ ಕೇಳುವೆಯಾ!

ಸಿದ್ಧಾರ್ಥಕ — 'ಅಯಿತಪ್ಪಾ! ನೀವೀಗ ಎಲ್ಲಿಗೆ ಹೋಗುತ್ತೀರಿ?

ಕ್ಷಪಣಕ— 'ನಿನ್ನೆಯಿಂದ ಇಲ್ಲಿಂದ ಹೋಗಿ ಬರುವವರಿಗೆ ಉಂಡಿಗೆಗಳನ್ನು ಕೊಡುತ್ತಾರೆಯಂತೆ, ಉಂಡಿಗೆಯನ್ನು ತೋರಿಸದೆ ಉಕ್ಕಡದವರು ಜನರನ್ನು ಬಿಡುವುದಿಲ್ಲವಂತೆ; ರಾತ್ರಿಯಲ್ಲಿ ಎಂತೂ ಉಪಾಯವೆ ಇಲ್ಲವಂತೆ; ಉಕ್ಕಡದಲ್ಲಿ ಸಿಕ್ಕಿಬಿದ್ದು, ಚಾವಡಿಯ ಮುಂದೆ ಕೈಕಟ್ಟಿ ನಿಲ್ಲಬೇಕೆಂದಿದ್ದರೆ ಮಾತ್ರ ಹೀಗೆಯೆ ಹೋಗು; ಓಹೋ! ನೀನು ರಾಕ್ಷಸನ ಹರಿಕಾರನು, ನಿನ್ನನ್ನು ಯಾರೂ ತಡೆಯಲಿಕ್ಕಿಲ್ಲ, ಹೋಗು ಹೋಗು!! ಕೆಲಸಕ್ಕೆ ಸಮಯವಾಯಿತು. ನಾನು ಬಾಗುರಾಯಣನಲ್ಲಿಗೆ ಹೋಗಿ ಒಂದು ಉಂಡಿಗೆಯನ್ನು ಕೇಳುತ್ತೇನೆ' ಎಂದು ಹೊರಟು ಹೋದನು.

ಈ ಸಮಯದಲ್ಲಿ ಮಲಯಕೇತುವನ್ನು ಬಿಟ್ಟು, ದೂರವಾಗಿರುವುದು ಸರಿಯಲ್ಲವೆಂದು ಬಾಗುರಾಯಣನು ಒಬ್ಬ ದೂತನನ್ನು ಕರೆದು— 'ಯಾರಾದರು ಬಂದು ಉಂಡಿಗೆಯನ್ನು ಕೇಳಿದರೆ ನಾನಿದ್ದಲ್ಲಿಗೆ ಕರೆದುಕೊಂಡು ಬಾ' ಎಂದು ಹೇಳಿ, ಮಲಯಕೇತುವಿನ ಚಾವಡಿಯಲ್ಲಿಯೆ ಬಂದು ಕುಳಿತನು. ದೂತನು ಹೊರಗೆ ಹೋಗಿ ನೋಡಿ, ಉಂಡಿಗೆಗಾಗಿ ಕಾದುನಿಂತಿರುವ ಕ್ಷಪಣಕನನ್ನು ಕರೆದುಕೊಂಡು ಬಂದು ಮುಂದೆ ನಿಲ್ಲಿಸಿದನು. 'ಧರ್ಮಾತ್ಮರಿಗೆ ಧರ್ಮಾಭಿವೃದ್ಧಿಯಾಗಲಿ' ಎಂದು ಹೇಳಿ ಪಕ್ಕಲದ ಮೇಲೆ ಕುಳಿತುಕೊಂಡನು.

ಬಾಗುರಾಯಣ—'ಯಾರಿದು? ಅಮಾತ್ಯರ. ಸ್ನೇಹಿತರಾದ ಜೀವಸಿದ್ಧಿಗಳು? ಏನಯ್ಯಾ ಜೀವಸಿದ್ಧಿಗಳೆ? ಕ್ಷೇಮವೆ?

ಕ್ಷಪಣಕ—'ಓಹೋ! ಕಾರ್ಯಸಾಧಕರಾದ ನಿಮ್ಮ ಕ್ಷೇಮದಿಂದ ನಮಗೂ ಕ್ಷೇಮವಲ್ಲದೆ ಮತ್ತೇನು?

ಹೊರಗೆ ಹೀಗೆ ಮಾತನಾಡುತಿದ್ದಾಗ, ಒಳಗೆ ಮಲಗಿದ್ದ ಮಲಯಕೇತು ತನ್ನ ಮನಸ್ಸಿನಲ್ಲಿ—'ಈಗ ನಮ್ಮ ಸೇನೆ ಪಾಟಲೀಪುರಕ್ಕೆ ಹೋಗಿ ಮುತ್ತಿದರೆ, ರಾಕ್ಷಸನು ತನ್ನ ಹೆಂಡತಿಮಕ್ಕಳು ಅಲ್ಲಿ ಸಿಕ್ಕಿಬಿದ್ದಿರುವರೆಂದಾಗಲಿ, ಅಥವಾ ಚಂದ್ರಗುಪ್ತನು ನಂದವಂಶೋತ್ಪನ್ನನೆಂದಾಗಲಿ ಬಗೆದು, ಸಂಧಿಮಾಡಿಕೊಂಡಾನೊ? ಇಲ್ಲವೆ, ಆಡುವ ಮಾತಿಗೆ ತಪ್ಪಬಾರದೆಂದು ಕಾರ್ಯವನ್ನೆ ಸಾಧಿಸಿಯಾನೊ? ಯಾವುದಕ್ಕೂ ಬಾಗುರಾಯಣನೊಡನೆ

ಆಲೋಚಿಸಬೇಕು,' ಎಂದು ಕಂಚುಕಿಯನ್ನು ಕರೆದು—'ಬಾಗುರಾಯುಣನು ಎಲ್ಲಿದ್ದಾನೆ? ನೋಡಿ ಬಾ,' ಎಂದನು.

ಕಂಚುಕಿ ಹೋಗಿ ಬಂದು—'ಬಾಗುರಾಯುಣನು ಉಂಡಿಗೆಗಾಗಿ ಬಂದ ಕ್ಷಪಣಕನೊಡನೆ ಮಾತನಾಡುತಿದ್ದಾನೆ' ಎಂದನು.

ಮಲಯಕೇತು ಮನಸ್ಸಿನಲ್ಲಿ—'ಇದೇನು? ಅಮಾತ್ಯನ ಮಿತ್ರನು ಈ ನಡುವಿರುಳಲ್ಲಿ ಬಾಗುರಾಯುಣನಲ್ಲಿ ಮಾತನಾಡುತಿದ್ದಾನೆ? ನೋಡಬೇಕು,' ಎಂದು ಚಾವಡಿಗೆ ಬರುತ್ತಿರುವಾಗ ಪಂಜರದ ಗಿಳಿ ''ಪರಾಕು ಚಿಕ್ಕರಸಾ'' ಎಂದು ಕೂಗಿತು. ಅದನ್ನು ಕೇಳಿ ಬಾಗುರಾಯುಣನು, ಮಲಯಕೇತು ಬರುತ್ತಾನೆಂದು ತಿಳಿದು, ತಿಳಿಯದವನಂತೆ ಜೀವಸಿದ್ಧಿಯೊಡನೆ—'ರಾಕ್ಷಸನ ಕೆಲಸಕ್ಕಾಗಿ ಉಂಡಿಗೆಯಲ್ಲವಷ್ಟೆ?' ಎಂದನು.

ಕ್ಷಪಣಕ—(ಶಾಂತಂ ಪಾಪಂ, ಎಂದು ಕಿವಿಗಳನ್ನು ಮುಚ್ಚಿಕೊಂಡು) 'ಆ ಮೋಸಗಾರನ ಸುದ್ದಿಯನ್ನು ತೆಗೆಯಬೇಡ! ಅವನ ಹೆಸರು ಸಹ ಯಾವ ಊರಿನಲ್ಲಿ ಇಲ್ಲ ಅಲ್ಲಿಗೆ ನಾವು ಜಾರಿಬಿಡುತ್ತೇವೆ; ಒಂದು ಉಂಡಿಗೆಯನ್ನು ಕೊಟ್ಟುಬಿಡು.

ಬಾಗುರಾಯುಣ—ಏನಯ್ಯಾ? ಅವನಿಂದ ತಪ್ಪೇನು? ಇದೆಲ್ಲ ಪ್ರಣಯಕಲಹವೆಂದು ತೋರುತ್ತದೆ.

ಕ್ಷಪಣಕ—ಅವನಿಂದ ತಪ್ಪೊ? ಅವನ ಸ್ವಭಾವವೆ ಹಾಗೆ; ಅವನ ಜತೆಹಿಡಿದು ನಮಗೂ ಮೋರೆ ತೋರಿಸಲಿಕ್ಕಾಗದಂತಾಯಿತು; ಅಬ್ಬಾ! ಅವನು ರಾಕ್ಷಸನೆಂದರೆ, ಬ್ರಹ್ಮರಾಕ್ಷಸನು, ಅದೊಂದನ್ನು ಇನ್ನು ಹೇಳಬಾರದು, ಸಾಯಲಿ.

ಬಾಗುರಾಯುಣ—ಏನೇನು? ಆ ಗುಟ್ಟೇನು? ಕೇಳಿಬಿಡುವ.

ಕ್ಷಪಣಕ—ಗುಟ್ಟಲ್ಲ, ಕೊರಳು ಕೊಯಿದುದು; ನನಗೆಯೆ ನಾಚಿಕೆಯಾಗುತ್ತಿದೆ.

ಬಾಗುರಾಯುಣ—ಆಗಲಿ, ಕೇಳುವ.

ಕ್ಷಪಣಕ—ಊಂ! ಹೂಂ!

ಬಾಗುರಾಯುಣ—'ಅದು ಹೇಳಕೂಡದಷ್ಟು ಗುಟ್ಟಾಗಿದ್ದರೆ, ನೀವು ಉಂಡಿಗೆಯನ್ನು ಹೇಳಕೂಡದು.

ಕ್ಷಪಣಕ—'ನಿನಗೆ ಕೇಳಲೆಬೇಕೆಂದಿದ್ದರೆ, ಹೇಳಿಯೆ ಬಿಡುತ್ತೇನೆ;

ನನಗೇನು? ಹಾಗಾದರೆ ಕೇಳು—ಮೊದಲು ರಾಕ್ಷಸನ ಹೇಳಿಕೆಯಂತೆ ನಾವು ಪರ್ವತರಾಯನಿಗೆ ವಿಷಕನ್ಯೆಯನ್ನು ಒಪ್ಪಿಸಿ, ಅವನನ್ನು ಕೊಲ್ಲಿಸಿದುದು. ಕೆಲವು ದಿನಗಳಲ್ಲಿ ಅದು ಚಾಣಕ್ಯನಿಗೆ ಗೊತ್ತಾಗಿ, ನಮ್ಮನ್ನು ಮೋರೆಗೆ ಮಂಗಳಾರತಿ ಮಾಡಿಸಿ, ಅಲ್ಲಿಂದ ಓಡಿಸಿದನು; ನಾವೇನು ಮಾಡುವುದು! ಬೇರೇನೂ ಉಪಾಯವು ತೋರಲಿಲ್ಲ; ಇಲ್ಲಿಗೆ ಬಂದು ಪುನಃ ರಾಕ್ಷಸನ ಒಟ್ಟಿಗೆ ಇದ್ದೆವು; ಇನ್ನಾದರೂ ಅವನ ದುರ್ಬುದ್ಧಿಯನ್ನು ಬಿಡುತ್ತಾನೊ? ಇಲ್ಲಿಯೂ ಕೆಲವು ಮಂದಿ ಅರಸುಗಳೊಡನೆ ಮಾತನಾಡಿಕೊಂಡು, ಒಳಗಿಂದೊಳಗೆಯೆ ಚಂದ್ರಗುಪ್ತನಲ್ಲಿ ಸಂಧಾನವನ್ನು ನಡೆಯಿಸಿ, ಮಹಾ ವಿಶ್ವಾಸಘಾತುಕ ವ್ಯಾಪಾರವನ್ನು ಯೋಚಿಸಿದ್ದಾನೆ. ಇದು ಗೊತ್ತಾಗಿಯೂ ಇನ್ನು ನಾವು ಅವನೊಡನೆಯೆ ಇದ್ದರೆ, ಮೊದಲಿನಂತೆಯೆ ಇಲ್ಲಿಯೂ ನಮಗೆ ಮರ್ಯಾದೆ ಸಿಕ್ಕೀತು; ಈ ಸುದ್ದಿಯೆ ಬೇಡ, ಅವನು ಮಣ್ಣುತಿನ್ನಲಿ, ಉಂಡಿಗೆಯೊಂದು ಕೊಡು, ನಾವು ಜಾರಿಬಿಡುತ್ತೇವೆ.'

ಬಾಗುರಾಯಣ— ಪರ್ವತರಾಯನು ಇದ್ದರೆ ಅರ್ಧರಾಜ್ಯವನ್ನು ಕೊಡಬೇಕಾಗುತ್ತದೆ ಎಂದು ಚಾಣಕ್ಯನೆ ವಿಷಕನ್ಯೆಯ ಮೂಲಕವಾಗಿ ಕೊಲ್ಲಿಸಿದನು ಎಂದು ಹೇಳುತ್ತಾರೆ.

ಕ್ಷಪಣಕ—'ಬುದ್ಧಾ! ಛೇ! ಛೇ! ಅವನಿಗೆ ಇದೊಂದೂ ಗೊತ್ತೆ ಇಲ್ಲ; ಸುಮ್ಮಸುಮ್ಮನೆ ಒಬ್ಬನ ಮೇಲೆ ದೋಷವನ್ನು ಹೊರಿಸಬಾರದು.

ಬಾಗುರಾಯಣ—'ಹಾಗಾದರೆ ಮಲಯಕೇತುವಿನ ಮುಂದೆ ನೀವು ಹೀಗೆಯೆ ಹೇಳುವಿರೇ?'

ಕ್ಷಪಣಕ—ಸತ್ಯವಿದ್ದುದನ್ನು ಹೇಳುವುದಕ್ಕೆ ಯಾರ ಅಡ್ಡಿಯೂ ಇಲ್ಲ; ಆದರೆ ಅಂದು ಅವನಿಗೆ ಸ್ನೇಹಿತನಾಗಿದ್ದು, ಇಂದು ಹೀಗೆ ಮಾಡಬಹುದೆ? ಅವರವರು ಮಾಡಿದ ಕರ್ಮಗಳಿಗೆ ಅವರವರೆ ಹೋಗುತ್ತಾರೆ; ನಮಗೇನು ಮಾಡಬೇಕು?

ಇವುಗಳನ್ನೆಲ್ಲ ಮರೆಯಲ್ಲಿ ನಿಂತು ಕೇಳುತಿದ್ದ ಮಲಯಕೇತು, ತಂದೆಯನ್ನು ನೆನೆದುಕೊಂಡು, ಕಣ್ಣೀರು ಸುರಿಸುತ್ತ, ಕೋಪಿಸಿಕೊಂಡು ಬಾಗುರಾಯಣನ ಬಳಿಗೆ ಬಂದು—'ಬಾಗುರಾಯಣ! ಸತ್ಯವಾದಿಯಾದ ಈ ಕ್ಷಪಣಕನು ಹೇಳಿದ ಮಾತುಗಳನ್ನು ಕೇಳಿ, ಒಮ್ಮೆ ಮರೆತುಹೋದ

ವ್ಯಥೆ ಪುನಃ ಇಮ್ಮಡಿಯಾಯಿತು,' ಎಂದನು. ಕ್ಷಪಣಕನು ಹೆದರಿದವನಂತೆ ಹಿಂದೆ ಹಿಂದೆ ಜಾರಿ, ಕಣ್ಮರೆಯಾಗುತಿದ್ದನು.

ಮಲಯಕೇತು—'ಬಾಗುರಾಯಣ! ರಾಕ್ಷಸನು ನಮ್ಮ ತಂದೆಯ ಮಿತ್ರನೆಂದು ಅವನಿಗೆ ಸರ್ವಾಧಿಕಾರವನ್ನು ಕೊಟ್ಟೆವು; ಆದರೆ ಈಗ ನೋಡುವಾಗ ಇವನು ನಿಜವಾದ ರಾಕ್ಷಸನೆ; ಒಳಗಿಂದೊಳಗೆ ಏನೆಲ್ಲ ಮಾಡಿ, ನಮ್ಮನ್ನು ಯಾವ ಅವಸ್ಥೆಗೆ ತಂದು ಮುಟ್ಟಿಸಿಬಿಟ್ಟನು?'

ಬಾಗುರಾಯಣ—'ಮಲಯಕೇತು! ನೀನು ಯಾಕೆ ಇಷ್ಟು ಗಡಿಬಿಡಿಮಾಡಿಕೊಳ್ಳುವುದು? ನಿಧಾನವೆ ಪ್ರಧಾನವು; ರಾಜಕೀಯ ವಿಷಯಗಳಲ್ಲಿ ವೈರಿಗಳು, ಸ್ನೇಹಿತರು ಎಂದಿಲ್ಲ; ಒಮ್ಮೊಮ್ಮೆ ವೈರಿಗಳಿಂದಲೆ ದೊಡ್ಡ ದೊಡ್ಡ ಉಪಕಾರಗಳು ಆಗಿಹೋಗುವುದೂ ಉಂಟು; ಈಗ ರಾಕ್ಷಸನು ತನ್ನ ಕೆಲಸಕ್ಕಾಗಿ ನಿನಗೆ ಸಹಾಯವನ್ನು ಮಾಡಿದರೂ ಮಾಡಬಹುದು; ನೋಡುವ, ಅವಸರವೇನು? ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು; ಚೆನ್ನಾಗಿ ಆಲೋಚಿಸಿಕೊಳ್ಳುವ. ನಿನ್ನ ಬಳಿಯಲ್ಲಿ ನಾನೊಬ್ಬನು ಕಲ್ಲಿನಂತೆ ಇರುವಾಗ ಸದ್ಯಕ್ಕೆ ಅಂತಹ ಭಯವೇನೂ ಇಲ್ಲ; ಕೋಪವೆಂಬುದು ಬಹಳ ಕೆಟ್ಟದು.

ಮಲಯಕೇತು—'ಮಿತ್ರನೆ! ನೀನು ಹೇಳಿದ ಮಾತು ಸರಿ; ನೀನಿಲ್ಲದಿದ್ದರೆ ಸಿಟ್ಟಿನಿಂದ ಒಂದಕ್ಕೊಂದು ಆಗಿ ಹೋಗುತ್ತಿತ್ತು; ಒಳ್ಳೆಯದು' ಎಂದು ಅಂತಃಪುರಕ್ಕೆ ಹೊರಟು ಹೋದನು.

## ೧೫. ಸಿದ್ಧಾರ್ಥಕನ ವಿಚಾರಣಾ[3]

ಮರುದಿನ ರಾತ್ರಿ ಸಿದ್ಧಾರ್ಥಕನು ಉಕ್ಕಡದ ಬಳಿಗೆ ಬಂದು ನಿಂದು, ಅತ್ತಿತ್ತ ನೋಡಿ, ಸ್ವಲ್ಪ ಸದ್ದಾದರೆ ಹಿಂದೆ ಹಿಂದೆ ಜಾರುತ್ತ, ಪುನಃ ಉಕ್ಕಡದ ಬಳಿಗೆ ಹೋಗುತ್ತ, ತಪ್ಪಿಸಿಕೊಂಡು ಹೋಗುವುದಕ್ಕೆ' ಎಡೆಯನ್ನು ಹುಡುಕುತಿದ್ದನು. ಅಲ್ಲಿದ್ದ ಕಾವಲುಗಾರರು ಅವನನ್ನು ನೋಡಿ—ಇವನು ಯಾರೊ ಒಬ್ಬ ಕಳ್ಳನಾಗಿರಬೇಕು, ದಟ್ಟಿಯಲ್ಲೊಂದು ಲಿಪಾಪೆಯನ್ನು ಕಟ್ಟಿಕೊಂಡಿದ್ದಾನೆ, ಎಂದು ಅವನನ್ನು ಹಿಡಿದು—'ಎಲ್ಲಿಗೆ ಹೋಗುವೆ? ಉಂಡಿಗೆಯನ್ನು ತೋರಿಸು!' ಎಂದು ಹೆದರಿಸಿದರು.

ಸಿದ್ಧಾರ್ಥಕ—"ಉಂಡಿಗೆ" ಎಂದು ಅತ್ತಿತ್ತ ನೋಡಿ,—ನನ್ನಲ್ಲಿಲ್ಲ,

ದಮ್ಮಯ್ಯ! ನಿಮ್ಮ ಕಾಲು ಹಿಡಿದುಕೊಳ್ಳುತ್ತೇನೆ; ಹೇಗಾದರೂ ಮಾಡಿ ಬಿಟ್ಟುಬಿಡಿರಿ.

ದೂತ—ನಿನಗೆ ಈ ನಡುವಿರುಳಲ್ಲಿ ಅಂತಹ ಕೆಲಸವೇನೊ?

ಸಿದ್ಧಾರ್ಥಕ—ಕೆಲಸವುಂಟು, ಪುನಃ ಬರುತ್ತೇನೆ, ನಿಮ್ಮನ್ನು ನಾನು ಮರೆಯುಲಿಕ್ಕಿಲ್ಲ, ಬಿಟ್ಟುಬಿಡಿರಿ; ನನ್ನಿಂದಲೂ ಏನಾದರೂ ಉಪಕಾರವಿದ್ದೀತು, ನೋಡುವ.

ದೂತರು—ಇವನೊಬ್ಬನು ಕಳ್ಳನು; ಇವನನ್ನೂ ಇವನಲ್ಲಿರುವ ಕಾಗದವನ್ನೂ ತೆಗೆದುಕೊಂಡು ಹೋಗಿ, ಬಾಗುರಾಯಣರ ವಶಕ್ಕೆ ಒಪ್ಪಿಸಿ ಬಿಟ್ಟರೆ ನಮ್ಮ ಕೆಲಸವು ಮುಗಿಯಿತು.' ಎಂದು ಅವನನ್ನು ಹಿಡಿದು ರಾಜದ್ವಾರದ ಬಳಿಯಲ್ಲಿ ತಂದು ನಿಲ್ಲಿಸಿ, ಬಾಗಿಲವರಿಗೆ ತಿಳಿಸಲು ಅವರು, ಹೋಗಿ ಬಾಗುರಾಯಣನೊಡನೆ ಮಾತನಾಡುತ್ತಿದ್ದ ಮಲಯಕೇತುವಿನ ಸನ್ನಿಧಿಯಲ್ಲಿ ಅರಿಕೆಮಾಡಿದರು. ಅದಕ್ಕೆ ಮಲಯಕೇತು ಕಾಗದವನ್ನು ತರುವಂತೆ ಅಪ್ಪಣೆ ಮಾಡಿದನು. ಆಗ ಬಾಗುರಾಯಣನು—

ಆ ಉಕ್ಕಡದಲ್ಲಿ ಸಿಕ್ಕಿದವನು ಇದುವೆ ಊರವನೋ? ಹೊಸಬನಾಗಿ ಬಂದವನೊ?

ದೂತ—ಹೊಸಬನಲ್ಲ; ಅಮಾತ್ಯರಲ್ಲಿದ್ದವನು; ಸಿದ್ಧಾರ್ಥಕನು.

ಬಾಗುರಾಯಣ—ಹಾಗಾದರೆ ಅವನು ಇಲ್ಲೀಗ ಬಂದು ಯಾಕೆ ಉಂಡಿಗೆಯನ್ನು ಕೇಳಲಿಲ್ಲ?

ಸಿದ್ಧಾರ್ಥಕ—(ಹೊರಗಿನಿಂದ) ಸ್ವಾಮಿಾ! ಅವಸರದಿಂದ ಹೋಗಬೇಕಾಯಿತು, ಎಡೆಸಿಕ್ಕಲಿಲ್ಲ.

ಬಾಗುರಾಯಣ—(ಅವನನ್ನು ಒಳಗೆ ತರಿಸಿ) 'ಹೌದೇನೊ! ರಾಜಾಜ್ಞೆಯನ್ನು ಮಾರಿ ಹೋಗುವಷ್ಟು ದೊಡ್ಡ ಕೆಲಸವೇನೊ?'

ಮಲಯಕೇತು—'ಅವನ ಕೈಯಲ್ಲಿ ಕಾಗದವಿತ್ತಂತೆ, ಓದಿನೋಡು.

ಬಾಗುರಾಯಣ—(ಲಿಪಾಪೆಯನ್ನು ನೋಡಿ) 'ಇದರಲ್ಲಿ ಅಮಾತ್ಯನ ಮುದ್ರೆ ಇದೆ,' ಎಂದು ಹೇಳಿ, ಮುದ್ರೆ ಹಾಳಾಗದಂತೆ ಲಿಪಾಪೆಯನ್ನು ಬಿಡಿಸಿ,—

ಸ್ಥಳದಲ್ಲಿರುವ ಸ್ನೇಹಿತನಿಗೆ—ಪರಸ್ಥಳದಲ್ಲಿರುವ ಒಬ್ಬ ಆಪ್ತನು ಮಾಡುವ ನಮಸ್ಕಾರಗಳು.

ನನ್ನ ವಿರೋಧಿಯನ್ನು ನಿರಾಕರಿಸಿ, ಅವನೆದುರಿಗೆ ನಿನ್ನನ್ನು ಹೊಗಳಿದುದು ತಿಳಿಯಿತು. ಕಳುಹಿಸಿದ ಮೂರು ಕರಡಿಗೆಗಳೂ ಕೈ ಸೇರಿ ಸಂತೋಷವಾಯಿತು. ಇಲ್ಲಿ ನಮಗೆ ಕೆಲವರು ಆಪ್ತರಿದ್ದಾರೆ; ಅವರಿಂದಲೇ ನಮ್ಮ ಕಾರ್ಯವಾಗಬೇಕು; ಕೆಲಸವಾದ ಮೇಲೆ ಕೆಲವರಿಗೆ ವಿರೋಧಿಯ ಸೈನ್ಯವನ್ನೂ, ಉಳಿದವರಿಗೆ ವೈರಿಯ ರಾಜ್ಯವನ್ನೂ ಕೊಡ ಬೇಕು; ಇದಿಷ್ಟು ನೆನಪಿರಲಿ; ಕಾಗದದೊಟ್ಟಿಗೆ ಕಳುಹಿಸಿದ ಒಡವೆಗಳನ್ನು ನೋಡಿದರೆ ನನಗಿಲ್ಲಿ ಎಷ್ಟು ಮಟ್ಟಿಗೆ ಕೈಯಿದೆ ಎಂಬುದು ತಿಳಿದೀತು; ಉಳಿದ ವಿಷಯಗಳನ್ನು ಈ ಕಾಗದವನ್ನು ತಂದವನು ಬಾಯಿಮಾತಿನಿಂದ ಹೇಳುವನು.

ಎಂದು ಓದಿ ಮಲಯಕೇತುವಿಗೆ ತಿಳಿಸಿ ಸಿದ್ಧಾರ್ಥಕನನ್ನು ನೋಡಿ—'ಹೌದೇನೊ! ಈ ಕಾಗದವನ್ನು ನಿನ್ನ ಕೈಯಲ್ಲಿ ಕೊಟ್ಟವರು ಯಾರು?' ಎಂದು ಕೇಳಿದನು.

ಸಿದ್ಧಾರ್ಥಕ—'ಬುದ್ಧೀ! ಅವರ ಹೆಸರು ಮನಸ್ಸಿನಲ್ಲುಂಟು, ಬಾಯಿಗೆ ಬರುವುದಿಲ್ಲ; ಹೇಳುತ್ತೇನೆ.' ಇವರು ಚಿಃ! ಈ.........

ಬಾಗುರಾಯಣ—'ಆಯಿತು; ಹೆಸರು ಬಾಯಿಗೆ ಬರುವುದಿಲ್ಲ; ನಿನ್ನಲ್ಲಿರುವ ಒಡವೆಯೇನು? ತೋರಿಸು.

ಸಿದ್ಧಾರ್ಥಕ—ಒಡವೆ! ಎಂದರೆ? ಹೂಂ—

ಬಾಗುರಾಯಣನು ಇಬ್ಬರು ರಾಜದೂತರನ್ನು ಕರೆದು—'ಇವರನ್ನು ಆಚೆಗೆ ತೆಗೆದುಕೊಂಡು ಹೋಗಿ, ಚೆನ್ನಾಗಿ ಕೇಳಿ ಕರೆದುಕೊಂಡು ಬನ್ನಿರಿ' ಎಂದನು. ಅವರು ಇವನನ್ನು ಹಿಡಿದು ದರದರನೆ ಎಳೆದುಕೊಂಡು ಹೋಗಿ, ಅಮುಕಿ, ಕೊರಳಿಗೆ ಕೈಗೊಟ್ಟು ನೂಕಿ, ಕಸೆಗಳಿಂದ ಬಲವಾದ ಛಡಿಗಳನ್ನು ಕೊಟ್ಟರು. ಸಿದ್ಧಾರ್ಥಕನು ಪೆಟ್ಟಿನ ಉರಿಗೆ 'ಹಾಯ್, ಹೊಯ್' ಎಂದು ಅತ್ತಿತ್ತ ಹಾರುತ್ತಿರುವಾಗ ಕಂಕುಳಲ್ಲಿದ್ದ ಕರಡಿಗೆ ಕೆಳಗೆ ಬಿತ್ತು. ದೂತರು ಅದನ್ನು ತಂದು ರಾಜಪುತ್ರನ ಮುಂದಿಟ್ಟು—'ಇದು ಅವನಲ್ಲಿಯೇ ಇತ್ತು ಎಂದರು.

ಬಾಗುರಾಯಣನು ಅದನ್ನು ನೋಡಿ,—ಈ ಕರಡಿಗೆಯ ಮುದ್ರೆಯೂ ಕಾಗದದ ಮುದ್ರೆಯೂ ಒಂದೆ' ಎಂದನು. ಅದಕ್ಕೆ ಮಲಯಕೇತು— 'ಮುದ್ರೆಯೊಡೆಯದಂತೆ ಒಳಗೆ ಏನಿದೆ ನೋಡು' ಎಂದನು. ಬಾಗು

ರಾಯಣನು ಹಾಗೆಯೇ ಮುಚ್ಚಳವನ್ನು ತೆಗೆದು ಆಭರಣಗಳನ್ನು ತೋರಿಸಿದನು.

ರಾಜಕುಮಾರನು ಅವುಗಳನ್ನು ನೋಡಿ,—'ಇವು ಅಂದು ನಾವು ಅಮಾತ್ಯನಿಗೆ ಕೊಟ್ಟ ಆಭರಣಗಳು; ಸರಿ, ಇವನ ಮನಸ್ಸು ನಮಗೆ ಗೊತ್ತಾಯಿತು; ಅಂಗೈ ಹುಣ್ಣಿಗೆ ಕನ್ನಡಿ ಯಾಕಯ್ಯಾ?' ಎಂದು ಕೇಳಿದನು.

ಬಾಗುರಾಯಣನು, 'ಇನ್ನು ನೋಡು' ಎಂದು ರಾಜಭಟರನ್ನು ನೋಡಲು, ಅವರು ಹೋಗಿ ಗಂಟುಕಸೆಯಿಂದ 'ರಫ್, ರಫ್' ಎಂದು ನಾಲ್ಕಾರು ಛಡಿಗಳನ್ನು ಕೊಟ್ಟರು. ಸಿದ್ಧಾರ್ಥಕನು 'ಅಯ್ಯಯ್ಯೊ' ಎಂದು ನೆಲಕ್ಕೆ ಬಿದ್ದು ಉರುಳಾಡಿ ಕೈ ಮುಗಿದುಕೊಂಡು—

ಬುದ್ಧೀ! ದಮ್ಮಯ್ಯ! ಹೇಳುತ್ತೇನೆ.

ಬಾಗುರಾಯಣ—ಹೇಳು; ಹೇಳಿದರೆ ನಿನ್ನನ್ನು ಏನೂ ಮಾಡುವುದಿಲ್ಲ.

ಸಿದ್ಧಾರ್ಥಕ—(ಕೈ ಮುಗಿದುಕೊಂಡು) ಅಮಾತ್ಯರು 'ಚಂದ್ರಗುಪ್ತನಿಗೆ ಕೊಡು' ಎಂದು ಕಾಗದವನ್ನೂ ಕರಡಿಗೆಯನ್ನೂ ಕೊಟ್ಟರು.

ಬಾಗುರಾಯಣ—ಅದು ನಮಗೆ ಗೊತ್ತಿದೆ; ಬಾಯಿಮಾತಿನಿಂದ ಏನೇನು ಹೇಳಬೇಕೆಂದು ಹೇಳಿದ್ದಾರೆ? ನಿಜ ಹೇಳು.

ಸಿದ್ಧಾರ್ಥಕ—ಇಲ್ಲಿ ನಮಗೆ ಮಿತ್ರರಾದ ಐದು ಮಂದಿ ಅರಸುಗಳಿದ್ದಾರೆ; ಅವರಿಂದ ನಮ್ಮ ಕೆಲಸವಾಗುವುದು; ಯಾರೆಂದರೆ—ಕುಲೂತಪತಿ ಚಿತ್ರವರ್ಮನು, ಮಲಯಪತಿ ಸಿಂಹನಾದನು, ಕಾಶ್ಮೀರಪತಿ ಪುಷ್ಕರಾಕ್ಷನು, ಸಿಂಧುಪತಿ ಸಿಂಧುಷೇಣನು, ಪಾರಸೀಕಪತಿ ಮೇಘನಾದನು, ಇವರ ಹೆಸರುಗಳನ್ನು ಹೇಳು ಎಂದು ಹೇಳಿದ್ದಾರೆ.

ಮಲಯಕೇತು—ಓಹೋ! ಚಿತ್ರವರ್ಮಾದಿಗಳೂ ಹಾಗೋ? ಇವರೂ ರಾಕ್ಷಸನೊಡನೆ ಸೇರಿ ಈ ಆಲೋಚನೆಯನ್ನು ಮಾಡಿದರು! ಇನ್ನು ಯಾರನ್ನು ನಂಬಬಹುದು? ಹರಹರಾ! ಕಾಲ ಕಷ್ಟ! ಇವರನ್ನು ನಮ್ಮ ತಂದೆಯ ಮುಂದಕ್ಕೆ ತಂದುದು, ಹಾವಿಗೆ ಹಾಲೆರದಂತಾಯಿತು! ಎಂದು ಹೇಳಿ ಕಂಚುಕಿಯನ್ನು ಕರೆದು—'ನೀನು ಈಗಲೆ ಹೋಗಿ ಅಮಾತ್ಯರು ಏನು ಮಾಡುತ್ತಾರೆ? ನೋಡಿ ಬಾ' ಎಂದನು.

ಕಂಚುಕಿ ಹೋಗಿ ನೋಡುವಾಗ ರಾಕ್ಷಸನು ದೂತನನ್ನು ಕರೆದು—'ಸೇನೆ ಎಲ್ಲವೂ ಗೌಡ ದೇಶಕ್ಕೆ ಹೊರಡಲಿ, ರಾಜಪುತ್ರನ ಸುತ್ತು ಮುತ್ತಲೂ ಚಿತ್ರವರ್ಮಾದಿಗಳು ವ್ಯೂಹರಚನೆ ಮಾಡಿಕೊಂಡು ಬರಲಿ, ಚೀನ ಹೂಣಾಧಿಪರು ನಮ್ಮ ಹಿಂದೆ ಇರಲಿ, ಶೇಖರನು ಪುರರಕ್ಷೆಗೆ ನಿಲ್ಲಲಿ, ಎಂದು ಆಯಾಯ ದಳಪತಿಗಳಿಗೆ ತಿಳಿಸಿ ಬಾ' ಎಂದು ಹೇಳುತಿದ್ದನು. ಅದನ್ನು ಕೇಳಿ ಕಂಚುಕಿ ಹಾಗೆಯೆ ಬಂದು ಅರಿಕೆ ಮಾಡಿದನು.

ಮಲಯಕೇತು—ಬಾಗುರಾಯಣ! ರಾಕ್ಷಸನ ಸೈನ್ಯದ ಸಿದ್ಧತೆಯೊಂದು ತಿಳಿಯಿತಲ್ಲ! ನಮ್ಮ ಶೇಖರನೂ ಪಾರ್ವತೇಯ ಸೈನ್ಯವೂ ಇಲ್ಲಿಯೇ ಇರಬೇಕಂತೆ! ಚಿತ್ರವರ್ಮಾದಿಗಳು ನಮ್ಮ ಹಿಂದೆಮುಂದೆ! ಇದಕ್ಕಿನ್ನು ಪಂಚಾಂಗವೂ ಬೇಡ, ಪ್ರಮಾಣವೂ ಬೇಡ, ಎಂದು ಕಿಡಿಕಿಡಿಯಾಗಿ ಕಂಚುಕಿಯನ್ನು ಕರೆದು—'ಆ ಅಮಾತ್ಯರನ್ನು ಕರೆದುಕೊಂಡು ಬಾ' ಎಂದು ಕಳುಹಿಸಿದನು. ಅವನು ಅರಸನ ಭಾವವನ್ನು ನೋಡಿ, ನೆಟ್ಟನೆ ಅಮಾತ್ಯನ ಮನೆಗೆ ಹೊರಟು ನಡೆದನು.

## ೧೬. ರಾಕ್ಷಸನ ವಿಚಾರಣೆ

ಅಮಾತ್ಯನು ಎರಗುವ ಮಂಚದ ಮೇಲೆ ಕುಳಿತುಕೊಂಡು ಮುಂದಣ ಯುದ್ಧದ ವಿಷಯವನ್ನು ಆಲೋಚಿಸುತ್ತಿದ್ದನು. ಆಗ ಕಂಚುಕಿಯು ಬಂದು "ಹೊರಡಿರಿ, ಹೊರಡಿರಿ, ದೊರೆಗಳ ಅಪ್ಪಣೆಯಾಗಿದೆ" ಎಂದನು.

ಅವನನ್ನು ಹೀಗೆ ನೋಡಿ ರಾಕ್ಷಸನು—ಇದೇನು? ಇದುವರೆಗೆ ಬಾಯಿಗೆ ಕೈ ಮುಚ್ಚಿಕೊಂಡು ದೂರದಲ್ಲಿ ಬಂದು ನಿಲ್ಲುತ್ತಿದ್ದವನು, ಈಗ ಇಷ್ಟು ಗೌಜಿಮಾಡುತ್ತಾನೆ? ಯಾರೊ ವಂಚಕರು ಮಲಯಕೇತುವಿನ ಮನಸ್ಸನ್ನು ಕೆಡಿಸಿರಬೇಕು; ಅವನು ಬಾಯಿಂದೇನಾದರೂ ಬಿಡುಮಾತುಗಳನ್ನೂ ಹೇಳಿರಬೇಕು; ಇಲ್ಲದಿದ್ದರೆ, ಈ ಕಂಚುಕಿ ಹೀಗೆ ಇಷ್ಟು ನನ್ನನ್ನು ಹಗುರಮಾಡುತ್ತಿರಲಿಲ್ಲ; ಹುಡುಗರ ಕೈಗೆ ಯಜಮಾನಿಗೆ ಬಂದರೆ, ಅವರು ಅನೇಕ ವೇಳೆ ಮೋಸಗಾರರ ಬಲೆಯಲ್ಲಿ ಸಿಕ್ಕಿ ಲಾಭವನ್ನು ನಷ್ಟವೆಂದೂ, ನಷ್ಟವನ್ನು ಲಾಭವೆಂದೂ ಮೋಸಹೋಗುತ್ತಾರೆ ಎಂದು ಆಲೋಚಿಸಿ, ಕಂಚುಕಿಯನ್ನು ನೋಡಿ—ಬರುತ್ತೇವೆ, ಎಂದು ಶಕಟದಾಸನನ್ನು ಕರೆದು, ಆಭರಣಗಳನ್ನು ತರಿಸಿ, ಧರಿಸಿಕೊಂಡು ಹೊರಟುಬಂದನು. ಆಗ ಬಾಗು

ರಾಯಣನು ಸಿದ್ಧಾರ್ಥಕನನ್ನು ಬೇರೊಂದು ಕಡೆಯಲ್ಲಿರಿಸಿ, ತಾನು ಬಂದು ಮಲಯಕೇತುವಿನ ಬಳಿಯಲ್ಲಿ ಕುಳಿತುಕೊಂಡನು.

ರಾಕ್ಷಸನು ಸಭೆಗೆ ಬಂದು ಮಲಯಕೇತುವಿನ ಮೋರೆಯನ್ನು ನೋಡಿ,—ಏನೊ, ಅರಸುಮಗನು ಬೇಸರಿನಿಂದಿರುವಂತೆ ತೋರುತ್ತದೆ. ಯಾರೊ, ಏನೋ ಮಗ್ಗಸ್ಸೈದಿರಬೇಕು, ಎಂದು ತಿಳಿದುಕೊಂಡು, ಬಳಿಗೆ ಬಂದು, ಅರಸುಮಗನಿಗೆ ಜಯವಾಗಲಿ, ಎಂದು ಹರಸಿದನು.

ಮಲಯಕೇತು— (ಎದ್ದು ನಿಂತು) 'ಅಮಾತ್ಯರಿಗೆ ನಮಸ್ಕಾರವು. (ಎದ್ದು ಅವನನ್ನು ತನ್ನ ಹಾಸಿಗೆಯಲ್ಲಿ ಕುಳ್ಳಿರಿಸಿಕೊಂಡು) ನಿಮ್ಮನ್ನು ನೋಡಬೇಕೆಂದು ಕರೆಯಿಸಿದೆನು,' ಎಂದನು.

ರಾಕ್ಷಸ—ಸೈನ್ಯವನ್ನು ಸರಿಗೊಳಿಸುವುದರಲ್ಲಿ ಬದ್ದು ನಿನ್ನನ್ನು ಕಾಣುವುದಕ್ಕೆ ಆಗಲಿಲ್ಲ.

ಮಲಯಕೇತು—ನೀವು ಸೇನೆಯನ್ನು ಹೇಗೆ ಅಣಿಗೊಳಿಸಿದ್ದೀರಿ?

ರಾಕ್ಷಸ—(ಮೊದಲು ಕಂಚುಕಿ ಬಂದು ಹೇಳಿದಂತೆ ಹೇಳಿದನು)

ಮಲಯಕೇತು—ಹೂಂ' ಸರಿಸರಿ!! ಅಮಾತ್ಯರೆ ಈಗ ಪಾಟಲೀಪುರಕ್ಕೆ ಇಲ್ಲಿಂದ ಹೋಗತಕ್ಕವರು ಯಾರಾದರೂ ಇದ್ದಾರೆಯೆ?

ರಾಕ್ಷಸ—ಯಾರಾದರೂ ಯಾರು? ನಾವೇ ಸೈನ್ಯವನ್ನು ತೆಗೆದುಕೊಂಡು ಹೋಗುವವರಿದ್ದೇವೆ.

ಮಲಯಕೇತು—'ಈ ಕಾಗದವನ್ನು ನೋಡಿರಿ; ಇದು ಯಾರದು? ಇದರಲ್ಲಿರುವ ಮುದ್ರೆ ಯಾರದು? ಇದರ ಅಭಿಪ್ರಾಯವೇನು ಹೇಳಿರಿ?' ಎಂದು ಕಾಗದವನ್ನು ಕೊಟ್ಟನು.

ರಾಕ್ಷಸ—(ಓದಿಕೊಂಡು) ಇದು ನಮ್ಮ ವಿರೋಧಿಗಳದು; ಮುದ್ರೆಯೂ ಹಾಗೆಯೆ.

ಮಲಯಕೇತು—'ಹಾಗಾದರೆ ಈ ಕರಡಿಗೆ ಯಾರದು?' ಎಂದು ಮುಂದಿಟ್ಟನು.

ರಾಕ್ಷಸ—ಆಭರಣಗಳನ್ನು ನೋಡಿ, ಚಾಣಕ್ಯನ ಉಪಾಯವೆಂದು ತಿಳಿದು ಬೆಪ್ಪಾಗಿ ಸುಮ್ಮನೆ ನಿಂತುಬಿಟ್ಟನು.

ಮಲಯಕೇತು—ಏನಯ್ಯಾ! ಸುಮ್ಮನೆ ನಿಂತಿದ್ದೀರಿ?

ರಾಕ್ಷಸ—ಇದು ನಮ್ಮದಲ್ಲ.

ಮಲಯಕೇತು — ಇದು ನಿಮ್ಮದೆಂದು ಆಗಿಹೋದರೆ? ಹಾಗಾದರೆ ನಾವು ನಿಮಗೆ ಕೊಟ್ಟ ಆಭರಣಗಳೆಲ್ಲಿವೆ? ತರಿಸಿರಿ.

ರಾಕ್ಷಸ — ನೀನು ಕೊಟ್ಟವುಗಳನ್ನು ಒಂದು ಸಂತೋಷಕಾರ್ಯಕ್ಕಾಗಿ ಒಬ್ಬ ದೂತನಿಗೆ ಕೊಟ್ಟಿದ್ದೇವೆ. ಅವುಗಳೆ ಇವು; ಇನ್ನೊಬ್ಬರಿಗೆ ಕೊಟ್ಟ ಮೇಲೆ ಅವು ನಮ್ಮವಲ್ಲವಷ್ಟೆ?

ಬಾಗುರಾಯಣ — ಏನಯ್ಯ! ಅಮಾತ್ಯರೆ? ನೀವೆ ಧರಿಸಿಕೊಳ್ಳಬೇಕೆಂದು ಅರಸುಮಗನು ತಾನೆ ಕೈಯೇರಿ ಕೊಟ್ಟುದನ್ನು ಹೀಗೆ ಒಬ್ಬ ಅಲ್ಪನಿಗೆ ಕೊಡಬಹುದೆ? ಇದು ನಿಮ್ಮ ಮನಸ್ಸಿಗೆ ಸರಿಯೆ? ನಿಮ್ಮಂತವರೆ ಹೀಗೆ ಮಾಡಿದ ಮೇಲೆ ಮತ್ತೇನುಳಿಯಿತು?

ರಾಕ್ಷಸ — ಪಾತ್ರವನ್ನು ನೋಡಿ ಕೊಟ್ಟುದಿಲ್ಲ; ಕೆಲಸವನ್ನು ನೋಡಿ—

ಮಲಯಕೇತು — ಬಾಗುರಾಯಣ! ಅವರು ಕೆಲಸವನ್ನು ನೋಡಿಯೆ ಕೊಟ್ಟಿರಬಹುದು: ಅಮಾತ್ಯರು ಹೇಳುವುದು ಸತ್ಯವೆ.

ಬಾಗುರಾಯಣ — ಅಮಾತ್ಯರೆ! ಈ ಕಾಗದದ ಮುದ್ರೆಯೂ, ಕರಡಿಗೆಯ ಮುದ್ರೆಯೂ ನಿಮ್ಮದಲ್ಲವೆ? ಕಾಗದದ ಬರಹವು ನಿಮ್ಮ ಕರಣೀಕನದಲ್ಲವೆ? ಚೆನ್ನಾಗಿ ನೋಡಿರಿ.

ಮಲಯಕೇತು — (ಒಬ್ಬ ದೂತನನ್ನು ಕಳುಹಿಸಿ ಶಕಟದಾಸನ ಕೈಬರಹವನ್ನು ತರಿಸಿ) ಇವು ಎರಡೂ ಒಬ್ಬನದೊ? ಅಲ್ಲವೊ? ನೋಡಿರಿ.

ರಾಕ್ಷಸ — (ಮನಸ್ಸಿನಲ್ಲಿ) ‘ಇವು ಎರಡೂ ಒಬ್ಬನದೆ, ಆಹಾ! ಶಕಟದಾಸನೂ ಹೀಗೆಯೊ? ಇನ್ನೇನು! ಶಕಟದಾಸನಿಗೆ ನನ್ನ ಗುಟ್ಟೆಲ್ಲ ಗೊತ್ತಿದೆ. ಇದೆಲ್ಲ ಚಾಣಕ್ಯ, ಶಕಟದಾಸ, ಸಿದ್ಧಾರ್ಥಕರು ಕೂಡಿಯೆ ಆದುದು; ಆಃ! ನಮ್ಮ ಮಾತಿನಿಂದಲೆ ನಾವು ಸಿಕ್ಕುಬಿದ್ದೆವು;’ ಎಂದು ಸುಮ್ಮನಿದ್ದನು.

ಮಲಯಕೇತು--(ಅಮಾತ್ಯನನ್ನು ದುರುಗುಟ್ಟಿಕೊಂಡು ನೋಡಿ) ಕಂಚುಕಿ ಈ ಅಮಾತ್ಯರ ಮೈಮೇಲಿರುವ ಆಭರಣಗಳು ಯಾರವು? ಬಲ್ಲೆಯಾ?

ಕಂಚುಕಿ — ಹೌದು ಬುದ್ಧೀ! ಬಲ್ಲೆನು.

ಮಲಯಕೇತು — ಅಮಾತ್ಯರೆ! ಇವು ನಿಮಗೆ ಎಲ್ಲಿಂದ ಸಿಕ್ಕಿದುವು?

ರಾಕ್ಷಸ — ವರ್ತಕರಿಂದ.

ಮಲಯಕೇತು — ಕಂಚುಕಿ! ಅಮಾತ್ಯರು ಹೇಳುವುದು ಕೇಳಿತೆ?

ಕಂಚುಕಿ—ಬುದ್ಧೀ! ಈ ಒಡವೆಗಳು ನಮ್ಮ ದೊಡ್ಡ ರಾಯರು ಪಾಟಲೀಪುರಕ್ಕೆ ಹೋಗುವಾಗ ಧರಿಸಿಕೊಂಡು ಹೋದುವುಗಳು.

ಒಡವೆಗಳನ್ನು ನೋಡಿ ತಂದೆಯು ನೆನಪಾಗಿ, ಕಣ್ಣೀರು ಸುರಿದು ಮಲಯಕೇತು—ಆಃ! ಇದುವೆ ಆಭರಣಗಳನ್ನು ಧರಿಸಿಕೊಂಡು, ತಾರಾ ಗಣದ ನಡುವಣ ಪೂರ್ಣ ಚಂದ್ರನಂತೆ ರಾಜಾಧಿರಾಜರ ಮಧ್ಯದಲ್ಲಿ ಬೆಳಗುತಿದ್ದ ನೀನು ಈ ಕುಹಕಿಗಳ ಕುಹಕೋಪಾಯಕ್ಕೆ ಒಳಗಾಗಿ, ನಮ್ಮೆಲ್ಲರನ್ನು ಅನಾಥರನ್ನಾಗಿ ಮಾಡಿ, ಪರಲೋಕಕ್ಕೆ ಹೋದೆ! ಈ ನೀಚ ರನ್ನು ಮಿತ್ರರೆಂದು ಭಾವಿಸಿದುದರಿಂದ, ಈ ಗತಿಯಾಯಿತು! ಇನ್ನೂ ಮುಗಿಯಲಿಲ್ಲ! 'ಆಡು ಹೋದ ಕಾಡು ಹಾಳು' ಎಂಬಂತೆ, ಇಂತವರಿದ್ದ ಊರಿಗೆ ಏಳಿಗೆಯುಂಟೆ?' ಎಂದು ಹಂಬಲಿಸಿದನು.

ಇದನ್ನು ನೋಡಿ ರಾಕ್ಷಸನು—'ಆಹಾ! ಈ ಆಭರಣಗಳೂ ಪರ್ವ ತೇಶ್ವರನವೆಂದಾದ ಮೇಲೆ, ಇನ್ನು ಏನು ಹೇಳಿದರೂ ಇವನಿಗೆ ದಕ್ಕಿತು' ಎಂದು ಯೋಚಿಸುತಿದ್ದನು.

ಮಲಯಕೇತು—ಬಾಗುರಾಯಣ! ಈ ಅಮಾತ್ಯರು ಹೇಳಿದರಲ್ಲ; ಈ ಒಡವೆಗಳನ್ನು ವರ್ತಕರಿಂದ ತೆಗೆದುಕೊಂಡುದೆಂದು; ಈ ಮಾತು ನಿನಗೆ ಸರಿಯೊ?

ಬಾಗುರಾಯಣ—ಕಳುಹಿಸಿದ ಒಡವೆಗಳು ಮುಟ್ಟಿದುವು ಎಂದು ಕಾಗದದಲ್ಲಿದೆ, ಅವುಗಳು ಇವುಗಳೆ ಆಗಿರಬಹುದು; ಮತ್ತೆ ಪರರಾಜರ ಆಭರಣಗಳು ಕೈವಶವಾದರೆ, ಒಂದು ಹೆಸರಿಗೋಸ್ಕರ ಅರಸರು ಅವು ಗಳನ್ನು ತಮ್ಮ ಭಂಡಾರದಲ್ಲಿ ಇಡುವುದುಂಟು; ಹಾಗೆಯೆ ಚಾಣಕ್ಯನು ಇರಿಸಿದುದನ್ನು ಅವರೊಳಗೆ ಮನಸ್ತಾಪವುಂಟಾದ ಸಮಯದಲ್ಲಿ, ಇವರ ಪ್ರೀತಿಯನ್ನು ಸಂಪಾದಿಸುವುಕ್ಕಾಗಿ, ಯಾಕಾಗಿ ಇಟ್ಟುದು ಎಂದು ತಿಳಿಯದೆ, ಚಂದ್ರಗುಪ್ತನು ಕಳುಹಿಸಿದುದು ಆಗಿರಲಿಕ್ಕೂ ಸಾಕು.

ಮಲಯಕೇತು—(ಹೌದು ಎಂದು ಅಮಾತ್ಯನನ್ನು ನೋಡಿ) ಅಮಾತ್ಯರೆ! ಚಂದ್ರಗುಪ್ತನು ಇವುಗಳನ್ನು ನಿಮಗೆ ಕ್ರಯಕ್ಕೆ ಕೊಟ್ಟು ಕಳುಹಿಸಿದನು. ಇವುಗಳಿಗೆ ಪ್ರತಿಫಲವಾಗಿ ನೀವು ನನ್ನನ್ನೆ ಒಪ್ಪಿಸಬೇಕೆಂದು ಯೋಚಿ ಸಿರುವಿರಲ್ಲವೇ?

ರಾಕ್ಷಸ—'ಶಿವ ಶಿವಾ! ಹೀಗೂ ಒಂದು ಅಪವಾದವೆ? ವೈರಿಗಳ

ಮುದ್ದು ಚೆನ್ನಾಗಿ ನಾಟಿದೆ; ಇನ್ನು ನಾವು ಏನು ಹೇಳಿದರೂ ಪ್ರಯೋಜನವಿಲ್ಲ' ಎಂದು ಸುಮ್ಮನಿದ್ದನು.

ಮಲಯಕೇತು—ಯಜಮಾನರೆ! ಇನ್ನು ಮುಂದೆ ಯಾವ ಕಾರ್ಯವನ್ನು ಹೇಗೆ ಮಾಡಬೇಕು? ಅಪ್ಪಣೆಯಾಗಲಿ.

ರಾಕ್ಷಸ—ರಾಯನೆ! ಯಜಮಾನರು ಯಾರೊ, ಅವರನ್ನು ಕೇಳಬೇಕು; ನಾವು ನಿಷ್ಪ್ರಯೋಜಕರಾದೆವು.

ಮಲಯಕೇತು—ರಾಕ್ಷಸನೆ! ಚಂದ್ರಗುಪ್ತನು ನಿನಗೆ ಸ್ವಾಮಿಪುತ್ರನು, ನಾನಾದರೆ ನಿನ್ನನ್ನು ಸ್ನೇಹಿತನೆಂದು ನಂಬಿಕೊಂಡಿದ್ದ ಪರ್ವತೇಶ್ವರನ ಮಗನು; ಅಲ್ಲಿ ಚಂದ್ರಗುಪ್ತನು ನಿನಗೇನಾದರೂ ಕೊಟ್ಟರಿದೆ; ಇಲ್ಲಿ ನೀನೆ ನನಗೆ ಕೊಟ್ಟರಿದೆ; ಅಲ್ಲಿ ನೀನು ಸೇವಕನು. ಇಲ್ಲಿ ಯಜಮಾನನು; ಹೀಗಿದ್ದೂ ಇಂತಹ ದುರಾಲೋಚನೆಯನ್ನು ಮಾಡಿದೆಯಲ್ಲವೆ? ಅದುವೆ ನಿನ್ನನ್ನು ನಿಷ್ಪ್ರಯೋಜಕನನ್ನಾಗಿ ಮಾಡಿತು.

ರಾಕ್ಷಸ—ಹೌದು! ನಿನ್ನಿಂದ ತಪ್ಪಿಲ್ಲ; ಈಗ ನೀನು ಏನು ಹೇಳಿದರೂ ದಕ್ಕೀತು.

ಮಲಯಕೇತು—(ಕೋಪದಿಂದ ಕರಡಿಗೆಯನ್ನೂ, ಕಾಗದವನ್ನೂ ತೆಗೆದು ನೆಲಕ್ಕೊಗೆದು) ಥೂ! ಕೃತಘ್ನನೆ! ಇದು ಯಾರ ತಪ್ಪು? ಆ ಹಾ ಹಾ! ಇನ್ನೂ ತಪ್ಪಿಸುವೆ! ನೀನು ಬಹಳ ಸುಭಗನು!

ರಾಕ್ಷಸ—ರಾಯನೆ! ನಾನೇನೊ ಸೇವಕನಾಗಿದ್ದುದು ಹೌದು; ಆದರೆ ನಂದರು ನನ್ನನ್ನು ಸೇವಕನಂತೆ ನೋಡುತ್ತಿರಲಿಲ್ಲ; ಅವರಿಂದಲೆ ಲೋಕದಲ್ಲಿ ಮಹಾ ಪೂಜ್ಯನಾಗಿದ್ದೆನು; ಅಂತಹ ಲೋಕನಾಯಕರನ್ನು ನಾಶಮಾಡಿ, ನನ್ನನ್ನು ಈ ಗತಿಗೆ ತಂದೂ ಕೂಡ, ನನ್ನ ಸ್ವಾಮಿಕಾರ್ಯವನ್ನು ಸಾಗಲಿಕ್ಕೆ ಬಿಡದಿರುವ ದೈವಂತಂತ್ರವಿದಲ್ಲದೆ, ಯಾರಿಂದೇನು ತಂತ್ರವಿದೆ?

ಮಲಯಕೇತು—ಛೀ! ಬ್ರಹ್ಮರಾಕ್ಷಸನೇ! ಇದು ದೈವತಂತ್ರವೆ? ನಿನ್ನ ಲೋಭತಂತ್ರವಲ್ಲವೆ? ಮುಚ್ಚು ಬಾಯಿ! ಕೊರಳು ಕೊಯಿಕನೆ! ನೀನು ಸತ್ಯವಂತನು, ಕಾರ್ಯದಕ್ಷನು, ಬುದ್ಧಿವಂತನು ನಂದರಾಜಾರ್ಥಕ್ಕೆ ನಿನ್ನನ್ನೆ ರಾಜನನ್ನಾಗಿ ಮಾಡಬೇಕು, ನೀನೆ ನನಗೆ ಮಂತ್ರಿಯಾಗಬೇಕು ಎಂದು ನಮ್ಮ ತಂದೆ ನಿನ್ನನ್ನು ನಂಬಿಕೊಂಡುದಕ್ಕೆ ನೀನೀಗ ಮಾಡಿದ ಉಪ

ಕಾರವೇನು? ನಾನು ಸಹ ನಿನ್ನನ್ನು ನಂಬಿ ಸರ್ವಾಧಿಕಾರವನ್ನು ಕೊಟ್ಟು ದಕ್ಕೆ ನೀನೀಗ ಮಾಡಿದ ಆಲೋಚನೆಯೇನು?

ರಾಕ್ಷಸ— (ಕಿವಿಗಳನ್ನು ಮುಚ್ಚಿಕೊಂಡು ಶಿವಶಿವಾ! ಎಂದು) ಪರ್ವತೇಶ್ವರನನ್ನು ನಾನು ಕೊಂದವನಲ್ಲ.

ಮಲಯಕೇತು—ನೀನಲ್ಲದಿದ್ದರೆ ಮತ್ತೆ ಯಾರು?

ರಾಕ್ಷಸ—ದೈವವನ್ನು ಕೇಳಬೇಕು.

ಮಲಯಕೇತು—ದೈವವನ್ನು ಕೇಳಬೇಕೊ? ಜೀವಸಿದ್ಧಿಯನ್ನು ಕೇಳಬೇಕೊ?

ರಾಕ್ಷಸ—"ಜೀವಸಿದ್ಧಿಯೂ ಹೀಗೆಯೆ, ಎಂದಾದ ಮೇಲೆ ನನ್ನ ಹೃದಯವೂ ವೈರಿಗಳ ಕೈಯಲ್ಲಿದೆ; ಇನ್ನು ಮನುಷ್ಯ ಪ್ರಯತ್ನವಿಲ್ಲ," ಎಂದು ಚಿಂತಿಸುತಿದ್ದನು.

ಆಗ ಮಲಯಕೇತು, ಕೊನೆವಿಚಾರಿಸಿಯುಲುಗುತ್ತಿರಲು, ತಾನೆ ಒಂದು ಕಾಗದವನ್ನು ಬರೆದು, ಮುದ್ರೆಯೊತ್ತಿ, ಕಂಚುಕಿಯ ಕೈಯಲ್ಲಿ ಕೊಟ್ಟು, 'ಇದನ್ನು ಶೇಖರನಿಗೆ ಕೊಟ್ಟು, ಉತ್ತರವನ್ನು ತೆಗೆದುಕೊಂಡು ಬಾ,' ಎಂದು ಕಳುಹಿಸಿದನು.

## ೧೭. ರಾಕ್ಷಸೋಚ್ಚಾಟನೆ

ಒಂದು ಕಾಲದಲ್ಲಿ ಇದುವೆ ಮಲಯಕೇತುವಿನ ತಂದೆಯಾದ ಪರ್ವತೇಶ್ವರನನ್ನು, ಇಡೀ ಭೂಲೋಕದಲ್ಲಿರುವ ರಾಜಾಧಿರಾಜರನ್ನು ತನ್ನ ಮುಂದೆ ನಿಲ್ಲಿಸಿಕೊಂಡು, ಇಂತಿಂತಹವರು ಹೀಗೆ ಹೀಗೆ ನಡೆದುಕೊಳ್ಳ ತಕ್ಕದ್ದು, ಎಂದು ಆಜ್ಞಾಪಿಸುತಿದ್ದ ಜಗದ್ವಂದ್ಯನಾದ ಅಮಾತ್ಯ ರಾಕ್ಷಸನು, ಇಂದು ಮಲಯಕೇತುವಿನ ಚಾವಡಿಯ ಮುಂದೆ ಒಬ್ಬ ಸಾಮಾನ್ಯ ಮನುಷ್ಯನಂತೆ ಕೈಕಟ್ಟಿ ನಿಂತುಕೊಂಡು—"ಈಗ ಕಂಚುಕಿ ಕಾಗದವನ್ನು ತೆಗೆದುಕೊಂಡು ಹೋದನು; ಇನ್ನು ಯಾರಿಗೆ ಶನಿ ಸುತ್ತಿದೆಯೊ?" ಎಂದು ಖಿನ್ನನಾಗಿ ಯೋಚಿಸುತ್ತಿದ್ದನು.

ಅಷ್ಟರೊಳಗೆ ಕಂಚುಕಿ ಶೇಖರನ ಉತ್ತರವನ್ನು ತೆಗೆದುಕೊಂಡು ಬಂದು ರಾಜಕುಮಾರನ ಮುಂದೆ ಬಾಯಿಗೆ ಕೈ ಹಿಡಿದುಕೊಂಡು ನಿಂತನು. ಅವನನ್ನು ನೋಡಿ ಮಲಯಕೇತು—"ಏನು?" ಎಂದು ಹುಬ್ಬೇರಿಸಿ ಕೇಳಿದನು.

ಕಂಚುಕಿ—"ಪತ್ರವನ್ನು ಕೊಟ್ಟೆನು. ಶೇಖರನು ಅದನ್ನು ಓದಿ ನೋಡಿ, ಚಿತ್ರವರ್ಮ ಸಿಂಹನಾದ ಪುಷ್ಕರಾಕ್ಷರನ್ನು ಕರೆಯಿಸಿ ಅಲ್ಲಿಯೇ ಹೊಡೆದು ಹುಗಿಸಿಬಿಟ್ಟನು. ಸಿಂಧುಷೇಣ ಮೇಘನಾದರನ್ನು ಆನೆಯಿಂದ ತುಳಿಸಿ ಕೊಲ್ಲಿಸಿದನು.

ಮಲಯಕೇತು—ರಾಕ್ಷಸನೆ! ನಿನ್ನ ಗೊತ್ತು ಹಿಡಿದುದಕ್ಕೆ ಚಿತ್ರ ವರ್ಮಾದಿಗಳಿಗೆ ಪರಲೋಕ ಯಾತ್ರೆಯಾಯಿತು; ಅಃ! ಮಾಡುವುದೇನು? ನೀನು ಬ್ರಾಹ್ಮಣ ಜನ್ಮದಲ್ಲಿ ಹುಟ್ಟಿ ಹೋದೆ; ಆದಕಾರಣ ಜೀವ ಮಾತ್ರ ಬಿಟ್ಟಿದ್ದೇನೆ, ಹೋಗು, ನಡೆ, ನಿನ್ನ ಚಂದ್ರಗುಪ್ತನೂ ನೀನೂ ಕಾಲಿಗೂ ಕುತ್ತಿಗೆಗೂ ಹಗ್ಗಹಾಕಿಕೊಳ್ಳಿರಿ; ನಡೆ! ನಡೆ! ಹಿಂದಣಿಂದ ನೋಡು! ನಾನೆ ದಂಡೆತ್ತಿ ಬರುತ್ತೇನೆ.

ಬಾಗುರಾಯಣ—"ರಾಯನೇ! ಇಂದು ವಿಜಯಪ್ರಯಾಣಕ್ಕೆ ಉತ್ತಮ ದಿನವಲ್ಲ; ಇನ್ನೊಂದು ದಿನವನ್ನು ನಿಶ್ಚೈಸಿ ಹೊರಡಬಹುದು, ಸಮಯವು ಮೀರಿಹೋಯಿತು, ವಿಶ್ರಮಿಸಿಕೊಳ್ಳಬಹುದು; ಈಗ ಅಮಾತ್ಯರ ಸೇವಕನಿಗೆ ಅಪ್ಪಣೆಯೇನು?

ಮಲಯಕೇತು—"ಸತ್ಯ ಹೇಳಿದ್ದಾನೆ; ಅವನನ್ನು ದಂಡಿಸಕೂಡದು. ಯಜಮಾನನನ್ನೂ ಸೇವಕನನ್ನೂ ಒಟ್ಟಿಗೆ ಊರಿನಿಂದ ಹೊರಡಿಸಿ ಬಿಡು," ಎಂದು ಹೇಳಿ, ಎದ್ದು ಒಳಗೆ ಹೋದನು.

ಆಗ ರಾಕ್ಷಸನು ಮನಸ್ಸಿನೊಳಗೆ "ಸೇವಕನು ಯಾರೋ" ಎಂದು ನೆನಸುತಿದ್ದನು; ಆ ಸಮಯದಲ್ಲಿ ಅಪ್ಪಣೆಯಂತೆ ಬಾಗುರಾಯಣನ ಮುಂದೆ ಸಿದ್ಧಾರ್ಥಕನನ್ನು ತಂದು ನಿಲ್ಲಿಸಿದರು. ಬಾಗುರಾಯಣನು ಅವನೊಡನೆ—"ನಿನ್ನನ್ನು ನಿನ್ನ ಒಡೆಯರ ಸಂಗಡ ಕಳುಹಿಸಬೇಕೆಂದು ರಾಯರ ಅಪ್ಪಣೆಯಾಗಿದೆ; ಹೋಗು; ಎಂದನು. ಸಿದ್ಧಾರ್ಥಕನು ಅಮಾತ್ಯನಿಗೆ ಅಡ್ಡಬಿದ್ದು, ಇಳಿಮೋರೆಯಿಂದ ತಲೆಬಗ್ಗಿಸಿಕೊಂಡು ನಿಂತನು. ರಾಕ್ಷಸನು ಮನಸ್ಸಿನಲ್ಲಿ—ಇವನೆ ಇದಕ್ಕೆಲ್ಲ ಕಾರಣಪುರುಷನು, ಎಂದು ನಿಶ್ಚೈಸಿ—"ಹೌದೇನೋ! ನೀನು ಯಾರ ಸೇವಕನು?"

ಸಿದ್ಧಾರ್ಥಕ—"ಬುದ್ಧೀ! ಅಪ್ಪಣೆಯಂತೆ ಹೋಗುವಾಗ ಉಕ್ಕಡದಲ್ಲಿ ನನ್ನನ್ನು ಹಿಡಿದು ಬಿಟ್ಟರು; ನಾನೇನು ಮಾಡಲಿ? ನಮ್ಮದೊಂದೂ ನಡೆಯಲಿಲ್ಲ!

ರಾಕ್ಷಸ—ನಿನಗೆ ನಾವು ಏನು ಅಪ್ಪಣೆಯನ್ನು ಕೊಟ್ಟಿದ್ದೇವೆ?

ಸಿದ್ಧಾರ್ಥಕ— ಸ್ವಾಮಿ! ಕಾಗದವನ್ನು ಸಿಕ್ಕಿದಂತೆ ಮಾಡಬೇಕೆಂದು ಅದನ್ನು ಅಡಗಿಸಿದೆನು.

ರಾಕ್ಷಸ— "ಯಾವ ಕಾಗದವೊ?"

ಸಿದ್ಧಾರ್ಥಕ—"ಬುದ್ಧೀ! ನಾನೇನು ಮಾಡುವುದು? ಬೆನ್ನನ್ನು ನೋಡಿರಿ; ಚೆನ್ನಾಗಿ ಹೊಡೆದರು, ಕಂಕುಳಲ್ಲಿದ್ದ ಕರಡಿಗೆಯೂ ಜಾರಿ ಬಿದ್ದು ಹೋಯಿತು!"

ರಾಕ್ಷಸ— ಕರಡಿಗೆ ಯಾವುದು?

ಸಿದ್ಧಾರ್ಥಕ—ಆಭರಣಗಳಿದ್ದ ಕರಡಿಗೆ.

ರಾಕ್ಷಸ—ಆಭರಣಗಳೆಂದರೆ?

ಸಿದ್ಧಾರ್ಥಕ—ಮುದ್ರೆ 'ಸಹಿತವಾಗಿ ಮುಟ್ಟಿಸೆಂದು ಅಪ್ಪಣೆಯಾದುದು.

ರಾಕ್ಷಸ— ಏ ಮೋಸಗಾರ! ಮುದ್ರೆ ಮಾಡಿದವರು ಯಾರೊ?

ಸಿದ್ಧಾರ್ಥಕ—ನಾನು ಮಾಡಬೇಕೆಂದು ಹೇಳಲಿಲ್ಲ; ತಮ್ಮ ಅಪ್ಪಣೆಯಂತೆ ಶಕಟದಾಸನೆ ಮಾಡಿಕೊಟ್ಟನು.

ರಾಕ್ಷಸ— ವಿಶ್ವಾಸಘಾತಕೀ! ಶಕಟದಾಸನು ಮುದ್ರೆ ಮಾಡಿದುದು ನಿಜವೆ?

ಸಿದ್ಧಾರ್ಥಕ—ಬುದ್ಧೀ! ಪಾದಮುಟ್ಟಿ ಹೇಳುತ್ತೇನೆ; ನಾನೊಂದೂ ಬಾಯಿ ಬಿಟ್ಟವನಲ್ಲ; ಆ ಟೊಳ್ಳು ಜೀವಸಿದ್ಧಿಯು ಗುಟ್ಟನ್ನು ಬಿಟ್ಟು, ಇಷ್ಟೆಲ್ಲ ಹೊಲಸು ಮಾಡಿ ಹಾಕಿದನು!

ರಾಕ್ಷಸ—ಥೂ! ನೀಚನೆ! ಜೀವಸಿದ್ಧಿ ಎಂದರೆ ಯಾರೊ?

ಸಿದ್ಧಾರ್ಥಕ—ಇದೇನು ಸ್ವಾಮಿ! ಹೀಗೆ ಕೇಳುತ್ತೀರಿ? ತಮ್ಮ ಅಪ್ಪಣೆಯ ಪ್ರಕಾರ ಆ ವಿಷಕನ್ಯೆಯನ್ನು ಪರ್ವತರಾಯನಲ್ಲಿಗೆ ಕರೆದುಕೊಂಡು ಹೋದ ಕ್ಷಪಣಕನಲ್ಲವೆ?

ರಾಕ್ಷಸ—"ಶಿವಶಿವಾ! ಇವನು ಹೆಂಡಕುಡುಕನಂತೆ ಅಸಂಬದ್ಧವಾಗಿ ಒಂದಕ್ಕೊಂದು ಬೊಗಳುವನಲ್ಲಾ! ಇವನೊಡನೆ ಮಾತನಾಡಿದುದೇ ಹೆಚ್ಚಾಯಿತು," ಎಂದು ಮೋರೆ ಮುದುರಿಕೊಂಡು— "ಸಿದ್ಧಾರ್ಥಕ, ಕ್ಷಪಣಕ ಶಕಟದಾಸ ಈ ಮೂವರು ವೈರಿಗಳ ಕಡೆಯವರಾದುದರಿಂದ

ನಮಗೆ ಈ ಅವಸ್ಥೆಯಾಯಿತು. ಬಾಗುರಾಯಣ ಭದ್ರಭಟಾದಿಗಳೂ ಹೀಗೆಯೆ; ಮಲಯಕೇತು ಇವರನ್ನು ನಂಬಿಕೊಂಡಿದ್ದಾನೆ; ಅವನಿಗೆ ಇವರು ಬೇಗನೆ ಗತಿ ತೋರಿಸಲಿಕ್ಕಿದೆ. ಅದಕ್ಕಾಗಿಯೇ ಈಗ ಚಿತ್ರ ವರ್ಮಾದಿಗಳನ್ನು ಕೊಂದು ಅವರ ಸೈನಿಕರನ್ನು ಓಡಿಸಿಕೊಂಡು ಹೋಗು ವಂತೆ ಶೇಖರನನ್ನು ಕಳುಹಿಸಿದ್ದಾರೆ; ಇಂದು ನಾಳೆಯೊಳಗೆ ಮಲಯ ಕೇತುವಿಗೆ ಇಷ್ಟಾಪೂರ್ತಿಯಾಗಲಿಕ್ಕಿದೆ" ಎಂದು ಯೋಚಿಸುತ್ತಿದ್ದನು.

ಬಾಗುರಾಯಣ—ಅಮಾತ್ಯರೆ! ಸಮಯಕ್ಕೆ ಬೀಳುವನೆಂದು ಇವ ನನ್ನು ಬಳಿಯಲ್ಲಿಟ್ಟುಕೊಂಡಿರಲ್ಲವೆ?

ರಾಕ್ಷಸ—ಹೌದಯ್ಯಾ! ನೀನು ಹೇಗೆ ಮಲಯಕೇತುವನ್ನು ವೈರಿ ಗಳ ಕೈಯಿಂದ ತಪ್ಪಿಸಿ, ಕರೆದುಕೊಂಡು ಬಂದು, ಅವನಿಗೆ ಮಿತ್ರನಾಗಿರು ವೆಯೊ, ಹಾಗೆಯೆ ಶಕಟದಾಸನನ್ನು ಬಿಡಿಸಿಕೊಂಡು ಬಂದು ಇವನು ನನಗೆ ಸ್ನೇಹಿತನಾಗಿದ್ದನು. ಇವನೀಗ ನಮಗೆ ಮಾಡಬೇಕಾದುದನ್ನೆಲ್ಲ ಮಾಡಿದನು ; ನೀನು ಮಲಯಕೇತುವಿಗೆ ಮಾಡುವುದೊಂದು ಉಳಿದಿದೆ," ಎಂದು ಹೇಳಿ, ಅಲ್ಲಿಂದೆದ್ದು ಊರನ್ನೆ ಬಿಟ್ಟು ಹೊರಟನು.

ಸಿದ್ಧಾರ್ಥಕನನ್ನು ಗಡಿಪಾರು ಮಾಡಿಸಿದನು; ಶೇಖರನು ಚಿತ್ರ ವರ್ಮಾದಿಗಳ ಸೇನೆಗಳನ್ನು ಬೆನ್ನಟ್ಟಿಕೊಂಡು ಹೋಗುತ್ತಿದ್ದನು; ಶಕ, ಚೀನ, ಹೂಣ, ಗಾಂಧಾರಾಧಿಪತಿಗಳು ಜೀವವುಳಿದರೆ ಸಾಕೆಂದು ತಮ್ಮ ತಮ್ಮ ದೇಶಗಳಿಗೆ ಓಡಿಹೋದರು. ರಾಕ್ಷಸನು—"ನನ್ನ ಪ್ರಯತ್ನಗಳೆಲ್ಲವೂ ಮಳಲಲ್ಲಿ ಬರೆದು, ಮಡಿಲಲ್ಲಿ ಕಟ್ಟಿದಂತಾದುವು! ನನ್ನ ಕಾರಣದಿಂದ ಚಿತ್ರವರ್ಮಾದಿಗಳಿಗೂ ಈ ಬಟ್ಟೆಯಾಯಿತು! ಇನ್ನು ಇನ್ನೊಬ್ಬರನ್ನು ಹಿಡಿದಾದರೂ ಏನಾದರೂ ಮಾಡಬಹುದೆಂದರೆ, ಇದೊಂದು ಅಪವಾದ ದಿಂದಾಗಿ ಯಾರೂ ನನ್ನನ್ನು ಹತ್ತಿರ ಅಣೆಯಲಿಕ್ಕೆ ಬಿಡಲಿಕ್ಕಿಲ್ಲ! ತಪೋ ವನಕ್ಕಾದರೂ ಹೋದೇನೆಂದರೆ, ಈ ಕ್ಲೇಶದೂಷಿತವಾದ ಮನಸ್ಸು ಹೇಗೆ ನೆಲೆ ನಿಂತೀತು? ಆತ್ಮಹತ್ಯವನ್ನಾದರೂ ಮಾಡಬಹುದೆಂದರೆ, ಅದು ಮೂರ್ಖರ, ಸ್ತ್ರೀಯರ ಮತವು; ಈಗಲೆ ಕತ್ತಿ ಹಿಡಿದುಕೊಂಡು ಹೋಗಿ, ಆ ಚಂದ್ರಗುಪ್ತನ ತಲೆಯನ್ನು ಹಾರಿಸಿ, ಬಿಡಬಹುದೆಂದರೆ, ಕಡೆಗೆ ಏನಾದೀತೊ ಗೊತ್ತಿಲ್ಲ! ಹೆಂಡತಿ ಮಕ್ಕಳೊಂದು ಕಡೆ ಸಿಕ್ಕಿಬಿದ್ದು ಕೊಂಡಿದ್ದಾರೆ! ಏನಾದರೂ ಮಾಡಿ ಚಂದನದಾಸನನ್ನಾದರೂ ಬಿಡಿಸಿದರೆ,

ಅದಾದರೂ ಒಂದು ಆಯಿತೆಂದು ಹೇಳಬಹುದು" ಎಂದು ಹೇಳಿಕೊಂಡು ಪಾಟಲೀಪುರದ ದಾರಿ ಹಿಡಿದು ಬರುತ್ತಿದ್ದನು.

## ೧೮. ಮಲಯಕೇತು ಬಂಧನ

ಇಷ್ಟಾದ ಮೇಲೆ, ಇನ್ನು ಮಾಡಬೇಕಾದುದೇನು ಎಂದು ಆಲೋಚಿಸಿಕೊಂಡು, ಅಲ್ಲಿಂದ ಎದ್ದು ಭಾಗುರಾಯಣನು ತನ್ನ ಮನೆಗೆ ಬರುತ್ತಿರಲು, ದಾರಿಯಲ್ಲಿ ದೂತನೊಬ್ಬನು ಬಂದು ಕೈಮುಗಿದು—"ಸ್ವಾಮಿಾ! ತಮ್ಮ ಸಮಯವನ್ನು ತಿಳಿದುಬರಬೇಕೆಂದು; ಭದ್ರಭಟಾದಿಗಳು ನನ್ನನ್ನು ಕಳುಹಿಸಿದರು," ಎಂದು ಅರಿಕೆ ಮಾಡಿದನು.

ಅದಕ್ಕೆ ಬಾಗುರಾಯಣನು—"ಭದ್ರಭಟಾದಿಗಳು ಇಂದು ಮೃಗ ಬೇಟೆಯನ್ನಾಡಬೇಕೆಂದು ನಿಶ್ಚೈಸಿದ್ದಾರೆ; ಈಗ ಮೂಡಲು ಕರೆ ಕೆಂಪೇರುತ್ತ ಬಂತು. ತಡಮಾಡಿದರೆ ಮೃಗಗಳು ನಿದ್ರೆಯಿಂದ ಎದ್ದು ತಮ್ಮ ತಮ್ಮ ಬಳಗದೊಡನೆ ಸೇರಿಕೊಂಡಾವು; ಆದುದರಿಂದ ಈಗಲೆ ಹೋಗಿ, ಸುತ್ತು ಮುತ್ತು ಮುತ್ತಿ ಹಿಡಿಯಲಿ; ಇಲ್ಲದಿದ್ದರೆ ಕಷ್ಟವಾಗಿ ಹೋದೀತು ಎಂದು ನಾನು ಹೇಳಿದೆನೆಂದು ಹೇಳು," ಎಂದು ಅವನನ್ನು ಕಳುಹಿಸಿದನು. ಅವನು ಬಂದು ಬಾಗುರಾಯಣನು ಹೇಳಿದ ಮಾತುಗಳಲ್ಲಿ ಒಂದಕ್ಷರವನ್ನೂ ಬಿಡದೆ ಸರಿಯಾಗಿ ತಿಳಿಸಿದನು. ಒಡನೆಯೆ ಸೇನಾಪತಿಗಳು ಸೈನ್ಯಸಮೇತರಾಗಿ ಹೋಗಿ ಪಟ್ಟಣವನ್ನು ಮುತ್ತಿ, ರಾಜದ್ವಾರವನ್ನು ಆಕ್ರಮಿಸಿ, ಅರಮನೆಯನ್ನು ಒಳನುಗ್ಗಿದರು. ಬಾಗುರಾಯಣನು ಕಣ್ಣುಕೈಗಳ ಸನ್ನೆಯಿಂದ "ಬೇಗಬೇಗನೆ" ಎಂದು ಸೂಚಿಸಿ, ತಾನು ಕುದುರೆಯನ್ನೇರಿ ಪಾಟಲೀಪುರಾಭಿಮುಖನಾಗಿ ಹೊರಟನು.

ಸೈನ್ಯಾಧಿಪತಿಗಳು ತೀವ್ರವಾಗಿ ಒಳನುಗ್ಗಿ, ಅಲ್ಲಿದ್ದ ಕಂಚುಕಿಗಳನ್ನು ಹಿಡಿದು, ಬೊಬ್ಬಿಡುವವರ ಬಾಯಿಗಳಿಗೆ ವಸ್ತ್ರಗಳನ್ನು ಜಡಿದು, ರಾಜಪುತ್ರರನ್ನು ಬಡಿದು, ಮುಂದವರಿಯುತ್ತಿರಲು; ಈ ಕಲಕಲದ ಗಜಬಜದ ಗೌಜಿಗೆ ಮಲಯಕೇತು ನಿದ್ರೆಯಿಂದೆದ್ದು, ಕಣ್ಣು ತಿಕ್ಕಿಕೊಂಡು, "ಇದೇನಿದೇನು?" ಎಂದು ಮುಂದೆ ಬಂದು ನೋಡಿದನು. ಆಗ ಆ ಆಯುಧಪಾಣಿಗಳಾದ ಸೇನಾಪತಿಗಳು ಅವನನ್ನು ಸುತ್ತಿಮುತ್ತಿ—"ರಾಜಕುಮಾರನೆ! ಅಮಾತ್ಯರು ಪಾಟಲೀಪುರವನ್ನು ನಿನಗೆ ಕೊಡಿಸುವೆವೆಂದು

ಪ್ರತಿಜ್ಞೆ ಮಾಡಿಕೊಂಡಂತೆಯೇ ಅದು ಸ್ವಾಧೀನವಾಯಿತು; ಇನ್ನು ನೀನು ಅಲ್ಲಿಗೆ ಹೋಗುವುದೊಂದೇ ತಡವು; ಮತ್ತೆ ನಿನಗೆ ಪಟ್ಟಾಭಿಷೇಕವೆ. ಪಲ್ಲಕಿ ಸಿದ್ಧವಾಗಿದೆ; ಹತ್ತುಹತ್ತು; ಹೊರಡು, ಹೂಂ!" ಎಂದರು.

ಇದನ್ನೆಲ್ಲ ಕೇಳಿಯೂ ನೋಡಿಯೂ ಮಲಯಕೇತು—"ಇದೇನು ವಿಪರೀತವು ಸಂಭವಿಸಿತು" ಎಂದು ಗಾಬರಿಗೊಂಡು—'ನಮ್ಮ ಬಾಗು ರಾಯಣನು ಎಲ್ಲಿದ್ದಾನೆ?' ಎಂದು ಕೇಳಿದನು. ಅದಕ್ಕವರು—"ಅಮಾತ್ಯ ರೊಡನೆ ಹೋಗಿದ್ದಾನೆ; ಹೊರಡು, ಹೊರಡು." ಎಂದರು.

ಮಲಯಕೇತು—"ಅಹಾ! ಅಮಾತ್ಯನ ಮೇಲೆ ಅಪರಾಧವನ್ನು ಹೊರಿಸಿ, ಇಲ್ಲಿಂದ ಹೊರಡಿಸಿ, ಈಗ ಅವನ ಹಿಂದೆ ಇವನೂ ಹೊರಟ ನೆಂದ ಮೇಲೆ ಇನ್ನೇನುಳಿಯಿತು! ಅಯ್ಯೋ ದೇವರೇ! ಇನ್ನು ಮೇಲೆ ಪಾಟಲೀಪುರದಿಂದ ಬಂದ ಒಂದು ನಾಯಿಯನ್ನು ಸಹ ನಂಬಕೂಡ ದೆಂದಾಯಿತಲ್ಲಾ! ಏ ಪಾಪಿಗಳೇ! ನಿಮ್ಮನ್ನು ನಂಬಿದುದಕ್ಕೆ ಕುತ್ತಿಗೆಗೆ ಕತ್ತಿಯಿಟ್ಟಿರಲ್ಲಾ! ಇನ್ನು ಹೇಳಿ ಮಾಡುವುದೇನು? ದೇವರು ಕಂಡ ಹಾಗಿರಲಿ! ಚಿತ್ರವರ್ಮಾದಿಗಳನ್ನು ಕೊಲ್ಲಿಸಿದಿರಿ, ಶೇಖರನನ್ನು ನನ್ನ ಬಳಿಯಿಂದ ತಪ್ಪಿಸಿದಿರಿ, ಬೆಣ್ಣೆಯಿಂದ ಕೂದಲೆಳೆದಂತೆ ನುಣ್ಣಗೆ ಮಾತ ನಾಡಿದಿರಿ, ಏ ಕೊರಳು ಕೊಯಿಕರೇ! ಆಯಿತು, ಮಾಡುವುದೇನು? ಕೆಟ್ಟ ಮೇಲೆ ಬುದ್ಧೀ! ಇನ್ನು ನಾನು ನಿಮ್ಮ ಕೈಗೆ ಸಿಕ್ಕಿದೆನು; ಬೇಕಾದ ಹಾಗೆ ಮಾಡಿಕೊಳ್ಳಿರಿ; ಅಮಾತ್ಯರು ನನ್ನನ್ನು ಕರೆದು ತರುವಂತೆ ಹೇಳಿರುವುದು ನಿಜವಾಗಿದ್ದರೆ, ಇದು ನಿಮ್ಮ ಮನಸಾಕ್ಷಿಗೆ ಸರಿಯೆಂದು ತೋರಿದರೆ, ಹಾಗೆಯೆ ಆಗಿ ಹೋಗಲಿ."

ಭದ್ರಭಟಾದಿಗಳು—"ಅರಸುಮನೆಗೆ! ನಾವೇನು ಮಾಡಬೇಕು? ಹೆಂಡತಿಮಕ್ಕಳ ಹೊಟ್ಟೆ ತುಂಬಿಸುವ ಒಂದು ಗೋಳಿಗಾಗಿ ಯಜಮಾನ ನಾದವನಿಗೆ ತಮ್ಮನ್ನು ಮಾರಿಕೊಂಡು, ಲೋಕಾಪವಾದವೆಂಬುದನ್ನು ಗಣ್ಯಕ್ಕೆ ತಾರದೆ ಇರುವ ನಮ್ಮಂತಹವರಿಗಲ್ಲದೆ, ನಿನ್ನನ್ನು ಹಿಡಿದು ಅನ್ಯರಿಗೊಪ್ಪಿಸುವ ಈ ಕೆಲಸವು ಬೇರೆ ಯಾರಿಗೆ ಸರಿ ಎಂದು ಕಂಡೀತು? ಹೆದರಬೇಡ, ನೀನು ಇದುವರೆಗೆ ಯಾರಿಗೂ ಒಂದು ಕೆಡುಕನ್ನೂ ನೆನೆದವ ನಲ್ಲ; ದೇವರು ನಿನ್ನನ್ನು ಕೈಬಿಡನು; ಹೊರಡು; ನಾವು ಇದ್ದೇವೆಯಲ್ಲ?" ಎಂದರು.

ಆ ಮಾತಿಗೆ ಮಲಯಕೇತು—"ಚಂದ್ರಗುಪ್ತನಿಂದೊಂದು ಪ್ರಾಣಾಪತ್ತು ಬರಲಿಕ್ಕಿಲ್ಲ; ಒಂದು ವೇಳೆ ಬಂದರೆ, ಅದು ಈಗಲೆ ಬಂದಿದೆ, ಮುಳುಗಿ ಮಿಂದವನಿಗೆ ಚಳಿಯೇನು?" ಎಂದು ಯೋಚಿಸಿ, ಪಲ್ಲಕಿಯಲ್ಲಿ ಕುಳಿತು—"ನಾನು ಇದರಿಂದ ಒಮ್ಮೆ ಬಿಡುಗಡೆಯಾಗಿ ಬಂದೆನೆಂದಾದರೆ, ನಾನು ಬಿಡಿ! ನನ್ನ ಮಕ್ಕಳು, ಮೊಮ್ಮಕ್ಕಳು, ಸಂತತಿಯರು, ದೇಶೀಯರು ಸಹ ಇನ್ನು ಮೇಲೆ ಪರಕೀಯರನ್ನು ನಂಬಬಾರದು ಎಂದು ಬರೆದಿಡುವೆನು. ಪರಕೀಯರಾದವರು, ನಮ್ಮವರೆಂದು ಎದುರಿಗೆ ಎಷ್ಟೆ ತೋರಿಸಿಕೊಂಡರೂ ಸರಿಯೆ, ಒಳಗೆ ಇಷ್ಟಾದರೂ ಕರುಣೆಯೆಂಬುದು ಅವರಿಗಿಲ್ಲ. ಅಲ್ಲದಿದ್ದರೆ, ಬಾಗುರಾಯಣನು ಇಷ್ಟೆಲ್ಲ ಮಾಡಿ, ಕಡೆಗೀಗ ಮಾಡಿದುದೇನು? ಆಪ್ತನಂತೆ ನಮ್ಮಲ್ಲಿ ಬಂದು ಸೇರಿ, ನಮ್ಮನಮ್ಮೊಳಗೆನೆ ಭೇದವನ್ನುಂಟು ಮಾಡಿ, ನನಗೆ ಈ ಗತಿಯನ್ನು ಒದಗಿಸಿ, ಈಗ ತಾವು ತಾವು ಒಂದೆ! ಆಃ! ಅನ್ಯರನ್ನು ನಮ್ಮವರೆಂದು ನಂಬುವವರು ನನ್ನನ್ನು ನೋಡಿ ಬಿಟ್ಟು ಬಿಡಬೇಕು; ಇಗ ನನ್ನ ಬಳಿಯಲ್ಲಿ ಶೇಖರನೊಬ್ಬನಿರುತಿದ್ದರೆ, ನನಗೆ ಈ ಗತಿ ಬರಲಿಕ್ಕಿತ್ತೆ? ಮಾಡುವುದೇನು? ಇನ್ನೊಬ್ಬರನ್ನು ದೂರುವುದು ಯಾಕೆ? ನನ್ನ ಬುದ್ಧಿಹೀನತೆಯೆ ಇಷ್ಟೆಲ್ಲ ಮಾಡಿತು," ಎಂದು ಗ್ರಹಿಸಿಕೊಂಡು, ತಲೆಯನ್ನು ಬಗ್ಗಿಸಿ ಮುಸುಕುಹಾಕಿದನು. ಸೇನಾಪತಿಗಳಲ್ಲಿ ಒಬ್ಬನಾದ ವಿಜಯವರ್ಮನನ್ನು ಅಲ್ಲಿಗೆ ಕಾವಲಾಗಿ ಇಟ್ಟು, ಮಿಕ್ಕವರು ಮಲಯಕೇತುವಿನ ಪಲ್ಲಕಿಯನ್ನು ಹೊರಿಸಿಕೊಂಡು, ಪಾಟಲೀಪುರಾಭಿಮುಖವಾಗಿ ಹೊರಟರು.

ಇದೆಲ್ಲವನ್ನು ತಿಳಿದುಕೊಂಡು, ಯಾರಿಗೂ ತಿಳಿಯದಂತೆ ರಾಕ್ಷಸನ ಹಿಂದೆಯೆ ಹೊರಟು ಸಿದ್ಧಾರ್ಥಕನು ಪಾಟಲೀಪುರವನ್ನು ಬಂದು ಸೇರಿ, ಚಾಣಕ್ಯನಿಗೆ ನಮಸ್ಕರಿಸಿದನು. ಆಗ ಚಾಣಕ್ಯನಿಗೆ—"ಏನು ಸಿದ್ಧಾರ್ಥಕಾ! ಕ್ಷೇಮವಷ್ಟೆ? ಕುಳಿತುಕೊ; ಹೋದ ಕೆಲಸವೇನಾಯಿತು? ರಾಕ್ಷಸನ ವರ್ತಮಾನವೇನು?" ಎಂದು ಕೇಳಿದನು. ಸಿದ್ಧಾರ್ಥಕನು—"ಎಲ್ಲವೂ ನಮಗೆ ಬೇಕಾದಂತೆಯೆ ಆಯಿತು," ಎಂದು ಆದ್ಯಂತವಾಗಿ ಒಂದುಳಿಯದಂತೆ ಎಲ್ಲವನ್ನೂ ವಿಸ್ತರಿಸಿ ಹೇಳಿದನು.

ಚಾಣಕ್ಯನು ಕೇಳಿ ಕಿರುನಗೆ ನಗುತ್ತ, ಅವನೊಡನೆ ಚಂದ್ರಗುಪ್ತನಲ್ಲಿಗೆ ಬಂದು ತಿಳಿಸಿ—"ನೋಡು, ಮಲಯಕೇತುವನ್ನೀಗ ಹಿಡಿದು ತರು

ತ್ತಾರೆ; ಅವನ ಕ್ಷೇಮಕ್ಕೆ ನೀನು ಹೊಣೆ. ನಿನ್ನ ಸ್ವಾಧೀನದಲ್ಲಿಟ್ಟುಕೊ,'' ಎಂದು ಹೇಳಿ, ಸಿದ್ಧಾರ್ಥಕನ ಕಿವಿಯಲ್ಲಿ ಹೀಗೆ ಹೀಗೆ ಮಾಡೆಂದು ಸೂಚಿಸಿ, ಆಗಲೆ ಬಂದ ಬಾಗುರಾಯಣನನ್ನು ನೋಡಿ ನಕ್ಕು, ಉಪಚರಿಸಿ, ''ಈಗ ಬರುವ ಮಲಯಕೇತು ಎಷ್ಟಾದರೂ ರಾಜಪುತ್ರನು; ಲಜ್ಜೆಯನ್ನು ಬಿಟ್ಟು ನೀನೇ ಹೋಗಿ, ಅವನಿಗೆ ಬೇಕಾದುದನ್ನೆಲ್ಲ ಸಿದ್ಧಗೊಳಿಸಿ, ಅವನು ಊರಲ್ಲಿದ್ದರೆ ಹೇಗೊ, ಅದಕ್ಕಿಂತಲೂ ಹೆಚ್ಚಾಗಿ ನೋಡಬೇಕು,'' ಎಂದು ಹೇಳಿ ಪರ್ಣಶಾಲೆಗೆ ಹೋದನು.

## ೨೧. ಆತ್ಮಹತ್ಯಾನಿವಾರಣೆ

ಅಮಾತ್ಯರಾಕ್ಷಸನು ಆ ಸಮಯದಲ್ಲಿ ಪಾಟಲೀಪುರದ ಉಪವನವನ್ನು ಬಂದು ಸೇರಿ, ಅತ್ತಿತ್ತ ನೋಡಿ, ಪೂರ್ವ ವೈಭವಗಳನ್ನೆಲ್ಲ ನೆನೆನೆನೆದು ಕಣ್ಣೀರು ಮಿಡಿದು—''ಉಃ! ಕಡಿದ ನೀರು ಕಟ್ಟಕ್ಕೆ ಬಾರದು!'' ಎಂದು ಬಾಯಾರಿಕೆಯಿಂದ ಮುಂದಿರುವ ಕೊಳಕ್ಕಿಳಿದು, ಕೈಕಾಲು ತೊಳೆದು, ಮೋರೆಗೆ ನೀರುಹಾಕಿ, ಬೊಗಸೆಗೈಯಿಂದ ಬೇಕಾದಷ್ಟು ನೀರನ್ನು ಮೊಗೆದು ಕುಡಿಯುತಿದ್ದನು.

ಆಗ—''ಅಯ್ಯೋ! ನಾನು ಇದುವರೆಗೂ ಮನಮುಟ್ಟಿ ಯಾವುದೊಂದುವಿಧವಾದ ಕೆಟ್ಟ ಕೆಲಸವನ್ನೂ ಮಾಡಿದವನಲ್ಲ! ಆದರೀಗ ನನ್ನ ಸ್ನೇಹಿತನಿಗೆ ಒದಗಿದ ಅಕಾಲಮೃತ್ಯುವನ್ನು ನೋಡಲಾರದೆ, ಜೀವ ತೆಗೆದುಕೊಳ್ಳುತ್ತೇನೆ; ಸಕಲ ದೇವತೆಗಳೆ! ಸಾಷ್ಟಾಂಗ ಪ್ರಣಾಮವನ್ನು ಮಾಡಿ ಬೇಡಿಕೊಳ್ಳುತ್ತೇನೆ; ಈ ಆತ್ಮ ಹತ್ಯಾದೋಷವು ನನಗೆ ಬಾರದಂತೆ ನನ್ನ ಮೇಲೆ ದಯೆಮಾಡಬೇಕು,'' ಎಂದು ಕೂಗುತ್ತಿರುವ ಕೂಗೊಂದು ಬಳಿಯ ಕಾಡಿನ ನಡುವಿನಿಂದ ಕೇಳಿಸಿತು.

ಅದನ್ನು ಅಮಾತ್ಯನು ಕೇಳಿ—''ಯಾರಿದು? ಇವನೂ ಯಾರೊ, ನಮ್ಮಂತೆಯ ಮಿತ್ರನಾಶವನ್ನು ಸಹಿಸಲಾರದೆ ಪ್ರಾಣ ಬಿಡುವವನಾಗಿರಬೇಕು, ಆದರೂ ವಿಚಾರಿಸಬೇಕು'' ಎಂದು ಬಳಿಗೆ ಬಂದು ನೋಡುವಾಗ ಒಬ್ಬನು ಒಂದು ಮರದ ಕೊಂಬೆಗೆ ಹಗ್ಗವನ್ನು ಹಾಕಿ, ಕೆಳಗಿರುವ ಹುತ್ತದ ಮೇಲೆ ಹತ್ತಿ ನಿಂತು, ಉರುಳನ್ನು ಕೊರಳಿಗೆ ಸಿಕ್ಕಿಸಿಕೊಂಡು ನಾಲ್ಕು ದಿಕ್ಕುಗಳನ್ನೂ ನೋಡಿ ಕೈಮುಗಿದ್ದು, ಕಣ್ಣು ಬಿಡುತಿದ್ದನು.

ರಾಕ್ಷಸ—ಯಾರಯ್ಯ ನೀನು? ಕೆಟ್ಟ ಹೆಂಗುಸರಂತೆ ಕೊರಳಿಗೆ ಹಗ್ಗವನ್ನು ಹಾಕಿಕೊಂಡಿರುವ ನಿನಗೆ ಬಂದ ಸಂಕಟವೇನು?

ಅವನು—ದಾರಿಹೋಕನೇ! ನಿರ್ಭಾಗ್ಯನಾದ ನನ್ನ ಅವಸ್ಥೆಯನ್ನು ಯಾಕೆ ಕೇಳುವೆ? ಇದರಿಂದ ನಿನಗೆ ಪ್ರಯೋಜನವಾದರೂ ಏನು? ಸುಮ್ಮನೆ ಕಾಲಹರಣವಾಗುವುದಷ್ಟೆ, ಆದುದರಿಂದ ನೀನು ನಿನ್ನ ದಾರಿ ಹಿಡಿದು ಹೋಗು.

ರಾಕ್ಷಸ—"ಅಣ್ಣಾ! ನಾನು ವಿಶ್ವಾಸದಿಂದ ಕೇಳುವಾಗ ಏನೊಂದು ಸದುತ್ತರವನ್ನು ಹೇಳದೆ 'ಕುರುಡನಿಗೆ ಹಿಡಿದುದೆ ದಂಟು' ಎಂಬಂತೆ ನೀನು ಹೀಗೆ ಮಾಡಬಹುದೆ? ಅಲ್ಲಿ ದೇವದೂತರು ನಿನಗಾಗಿ ವಿಮಾನ ವನ್ನು ತಂದು ಕಾದು ನಿಂದಿರುವರೆ?

ಅವನು—ಆಯಿತಪ್ಪ! ನಿನಗಿಷ್ಟು ಕೇಳಬೇಕೆಂದು ಕೂತೂಹಲವಿದ್ದರೆ ಹೇಳುತ್ತೇನೆ ಕೇಳು—ಇಲ್ಲಿ ನನಗೆ ಪ್ರಾಣಮಿತ್ರನಾದ ವಿಷ್ಣುದಾಸನೆಂಬವ ನೊಬ್ಬನಿದ್ದಾನೆ; ಅವನಿಗೆ ಬಂದ ಅವಸ್ಥೆಯನ್ನು ಕೇಳಿ, ಅದನ್ನು ನೋಡಿ ಸಾಯುವುದಕ್ಕಿಂತ ಮೊದಲೆ ಹೋಗಿ ಬಿಡುವುದು ಉತ್ತಮವೆಂದು ನಿಶ್ಚೈಸಿ, ಇಲ್ಲಿಗೆ ಬಂದಿದ್ದೇನೆ.

ರಾಕ್ಷಸ—ವಿಷ್ಣುದಾಸನಿಗಾದ ಅವಸ್ಥೆ ಏನು?

ಅವನು—ಅಯ್ಯಾ! ಅದನ್ನು ಯಾಕೆ ಹೇಳುವುದು? ನಮ್ಮ ವಿಷ್ಣುದಾಸನಿಗೆ ಚಂದನದಾಸನೆಂಬವನು ಸ್ನೇಹಿತನು; ಅವನಿಗೆ ಬಂದ ವಿಪತ್ತನ್ನು ನೋಡಿ, ತಡೆಯಲಾರದೆ ತನ್ನ ಸರ್ವಸ್ವವನ್ನೂ ಬಡಬಗ್ಗರಿಗೆ ದಾನಮಾಡಿ, ಬೆಂಕಿಗೆ ಬಿದ್ದು ಸಾಯುತ್ತೇನೆಂದು ಹೊರಟಿದ್ದಾನೆ. ಅವನನ್ನು ತಡೆಯಲಿಕ್ಕೆ ಯಾವ ದಾರಿಯೂ ಕಾಣದೆ ಮತ್ತೆ ನಾನೊಬ್ಬನು ಯಾಕೆ ಇರುವುದು ಎಂದು ಹೀಗೆ ಮಾಡುತ್ತೇನೆ. ಇದು ನನ್ನ ಕಥೆ.

ರಾಕ್ಷಸ—ಏನೇನು? ಚಂದನದಾಸನಿಗೇನಾಯಿತು? ಹೇಳು, ಸರಿಯಾಗಿ ಹೇಳು.

ಅವನು—ಅಯ್ಯೋ! ಹೇಳುವುದೇನು ಬೊಜ್ಜವನ್ನು? ಚಂದನ ದಾಸನು ಅಮಾತ್ಯರಾಕ್ಷಸನಿಗೆ ಸ್ನೇಹಿತನಂತೆ; ಅವನು ತನ್ನ ಹೆಂಡತಿ ಮಕ್ಕಳನ್ನು ಇವನ ಮನೆಯಲ್ಲಿ ಬಿಟ್ಟು, ಎಲ್ಲಿಗೊ ತಪ್ಪಿಸಿಕೊಂಡು ಹೋಗಿ ರುವನಂತೆ; ಈ ಗುಟ್ಟನ್ನು ತಿಳಿದು ಚಾಣಕ್ಯನು ಚಂದನದಾಸನನ್ನು

ಕರೆಯಿಸಿ, 'ರಾಕ್ಷಸನ ಹೆಂಡತಿ ಮಕ್ಕಳನ್ನು ತೋರಿಸು' ಎಂದು ಹಲವು ವಿಧವಾಗಿ ನಯಭಯಗಳಿಂದ ನಿರ್ಬಂಧಪಡಿಸಿದನಂತೆ; ಆಗ ಸೆಟ್ಟಿಯು ಸ್ವಾಧೀನದಲ್ಲಿ ಅವರು ಇಲ್ಲದುದರಿಂದಲೊ, ಇಲ್ಲವೆ, ಸ್ನೇಹಾಭಿಮಾನ ದಿಂದಲೊ ಚಾಣಕ್ಯನ ಮಾತಿಗೊಂದಕ್ಕೂ ಇವನು ಮಿದಿಯಲಿಲ್ಲವಂತೆ; ಆಗ ಚಾಣಕ್ಯನು ಕೋಪದಿಂದ ಇವನನ್ನು ಶೂಲಕ್ಕೆ ಹಾಕಿರೆಂದು ರಾಜ ದೂತರಿಗೆ ಅಪ್ಪಣೆಕೊಟ್ಟನಂತೆ; ಈಗ ಅವನನ್ನು ಶೂಲಕ್ಕೆ ಹಾಕಲಿಕ್ಕೆ ಹಿಡಿದುಕೊಂಡು ಹೋದರು ಎಂಬ ಸುದ್ದಿಯನ್ನು ಕೇಳಿ, ವಿಷ್ಣುದಾಸನು ಬೆಂಕಿಗಾದರೂ ಬಿದ್ದು ಸಾಯುತ್ತೇನೆ, ಎಂದು ಓಡಿ ಹೋದುದನ್ನು ನೋಡಿ ನಾನು ಇಲ್ಲಿಗೆ ಬಂದೆನು.

ಆಗ ರಾಕ್ಷಸನು—''ಎಲಾ! ನಾನು ಎಲ್ಲೆಲ್ಲಿಗೆ ಹೋಗುತ್ತೇನೊ ಅಲ್ಲಲ್ಲಿ ಏನಾದರೊಂದು ಅಸಂಬದ್ಧವಾಗುತ್ತಲೆ ಇದೆ; ಮಾಡುವುದೇನು? ಎಲ್ಲ ದೈವಗತಿ! ಆದರೆ ಅವನು ಇದುವರೆಗೆ ಜೀವಂತನಾಗಿ ಉಳಿದಿದ್ದರೆ, ನನ್ನ ಜೀವವನ್ನು ಕೊಟ್ಟಾದರೂ ಅವನನ್ನು ಬದುಕಿಸುವೆನು; ಕೆಲಸವು ಕಳೆದು ಹೋಯಿತೆಂದಾದರೆ, ಅವನ ದಾರಿಯನ್ನೆ ನಾನು ಹಿಡಿಯುವೆನು. ಇನ್ನು ತಡಮಾಡಬಾರದು'' ಎಂದು ನಿಶ್ಚೈಸಿ, ಅವನನ್ನು ನೋಡಿ—''ಎಲಾ ಮನುಷ್ಯನೆ! ನೀನು ಸುಮ್ಮನೆ ಯಾಕೆ ಜೀವ ತೆಗೆದುಕೊಳ್ಳುವೆ? ಚಂದನ ದಾಸನಿಗೆ ಮುಡಿದ ಹೂ ಬಾಡುವುದಿಲ್ಲ, ಎಂದು ನಿನ್ನ ವಿಷ್ಣುದಾಸನಿಗೆ ತಿಳಿಸಿ, ಅವನನ್ನು ನಿಲ್ಲಿಸು, ಹೋಗು, ಎಂದನು.

ಅವನು—ಅದು ಹೇಗೆ? ನೀನು ಜೋಯಿಸನೆ?

ರಾಕ್ಷಸ—(ಕೈಯ ಖಡ್ಗವನ್ನು ಝುಳಪಿಸಿ) ನೋಡು, ಈ ಖಡ್ಗವೆ ಚಂದನದಾಸನನ್ನು ಬಿಡಿಸುವುದು.

ಅವನು—ಆ—ಹಾ! ಎಲಾ! ಹಾಗಾದರೆ ನೀವು ಯಾರಯ್ಯಾ?

ರಾಕ್ಷಸ—ನಾನೆ ಇಷ್ಟೆಲ್ಲ ಅನರ್ಥಗಳಿಗೆ ಮೂಲಕಾರಣನಾದ ರಾಕ್ಷಸನು.

ಅವನು—(ಆಶ್ಚರ್ಯದಿಂದ) ಹಾಗೊ (ಎಂದು ಕೊರಳಿನ ಕುಣಿಕೆಯನ್ನು ಬಿಡಿಸಿ ಬಳಿಗೆ ಬಂದು) 'ಇನ್ನು ಬಿಡಿ! ನೀವೆಯೊ ಅಮಾತ್ಯರು? ನೀವು ಬಂದ ಮೇಲೆ ಇನ್ನೇನು ಹೆದರಿಕೆ ಹೇಗಾದರೂ ಮಾಡಿ ಒಮ್ಮೆ ಬಿಡಿಸಿ ಬಿಡಿರಿ.

ರಾಕ್ಷಸ—'ಹೇಗಾದರೂ ಎಂದರೇನು? ಇಗೊ! ಹೊರಟೆನು' ಎಂದು ಒರೆಯಿಂದ ಸರ್‍ರನೆ ಕತ್ತಿಯನ್ನೆಳೆದನು.

ಅವನು—'ಅಯ್ಯಯ್ಯೋ! ಊಂ—ಹೂಂ! ಇದೊಂದೂ ಆಗ ಲಿಕ್ಕಿಲ್ಲ! ನಿಮ್ಮ ಆಲೋಚನೆ ಇದುವೆಯೊ? ಹಾಗಾದರೆ ಕೇಳಿರಿ—ಮೊದಲು ಶಕಟದಾಸನೆಂಬವನನ್ನು ಶೂಲಕ್ಕೆ ಹಾಕಲಿಕ್ಕೆಂದು ಹಿಡಿದುಕೊಂಡು ಹೋಗುತ್ತಿರುವಾಗ, ಯಾರೊ ಒಬ್ಬನು ಕತ್ತಿ ಹಿಡಿದುಕೊಂಡು ಓಡಿ ಬಂದು, ಚಂಡಾಲರನ್ನೆಲ್ಲ ಓಡಿಸಿ, ತಪ್ಪುಗಾರನನ್ನು ಬಿಡಿಸಿಕೊಂಡು ಹೋದ ನಂತೆ; ಅಂದಿನಿಂದ ವಧ್ಯಸ್ಥಾನಕ್ಕೆ ಯಾರಾದರೂ ಆಯುಧಪಾಣಿಗಳಾಗಿ ಬರುವುದನ್ನು ಕಂಡರೆ, ಕೂಡಲೆ ತಪ್ಪುಗಾರರನ್ನು ಕೊಂದು ಬಿಡಬೇಕು, ಆ ಮೇಲೆ ಆಯುಧಪಾಣಿಯಾಗಿ ಬಂದವನನ್ನು ಹಿಡಿದು ತರಬೇಕು, ಎಂದು ಚಾಣಕ್ಯನ ಅಪ್ಪಣೆ ಇದೆಯಂತೆ; ಹೀಗಿರುವಾಗ ನೀವು ಕತ್ತಿ ಹಿಡಿದು ಕೊಂಡು ಹೋದರೆ ಒಂದು ಗಳಿಗೆಗೆ ಮುತ್ತೆ ಬರುವುದು ಮೊದಲೆ—

ಇದನ್ನು ಕೇಳಿ ರಾಕ್ಷಸನು—'ಇದೇನು? ಶಕಟದಾಸನನ್ನು ಶೂಲಕ್ಕೆ ಹಾಕುವಂತೆ ಕಳುಹಿಸಿ, ಸಿದ್ಧಾರ್ಥಕನಿಂದ ಬಿಡಿಸಲ್ಪಟ್ಟಂತೆ ಮಾಡಿಸಿ, ಚಾಣಕ್ಯನೆ ನನ್ನ ಬಳಿಗೆ ಕಳುಹಿಸಿದನೆ? ಹಾಗಾದರೆ ಕಟುಕರನ್ನು ಕೊಲ್ಲು ವುದಕ್ಕೆ ಕಾರಣವಿಲ್ಲ; ಶಕಟದಾಸನು ಮೋಸದ ಕಾಗದವನ್ನು ಬರೆದು ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟುದರಿಂದ ನಂಬುವುದಕ್ಕೂ ಆಗುವುದಿಲ್ಲ; ಹೇಗಾದರೂ ಈಗ ಆಲೋಚನೆಗೆ ಸಮಯವಿಲ್ಲ; ಆದ ಹಾಗೆ ಆಗಲಿ,' ಎಂದು ಕತ್ತಿಯನ್ನು ಬಿಸಾಡಿ, ಮುಂದೆ ಹೊರಟನು.

ಅವನು—'ಹಾಗಾದರೆ ವಿಷ್ಣುದಾಸನನ್ನು ಹೇಳಿ ನಿಲ್ಲಿಸುತ್ತೇನೆ,' ಎಂದು ಓಡಿಬಂದು ಎಲ್ಲವನ್ನೂ ಚಾಣಕ್ಯನಿಗೆ ತಿಳಿಸಿದನು.

## ೨೨. ರಾಕ್ಷಸ ಗ್ರಹಣ

ಚಂದನದಾಸನನ್ನು ಚಂಡಾಲರು ಹೋಗಿ ಸೆರೆಮನೆಯಿಂದ ಹೊರಗೆ ತಂದು, ಕೊರಳಿಗೆ ಎಕ್ಕೆಯ ಹೂವಿನ ಮಾಲೆಯನ್ನು ಹಾಕಿ, ಬೀದಿ ಬೀದಿಗಳಲ್ಲಿ ಸಾರಿಕೊಂಡು, ಹೋಗುತ್ತಿದ್ದರು; ಪಟ್ಟಣಿಗರೆಲ್ಲ ನೆರೆದು 'ಧೀರನಯ್ಯಾ! ಧೀರನು! ಬಲು ಧೀರನು! ಮಿತ್ರಕಾರ್ಯಕ್ಕಾಗಿ ಪ್ರಾಣ

ವನ್ನು ಕೊಡುತ್ತಾನೆ' ಎಂದು ಹೇಳುತ್ತಿದ್ದರು. ಅವನ ಹೆಂಡತಿ ಮಕ್ಕಳು ತಲೆತಲೆ ಬಡಿದುಕೊಂಡು, ಹೊಟ್ಟೆ ತಿಕ್ಕಿಕೊಂಡು, ಗೋಳಾಡುತ್ತ ಹಿಂದೆಯೆ ಬರುತ್ತಿದ್ದರು.

ಚಂದನದಾಸನು ಹೆಂಡತಿಮಕ್ಕಳನ್ನು ನೋಡಿ—'ನೀವು ಯಾಕೆ ಹೀಗೆ ಅಳುತ್ತೀರಿ? ನಾನೇನೂ ಇನ್ನೊಬ್ಬರಿಗೆ ಅನ್ಯಾಯಮಾಡಿ ಜೀವ ಕಳೆದುಕೊಳ್ಳುವುದಲ್ಲ; ಸ್ನೇಹಿತನಿಗಾಗಿ ಕಷ್ಟ ಬಂದು ಹೋಯಿತು; ಇದನ್ನು ಕಷ್ಟವೆಂದು ಎಣಿಸಬಾರದು; ಸುಖವೆಂದೆ ತಿಳಿಯಬೇಕು; ಯಾಕೆಂದರೆ— ಇಂತಹ ಮರಣವು ಎಲ್ಲರಿಗೂ ಸಿಕ್ಕಲಿಕ್ಕಿಲ್ಲ; ಮಿತ್ರಕಾರ್ಯಕ್ಕಾಗಿಯೂ, ದೇಶಕಾರ್ಯಕ್ಕಾಗಿಯೂ ಜೀವವನ್ನರ್ಪಿಸಬೇಕೆಂದು ಸಕಲ ಶಾಸ್ತ್ರಗಳೂ ಸಾರುತ್ತಿರುವುವು; ಇನ್ನು ನನ್ನ ಮೇಲಣ ಆಸೆಯನ್ನು ಬಿಟ್ಟು ಮನೆಗೆ ನಡೆಯಿರಿ,' ಎಂದು ಹೇಳಿ ಮುಂದೆ ಮುಂದೆ ನಡೆಯುತಿದ್ದನು.

ಕಟುಕ—ಸೆಟ್ಟೀ! ಶೂಲವು ಸಮೀಪವಾಯಿತು; ನಿನ್ನ ಮೈ ಮೇಲಿರುವುದನ್ನೆಲ್ಲ ತೆಗೆದುಕೊಡು; ಅದು ನಮಗಿರುವುದು; ಮತ್ತು ಇವರ ನ್ನೆಲ್ಲ ಹಿಂದಕ್ಕೆ ಹೋಗುವಂತೆ ಹೇಳು.

ಚಂದನದಾಸ—(ಹೆಂಡತಿಯೊಡನೆ) 'ಇನ್ನು ನೀನು ಅಳುವುದನ್ನು ಬಿಟ್ಟು, ಮಗುವನ್ನು ಕರೆದುಕೊಂಡು ಮನೆಗೆ ನಡೆ; ಮುಂದೆ ನಡೆಯುವ ಕೆಲಸವನ್ನು ನೋಡಿದರೆ, ಮಗು ಹೆದರಿಕೊಂಡೀತು,' ಎಂದು ಮಗುವಿನ ತಲೆಯ ಮೇಲೆ ಕೈಯಿಟ್ಟು ಕಣ್ಣೀರು ಸುರಿಸಿದನು.

ಹೆಂಡತಿ—'ಅಯ್ಯೋ! ನಿಮ್ಮನ್ನು ಬಿಟ್ಟು, ಯಾವ ಪುರುಷಾರ್ಥಕ್ಕೆ ಮನೆಗೆ ಹೋಗುವುದು? ಒಟ್ಟಿಗೆಯೆ ಬರುತ್ತೇವೆ,' ಎಂದು ಕಾಲಮೇಲೆ ಬಿದ್ದಳು.

ಚಂದನದಾಸ—'ಮರುಳೇ! ಇದು ಹಲ್ಲು ಕೀಳದ ಮಗು! ಒಂದೂ ಗೊತ್ತಿಲ್ಲ! ಇವನನ್ನು ನೋಡಿಕೊಂಡು ಎಲ್ಲವನ್ನೂ ಮರೆ.

ಹೆಂಡತಿ—'ಅಯ್ಯೋ! ದೂರದೇಶಕ್ಕೆ ಹೋದರೆ ಬಂದ ಮೇಲಾದರೂ ನೋಡಿಯೇವೆಂಬ ಒಂದು ಆಸೆಯಾದರೂ ಇದೆ. ಇನ್ನು ನಿಮ್ಮನ್ನು ಯಾವಾಗ ನೋಡುವುದು? ನಾನಾದರೂ ಇನ್ನು ಯಾಕೆ ಬದುಕಿರುವುದು? ಉಂಟುಮಾಡಿದ ದೇವರೆ ಈ ಮಗುವನ್ನು ಕಾಪಾಡುವನು; ನಾನು ನಿಮ್ಮೊಡನೆಯೆ ಬರುತ್ತೇನೆ,' ಎಂದು ಹೇಳಿ ಮಗುವನ್ನು ನೋಡಿ—

ಮಗನೆ! ನಿನ್ನ ಅಪ್ಪನ ಮೋರೆಯನ್ನು ಈಗಲೆ ಚೆನ್ನಾಗಿ ನೋಡಿಕೊ! ನಿನಗೇನಾದರೂ ಬುದ್ಧಿ ಹೇಳಿವರೆ ಕೇಳಿಕೊ! ಇನ್ನು ಅವರನ್ನು ನೋಡುವುದು ಮುಗಿಯಿತು; ದೇವರು ತೆಗೆದುಕೊಂಡು ಹೋಗುತ್ತಾನೆ!

ಮಗು—(ಕಾಲಮೇಲೆ ಬಿದ್ದು ಹೊರಳಿ) ಅಪ್ಪಾ! ಇನ್ನು ಮುಂದೆ ನಾನು ಯಾರನ್ನು ಅಪ್ಪನೆಂದು ಕರೆಯಲಿ? ನನಗೇನು ಗತಿ? ನೀನೀಗ ನಮ್ಮನ್ನು ಬಿಟ್ಟು ಹೋಗುವೆಯಾ?

ಚಂದನದಾಸ—'ಮಗನೆ! ಚಾಣಕ್ಯನೆಂಬ ಶಬ್ದವು ಸಹ ಯಾವ ಊರಲ್ಲಿ ಇಲ್ಲವೊ ಅಲ್ಲಿ ಹೋಗಿ ಇದ್ದುಕೊ; ಪರಧರ್ಮವನ್ನು ಆಚರಿಸಬೇಡ, ಸತ್ಯವಂತನಾಗಿರು.

ಕಟುಕ—ಸಟ್ಟಿ! ಶೂಲವು ಸಿದ್ಧವಾಗಿದೆ; ಹೂಂ! ಮುಂದೆ ಬಾ!

ಹೆಂಡತಿ—'ಅಯ್ಯೋ! ಅಣ್ಣ! ನನ್ನ ಗಂಡನನ್ನು ಶೂಲಕ್ಕೆ ಹಾಕಬೇಡಿರಿ! ಬಿಟ್ಟುಬಿಡಿರಿ! ನಿಮಗೆ ದೇವರು ಒಳ್ಳೆಯದನ್ನು ಮಾಡುವನು,' ಎಂದು ತನ್ನ ಮೈಮೇಲೆಯೂ, ಕಿವಿಗಳಲ್ಲಿಯೂ ಇದ್ದ ಆಭರಣಗಳನ್ನೆಲ್ಲ ತೆಗೆದು ಮುಂದಿಟ್ಟು ಕೈ ಮುಗಿದಳು.

ಚಂದನದಾಸ—'ನೀನು ಅವರನ್ನು ಯಾಕೆ ಪ್ರಾರ್ಥಿಸುವೆ? ಪಾಪ ಅವರಿಗೆ ಏನು ಅಧಿಕಾರವುಂಟು? ನಿಮಗೆ ದೇವರೆ ಗತಿ! ಹೋಗಿರಿ, ಸುಮ್ಮನೆ ಒಂದು ಕುಡುತೆ ಇದ್ದ ನೆತ್ತರನ್ನು ಅರ್ಧ ಕುಡುತೆ ಮಾಡಿಕೊಂಡು ಯಾಕೆ ಬಾಯಿಬಿಡುತ್ತೀರಿ? ಇನ್ನು ಆಸೆಬಿಟ್ಟು ನಡೆಯಿರಿ.

ಆಗ ಕಟುಕರು ಚಂದನದಾಸನನ್ನು ಹಿಡಿದು, ಹಿಡಿಮುಡಿ ಕಟ್ಟಿ, ಕಪ್ಪು ಟೊಪ್ಪಿಗೆಯನ್ನು ಕೊರಳಿನ ವರೆಗೆ ಇಳಿಸಿ, ಶೂಲಕ್ಕೇರಿಸುವ ಸನ್ನಾಹವನ್ನು ಮಾಡುತ್ತಿರಲು, ಚಂದನದಾಸನು ಮಗುವನ್ನು ಕರೆದು—'ಇನ್ನು ಇಲ್ಲಿ ನಿಲ್ಲಬೇಡ! ನಿನ್ನ ತಾಯಿಯನ್ನು ಕರೆದುಕೊಂಡು ಹೋಗು' ಎಂದನು.

ಮಗು—'ಅಯ್ಯೋ! ಅಪ್ಪಾ! ನೀನಾದರೆ ಮಿತ್ರಕಾರ್ಯಕ್ಕಾಗಿ ಜೀವಕೊಟ್ಟು, ಇಹಪರಲೋಕಗಳಲ್ಲಿ ಶಾಶ್ವತವಾದ ಕೀರ್ತಿ ಪುಣ್ಯಗಳನ್ನು ಪಡೆಯುತ್ತಿ; ನಾವು ಮಾತ್ರ ದಿಕ್ಕಿಲ್ಲದವರಾದೆವು' ಎಂದು ಗುಳುಗುಳನೆ ಕಣ್ಣೀರನ್ನು ಸುರಿಸಿದನು.

ಕಟುಕರು—'ಸಾಕು ಸಾಕು! ನಿನ್ನ ಅಪ್ಪನು ಮಾಡಿದುದನ್ನು ತಿನ್ನುತ್ತಾನೆ. ನೀನೂ ದೊಡ್ಡವನಾಗಿ ಹೀಗೆಯೆ ಮಾಡು, ನಿನಗೂ ಇಲ್ಲಿಗೆ

ಬರಬಹುದು; ನಡೆಯಿರಿ, ನಿಮ್ಮ ಹಾಳು ಮುಸುಡುಗಳನ್ನು ತೆಗೆದು ಕೊಂಡು!' ಎಂದು ಗರ್ಜಿಸಿ, ಚಂದನದಾಸನನ್ನು ಹಿಡಿದು ಮೇಲಕ್ಕೆತ್ತಿದರು.

ಆಗ—'ಅಯ್ಯೋ! ಅಯ್ಯಯ್ಯೋ! ಯಾರಾದರೂ ಪುಣ್ಯಾತ್ಮರು ಬಂದು ಒಂದು ಬಾರಿ ನನ್ನ ಗಂಡನನ್ನು ಬಿಡಿಸಿಕೊಡೆಯಿರೇ! ಹೋಯಿತಲ್ಲಾ! ನಿಮಗೆ ದೇವರು ಒಳ್ಳೆಯದನ್ನು ಕೊಡುವನು! ದಮ್ಮಯ್ಯಾ!' ಎಂದು ಕಟುಕರನ್ನು ನೋಡಿ—'ಅಣ್ಣಾ! ಬಿಟ್ಟುಬಿಡಿರಿ! ನಿಮಗೆ ಅಡ್ಡ ಬೀಳುತ್ತೇನೆ!' ಎಂದು ತಲೆತಲೆ ಬಡಿದು, ಎದೆಗೆ ಗುದ್ದಿಕೊಂಡು, ನೆಲದಲ್ಲಿ ಬಿದ್ದು ಹೊರಳಾಡಿದಳು.

ಈ ಆರ್ತಸ್ವರವನ್ನು ಕೇಳಿ ರಾಕ್ಷಸನು—, ಅಹಹಾ! ಕೆಟ್ಟಿತು, ಕೆಟ್ಟಿತು ಕೆಲಸವು! ಎಂದು ಓಡಿಯೋಡಿ ಬಂದು, ಆಕೆಯನ್ನು ನೋಡಿ— 'ಅಮ್ಮಾ! ಅಳಬೇಡ! ನಿನ್ನ ಗಂಡನನ್ನು ಬಿಡಿಸಿ ಕಳುಹಿಸುವೆನು' ಎಂದು ಕಟುಕರನ್ನು ನೋಡಿ—'ಕಟುಕರೆ! ಯಾಕೆ ಈ ನಿರಪರಾಧಿಯನ್ನು ಕೊಲ್ಲುತ್ತೀರಿ? ನಾನು ರಾಕ್ಷಸನು ಬಂದಿದ್ದೇನೆ; ಅವನನ್ನು ಬಿಟ್ಟುಬಿಡಿರಿ, ನನ್ನನ್ನು ಶೂಲಕ್ಕೆ ಹಾಕಿರಿ,' ಎಂದು ಮುಂದೆ ಬಂದನು.

ಅಮಾತ್ಯನ ಸ್ವರವನ್ನು ಕೇಳಿ ಚಂದನದಾಸನು— 'ಅಮಾತ್ಯರೆ! ನಾನು ಇದುವರೆಗೆ ಮಾಡಿದ ಕೆಲಸವನ್ನೆಲ್ಲ ಹಾಳುಮಾಡಿ, ನಿಮ್ಮ ಮಹಾ ಕಾರ್ಯವನ್ನು ಬಿಟ್ಟು ಈ ಅಲ್ಪನಾದ ನನಗೋಸ್ಕರ ನೀವು ಇಲ್ಲಿಗೆ ಬರಬಹುದೆ? ನಾನು ಸತ್ತರೆ ನಾಯಿ ಬಿದ್ದು ಸತ್ತಂತೆ ಒಬ್ಬನೆ ಹೋಗುತ್ತಿದ್ದೆನು; ಲೋಕರಕ್ಷಕರಾದ ನೀವು ಇಲ್ಲಿಗೀಗ ಬಂದುದು ಬಹಳ ಅನುಚಿತವಾಯಿತು' ಎಂದು ವ್ಯಸನಪಟ್ಟನು.

ರಾಕ್ಷಸ—'ನನ್ನ ವಿಷಯವನ್ನು ಬಿಟ್ಟುಬಿಡು; ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮತ್ತೆ ಯಾವಾಗ ಮಾಡುವುದು? ಆದುದರಿಂದ ನಾನೀಗ ಮಾಡಿದುದು ಅನುಚಿತವಲ್ಲ, ಉಚಿತವೆ' ಎಂದು ಕಟುಕರೊಡನೆ—

'ಎಲೈ ಚಂಡಾಲರೆ! ನಾನು ರಾಕ್ಷಸನು ಬಂದಿದ್ದೇನೆ, ಶೂಲವನ್ನೇರಲಿಕ್ಕೆ ಸಿದ್ಧನಾಗಿದ್ದೇನೆ, ಇದನ್ನು ನಿಮ್ಮ ಒಡೆಯರಿಗೆ ತಿಳಿಸಿರಿ.'

ಕಟುಕ—'ಆಗುವುದಿಲ್ಲವಯ್ಯಾ! ನೀನು ಶೂಲವನ್ನೇರಬೇಕಾದರೆ ನಮ್ಮ ದಣಿಗಳ ಅಪ್ಪಣೆಬೇಕು, ಸೆಟ್ಟಿಯನ್ನು ಬಿಡಲಿಕ್ಕಾಗುವುದಿಲ್ಲ; ಬೇಕಾ

ದರೆ ನೀನೇ ಹೋಗಿ ಅರಸುಗಳ ಅಪ್ಪಣೆಯನ್ನು ಮಾಡಿಸಿಕೊಂಡು ಬಾ! ನಿವೃತ್ತಿಯಿಲ್ಲದಿದ್ದರೆ ಅದುವರೆಗೆ ತಡೆಯಬಹುದು; ನಿನಗೆ ದಾರಿ ಗೊತ್ತಿಲ್ಲ ದಿದ್ದರೆ ತೋರಿಸುತ್ತೇವೆ ಬಾ!' ಎಂದು ಚಂದನದಾಸನನ್ನು ಒಂದು ಮರದ ನೆರಳಿನಲ್ಲಿರಿಸಿ, ಕಾವಲಿಟ್ಟು, ರಾಕ್ಷಸನನ್ನು ಚಾಣಕ್ಯನ ಪರ್ಣಶಾಲೆಗೆ ಕರೆದುಕೊಂಡು ಹೋದರು.

## ೨೩. ರಾಕ್ಷಸ ವಶೀಕರಣ

ಚಾಣಕ್ಯನು ಪರ್ಣಶಾಲೆಯೊಳಗೆ ವೀರಾಸನವನ್ನು ಹಾಕಿಕೊಂಡು ಕುಳಿತಿದ್ದನು. ಆ ಸಮಯದಲ್ಲಿ ಚಂಡಾಲರು ಅಮಾತ್ಯನೊಡನೆ ಬಂದು ಬಾಗಿಲ ಬಳಿಯಲ್ಲಿ ನಿಂದು ಶಿಷ್ಯನನ್ನು ನೋಡಿ—ಅಮಾತ್ಯರು ತಮ್ಮ ನೀತಿಪಾಶದಿಂದ ಬಂಧಿಸಲ್ಪಟ್ಟವರಾಗಿ ದರ್ಶನಕ್ಕೆ ಬಂದಿದ್ದಾರೆ; ಯಜ ಮಾನರಿಗೆ ತಿಳಿಸಿರಿ,' ಎಂದರು. ಶಿಷ್ಯನು ಹೋಗಿ ತಿಳಿಸಿದನು.

ಚಾಣಕ್ಯನು ಕಂಡು ಬಾಗಿಲಲ್ಲಿ ಇಣಿಕಿನೋಡಿ —'ಸುರುಳುದಲೆ, ವಿಶಾಲವಾದ ಹಣೆ, ವಿಸ್ತಾರವಾದ ಕಣ್ಣುಗಳು, ಬಿಲ್ಲಿನಂತಿರುವ ಹುಬ್ಬು ಗಳು, ದೊಡ್ಡ ದೊಡ್ಡ ಕಿವಿಗಳು, ಮುಂದೆ ನೀಡಿದ ಮೂಗು, ತಿರುಪಿದ ಕೆಂಚುಮೀಸೆಗಳು, ಕೊಬ್ಬಿದ ಕೊರಳು, ಮಾಂಸಖಂಡಗಳಿಂದ ಅಂದ ವಾಗಿ ತೋರುವ ತೋರ ತೋಳುಗಳು, ರೋಮಗಳಿಂದ ಕೂಡಿದ ಅಗಲ ವಾದ ಎದೆ, ಹಿಡಿಯಲ್ಲಿ ಅಮರುವ ನಡು, ಹೊಂಬಾಳೆಯ ಕಂಬಗಳಂತಿರುವ ತೊಡೆಗಳು, ಹಿಂದೆ ನೀಡಿದ ಪೊರವಾರು, ಹೊಡೆಯ ಅಡಿಕೆಮರದ ಕೊನೆ ಯಂತಿರುವ ಮೀನಕಂಡಗಳು, ಸಣ್ಣನಾದ ಮಣಿಗಂಟುಗಳು, ಆಮೆಯ ಬೆನ್ನಿನಂತಿರುವ ಪಾದಗಳು, ಈ ರೀತಿಯಲ್ಲಿ ಗಿಡ್ಡವಾದ ಕಾಲುಗಳುಳ್ಳವ ನಾಗಿಯೂ, ಉದ್ದವಾದ ದೇಹವುಳ್ಳವನಾಗಿಯೂ, ಸುಲಕ್ಷಣವಾಗಿರುವ ಇವನು ಪುರುಷಸಿಂಹನು, ಈ ಮಹಾನುಭಾವನೆ ರಾಕ್ಷಸನು, ಎಂದು ತಿಳಿದು, ಆಸನದಿಂದ ಜಗ್ಗನೆದ್ದು ಬಂದು ಕಟುಕರನ್ನು ನೋಡಿ — 'ಎನ್ನೈ ಉರಿಯುವ ಬೆಂಕಿಯನ್ನು ಉಡಿಯಲ್ಲಿ ಕಟ್ಟಿ ತಂದಂತೆಯೂ, ಬಿರುಗಾಳಿ ಯನ್ನು ಹಗ್ಗದಿಂದ ಕಟ್ಟಿ ತಂದಂತೆಯೂ, ಹಸಿದುಕೊಂಡಿರುವ ಮಹಾ

ಸಿಂಹರಾಜನನ್ನು ಮೈದಡವಿ ಹಿಡಿದಂತೆಯೂ ಈ ಅಮಾತ್ಯರನ್ನು ಹೇಗೆ ಹಿಡಿದು ಇಲ್ಲಿಗೆ ತಂದಿರಿ?' ಎಂದು ಕೇಳಿದನು.

ಕಟುಕರು—'ಬುದ್ಧೀ! ತಮ್ಮ ನೀತಿಪಾಶವೇ ಬಿಗಿದು ತಂದುದು; ನಾವಲ್ಲ.

ಚಾಣಕ್ಯ—'ನಂದಕುಲವಿದ್ವೇಷಿಯಾದ ದೈವವು.'

ಆಗ ಚಾಣಕ್ಯನನ್ನು ನೋಡಿ, ರಾಕ್ಷಸನು—"ಇವನೆ ಆ ದುರಾತ್ಮನಾದ ಚಾಣಕ್ಯನಾಗಿರಬೇಕು; ಚೀ! ದುರಾತ್ಮನೆಂದು ಹೇಳಬಾರದು; ಮಹಾತ್ಮನೆಂದು ಹೇಳಬೇಕು; ಯಾಕಂದರೆ ಇಷ್ಟೆಲ್ಲ ಮಾಡಿಯೂ ಇನ್ನೂ ವಿರಕ್ತನಾಗಿಯೆ ಇರುವನು! ಈ ತೇಜಸ್ವಿಯನ್ನು ಅಪಮಾನ ಪಡಿಸಿದುದರಿಂದಲೆ ನಂದರಿಗೆ ಈ ಗತಿಯಾಯಿತು! ಮನಕ್ಕೆ ಮತ್ಸರವುಂಟೆ?" ಎಂದು ನೆನಸುತ್ತಿದ್ದನು.

ಚಾಣಕ್ಯ—'ಈ ಮಹಾತ್ಮನ ಕಾರಣದಿಂದಲೆ ನಮಗೆ ನಿದ್ದೆಯೂ ಇಲ್ಲ, ನಿಯಮವೂ ಇಲ್ಲ; ಚಂದ್ರಗುಪ್ತನ ಸೇನೆ ಎಂಬುದು ಜೀವ ಕೈಯಲ್ಲಿ ಹಿಡಿದುಕೊಂಡಿತ್ತು; ಹೇಗಾದರೂ ಇಂದಿಗೆ ಇವನು ಸಿಕ್ಕಿದನು, ಬಯಸಿದಂತೆ ಎಲ್ಲವೂ ಕೈಗೂಡಿ ಬಂತು; ಅಬ್ಬಬ್ಬ! ಇನ್ನು ಸ್ವಲ್ಪ ಕಾಲುನೀಡಿ ಕುಳಿತುಕೊಳ್ಳಬಹುದು,' ಎಂದು ಯೋಚಿಸಿ, ಅಮಾತ್ಯನ ಬಳಿಗೆ ಬಂದು—'ಅಮಾತ್ಯರೆ! ಚಣಕಪುತ್ರನಾದ ವಿಷ್ಣುಶರ್ಮನು, ನಮಸ್ಕಾರಮಾಡುತ್ತಾನೆ,' ಎಂದು ಕೈಮುಗಿದನು.

ರಾಕ್ಷಸ—'ವಿಷ್ಣುಶರ್ಮರೆ! ಸ್ವಲ್ಪ ದೂರ, ನಾನು ಹೊಲೆಯರನ್ನು ಮುಟ್ಟಿದ್ದೇನೆ.'

ಚಾಣಕ್ಯ—'ಏನಯ್ಯಾ! ಅಮಾತ್ಯರೆ? ಇನ್ನು ಯಾಕೆ ನಿಮ್ಮಲ್ಲಿ ಅಡಗಿಸುವುದು? ನಿಮ್ಮ ಸಂಗಡ ಬಂದವರು ಹೊಲೆಯರಲ್ಲ.'

ರಾಕ್ಷಸ—"ಹಾಗಾದರೆ ನಿಮಗೆ ನಮಸ್ಕಾರವು: ಇವರು ಯಾರು?'

ಚಾಣಕ್ಯ—'ಇವನು ನಿಮ್ಮಲ್ಲಿದ್ದ ಸಿದ್ಧಾರ್ಥಕನು, ನಿಮ್ಮ ಶಕಟದಾಸನನ್ನು ಮೋಸಗೊಳಿಸಿ ಕಾಗದವನ್ನು ಬರೆಯಿಸಿದವನು; ಈಚೆಯುವನು ಸಮಿದ್ಧಾರ್ಥಕನೆಂಬವನು; ಈ ಇಂದುಶರ್ಮನೆಂಬವನು ನಿಮ್ಮ ಸ್ನೇಹಿತನಾಗಿದ್ದ ಕ್ಷಪಣಕನು; ಇವನು ನನ್ನ ಸಹಪಾಠಿ, ಬಾಗುರಾಯಣಾದಿಗಳನ್ನು ನಾನೆ ಕಳುಹಿಸಿದವನು, ಆಭರಣಗಳ ಕರಡಿಗೆಗಳನ್ನು ನಿಮಗೆ ಕಳು

ಹಿಸಿದವನು ನಾನೆ; ಶತ್ರುಪಲಾಯನ ಹೋಮವನ್ನು ಮಾಡಿಸಿದ ಮಾಸೋಪವಾಸಿ ಇವನೆ; ಇಂದು ನಿಮ್ಮೆದುರಿಗೆ ಕೊರಳಿಗೆ ಹಗ್ಗ ಹಾಕಿಕೊಂಡಿದ್ದವನು ಈ ಪಶುಲೋಮಕನು; ಈಗ ಚಂದ್ರಗುಪ್ತನೆಂದರೆ ಬಹಳ ಸಾಧು ಮತ್ತು ನಿರ್ದೋಷಿ; ನಾನು ವಿರಕ್ತನು, ತಪೋವನಕ್ಕೆ ಹೋಗಬೇಕಾಗಿದೆ; ಆದುದರಿಂದ ಹೇಗಾದರೂ ನಿಮ್ಮ ನಿಮ್ಮೊಳಗೆ ಗಂಟುಹಾಕಿಬಿಡಬೇಕೆಂದು ಇಷ್ಟೆಲ್ಲ ಕುಟಿಲೋಪಾಯಗಳನ್ನು ಮಾಡಬೇಕಾಯಿತು, ಅಲ್ಲದೆ ನನಗೆ ನಿಮ್ಮಲ್ಲೇನು ದ್ವೇಷವು ಹೇಳಿರಿ?' ಎಂದು ಆತನ ಕೈ ಹಿಡಿದುಕೊಂಡು ಕೈಸಾಲೆಗೆ ಹೋಗಿ, ಬಾಗಿಲಲ್ಲಿ ಶಾರ್ಙರವನೆಂಬ ಶಿಷ್ಯನನ್ನು ನಿಲ್ಲಿಸಿ, ಅಮಾತ್ಯನನ್ನೊಂದು ವೇತ್ರಾಸನದ ಮೇಲೆ ಕುಳ್ಳಿರಿಸಿ, ತಾನು ದರ್ಭಾಸನದಲ್ಲಿ ಕುಳಿತು, ಹೀಗೆಂದನು.

'ಅಮಾತ್ಯರೆ! ಮೊದಲು ನನ್ನ ವಿಷಯಗಳನ್ನೆಲ್ಲ ಹೇಳುತ್ತೇನೆ; ನಿಮ್ಮ ಮನಸ್ಸಿನಲ್ಲಿರುವ ಇತರ ರಗಳೆಗಳನ್ನೆಲ್ಲ ತೆಗೆದುಹಾಕಿ. ಲೋಕಹಿತಕ್ಕಾಗಿ ಚೆನ್ನಾಗಿ ಕಿವಿಗೊಟ್ಟು ಕೇಳಿ; ನಾನು ಹೇಳುವುದು ಯಥಾರ್ಥವೊ, ಕಪಟವೋ ಎಂಬುದನ್ನು ನಿರ್ಧರಿಸಿ, ಆ ಮೇಲೆ ನಿಮ್ಮ ಇಷ್ಟಬಂದಂತೆ ಮಾಡಬಹುದು, ಏನು?

ರಾಕ್ಷಸ—'ಆಗಲಿ, ಹೇಳಿರಿ,'

ಚಾಣಕ್ಯ—'ಹಾಗಾದರೆ ಕಿವಿಗೊಡಬೇಕು—ನೋಡಿರಿ, ಈ ನಂದರಾಗಲಿ, ಪರ್ವತರಾಯನಾಗಲಿ, ಚಿತ್ರವರ್ಮಾದಿಗಳಾಗಲಿ ಇವರೆಲ್ಲ ಬಹಳ ದುಷ್ಟರು; ತಮ್ಮ ತಮ್ಮ ಮತಗಳನ್ನು ಬಿಟ್ಟು, ಬೌದ್ಧ ಚಾರ್ವಾಕಾದಿ ಮತಗಳಲ್ಲಿ ವಿಶ್ವಾಸವಿಟ್ಟಿದ್ದಾರೆ, ಧರ್ಮಕರ್ಮಗಳನ್ನೆಲ್ಲ ಬಿಟ್ಟಿದ್ದಾರೆ. ಅವರ ವೃತ್ತಿಗಳೆಲ್ಲ ನಮಗೆ ಗೊತ್ತಿಲ್ಲದೆ ಇಲ್ಲ. ರಾಜರು ಹೀಗಿರುವುದು ದೇಶಕ್ಕೆ ಬಹಳ ಕೆಡುಕು. ಇದನ್ನೆಲ್ಲ ನೋಡಿ, ನಮ್ಮ ಗುರುಗಳು ನಮಗೆ ದಂಡನೀತಿಯನ್ನು ಉಪದೇಶಮಾಡಿ, 'ದುಷ್ಟನಿಗ್ರಹ, ಶಿಷ್ಟ ಪರಿಪಾಲನೆಯೆ ನೀನು ನನಗೆ ಕೊಡುವ ಗುರುದಕ್ಷಿಣೆ!' ಎಂದು ಹೇಳಿ ನನ್ನನ್ನು ಕಳುಹಿಸಿದರು. ಚಂದ್ರಗುಪ್ತ ನಂದರೊಳಗೆ ಯಾರು ಯೋಗ್ಯರು? ಯಾರು ಅಯೋಗ್ಯರು ಎಂಬುದು ನಿಮಗೆ ಗೊತ್ತಿದೆ; ಆದರೂ ನೀವು ನಿಮ್ಮ ಸ್ವಾಮಿಕಾರ್ಯವನ್ನು ಮಾಡಿದಿರಿ; ಸತ್ಯಕ್ಕೆ ಯಾವಾಗಲೂ ಹದಿನಾರೆ ಹರೆಯವು; ಆದುದರಿಂದ ತಾನು ಸೋತುಹೋದೆನೆಂದು ನೀವು ವ್ಯಸನಪಡಬಾರದು. ನಿಜ

ವಾಗಿ ನೋಡಿದರೆ, ನಿಮ್ಮೆದುರಿಗೆ ನಾವೆಲ್ಲರೂ ಒಂದೊಂದು ತೃಣ; ಇದರಲ್ಲಿ ದೂರಿಗೆ ಯಾರೂ ಇಲ್ಲ ಎಲ್ಲ ದೈವಘಟನೆ; ಅದಿರಲಿ, ಇನ್ನು ಮುಂದೆ ಹೆಸರಿಗೆ ಮಾತ್ರ ಚಂದ್ರಗುಪ್ತನು ಅರಸನು, ಸರ್ವ ಆರಭಾರಗಳೂ ನಿಮ್ಮನ್ನೆ ಸೇರಿವೆ; ಹೇಗೆ ಹೇಗೆ ನಡೆಯಿಸಿಕೊಂಡು ಬರಬೇಕೆಂದು ನಿಮಗೆ ನಾವು ಹೇಳಬೇಕಾದುದಿಲ್ಲ. ನಮ್ಮ ಕೆಲಸವು ಮುಗಿಯಿತು, ಗುರುಗಳ ಬಳಿಗೆ ಹೊರಡುತ್ತೇವೆ, ನಮಗೀಗ ಅಪ್ಪಣೆಯಾಗಬೇಕು. ಏನು?

ರಾಕ್ಷಸ—'ಸ್ವಾಮಿ! ತಮ್ಮ ಹೃದಯದಿಂದ ಉಕ್ಕಿ ಹೊರಟ ಈ ಸತ್ಯವಾಕ್ಯಗಳನ್ನು ಕೇಳಿ, ದುಷ್ಟಸಂಸರ್ಗದಿಂದುಂಟಾದ ನನ್ನ ಮನಸ್ಸಿನ ಕೊಳೆಗಳೆಲ್ಲ ತೊಳೆದುಹೋದುವು, ಅನುಗ್ರಹವಿದ್ದರೆ ತಮ್ಮ ಮಾತಿನಂತೆಯೆ ನಡೆಯಿಸುವೆನು. ಅದೊಂದು ದೊಡ್ಡದಲ್ಲ, ಆದರೆ, ತಾವು ಆಗಾಗ್ಗೆ ದಯೆ ಮಾಡಿ ಬಂದು, ನಮ್ಮನ್ನೆಲ್ಲ ತಮ್ಮ ಸದುಪದೇಶದಿಂದ ಪರಿಶುದ್ಧ ಹೃದಯರನ್ನಾಗಿ ಮಾಡುತ್ತಿರಬೇಕು; ನನ್ನ ಮಗನು ಪ್ರಾಯಕ್ಕೆ ಬರುವ ವರೆಗೆ ಮಾತ್ರ ನಾನು ಈ ಕೆಲಸದಲ್ಲಿರುವೆನು; ಆ ಮೇಲೆ ಪತ್ನಿಸಮೇತನಾಗಿ ತಮ್ಮ ಬಳಿಗೆ ಬಂದು, ತಮ್ಮಿಂದ ಉಪದೇಶವನ್ನು ಪಡೆದು, ತಮ್ಮೆಡೆಯಲ್ಲಿಯೆ ಇದ್ದುಕೊಂಡು, ಮುಂದಣ ದಾರಿಯನ್ನು ನೋಡಬೇಕೆಂದು ಆಲೋಚನೆಯಿದೆ.

ಚಾಣಕ್ಯ—'ನಿಮಗೂ ಒಂದು ಉಪದೇಶವು ಬೇಕೆ? ನೀವೆ ಜ್ಞಾನೋಪದೇಶವನ್ನು ಮಾಡಿ ಲೋಕವನ್ನು ಉದ್ಧರಿಸುವಂತೆ ದೇವರು ಅನುಗ್ರಹಿಸುವನು; ಹೇಗೂ ಇರಲಿ, ಮುಂದಣ ವಿಷಯವು ಮುಂದೆ, ಎಂದು ಅಮಾತ್ಯನನ್ನು ಸಂತೈಸಿ, ಕೈಹಿಡಿದುಕೊಂಡು ಚಂದ್ರಗುಪ್ತನ ಬಳಿಗೆ ಹೊರಟನು.

## ೨೪. ಪ್ರತಿಜ್ಞಾ ಪೂರ್ಣತೆ

ಸೂರ್ಯಚಂದ್ರರು ತಮ್ಮ ತಮ್ಮ ಬಿಸುಪುತಣುಪುಗಳನ್ನು ಬಿಟ್ಟು, ಏಕೀಭವಿಸಿ ನಡೆತಂದರೊ? ಎಂಬಂತೆ ಕೈ ಕೈ ಹಿಡಿದುಕೊಂಡು ಬರುತ್ತಿರುವ ಚಾಣಕ್ಯಾಮಾತ್ಯರನ್ನು ದೂರದಿಂದಲೇ ನೋಡಿ ಚಂದ್ರಗುಪ್ತನು, ಆಸನದಿಂದೆದ್ದು ಬಂದು ದಂಡಪ್ರಣಾಮಗಳನ್ನು ಮಾಡಿ, ಕೈ ಹಿಡಿದುಕೊಂಡು ಬಂದು, ಕನಕಾಸನಗಳಲ್ಲಿ ಇಬ್ಬರನ್ನೂ ಕುಳ್ಳಿರಿಸಿ, ತಾನು ಕೆಳಗಡೆ ಕುಳಿತುಕೊಂಡನು.

ಚಾಣಕ್ಯ— ಚಂದ್ರಗುಪ್ತ! ನೋಡು ನೀನು ನಂದವಂಶದವನೆಂದು ನಿನ್ನ ಮೇಲೆ ಅನುಗ್ರಹವನ್ನಿಟ್ಟು, ಅಮಾತ್ಯರು ತಾವಾಗಿಯೆ ದಯಮಾಡಿ ಸಿದ್ಧರೆ; ನಮ್ಮ ಪ್ರಾಧಾನ್ಯ ಶಸ್ತ್ರವನ್ನು ತೆಗೆದು ಅವರ ಕೈಗೆ ಒಪ್ಪಿಸಿ, ಇನ್ನು ಮುಂದೆ ಅವರು ಹೇಳಿದಂತೆ ನಡೆದುಕೊ; ನಮ್ಮ ಕೆಲಸವು ಇಲ್ಲಿಗೆ ಮುಗಿಯಿತು.

ಚಂದ್ರಗುಪ್ತ— 'ತಮ್ಮ ವಾಕ್ಯವೆ ನನಗೆ ವೇದವಾಕ್ಯವು, ಎಂದು ಹೇಳಿ, ಪ್ರಾಧಾನ್ಯಶಸ್ತ್ರವನ್ನೂ, ಅನರ್ಘವಾದ ವಸ್ತ್ರಭೂಷಣಗಳನ್ನೂ, ಅಮಾತ್ಯನ ಮುಂದೆ ತರಿಸಿ ಇರಿಸಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಅಮಾತ್ಯ— 'ಜಯಶೀಲನಾಗು! ಸುಖದಿಂದಿರು!' ಎಂದು ಹರಸಿ, ಒಂದನ್ನೂ ಪರಿಗ್ರಹಿಸದೆ, ಹಿಂದಣದನ್ನೆಲ್ಲ ನೆನೆನೆನೆದು ಕಣ್ಣುಗಳಲ್ಲಿ ನೀರು ತುಂಬುತ್ತಿದ್ದನು.

ಚಾಣಕ್ಯ—ಏನಯ್ಯಾ! ಅಮಾತ್ಯರೇ ನೀವೀಗ ಚಂದ್ರಗುಪ್ತನ ಮೇಲೆ ಅಭಿಮಾನವಿಟ್ಟು ಬಂದವರೊ? ಚಂದನದಾಸನನ್ನು ಉಳಿಸಲಿಕ್ಕಾಗಿ ಬಂದವರೊ? ಹೇಳಿರಿ.

ಅಮಾತ್ಯ—ಕ್ಷೇಮದಾಯಕನಾದ ರಾಜನ ದರ್ಶನವಾದ ಬಳಿಕ ಚಂದನದಾಸನಿಗೇನು?

ಚಾಣಕ್ಯ—ಹಾಗಾದರೆ ಚಂದ್ರಗುಪ್ತನು ಒಪ್ಪಿಸಿದುದನ್ನು ಸ್ವೀಕರಿಸಿರಿ.

ರಾಕ್ಷಸ—ತಾವಿರುವಾಗ ನಾನು ಹೇಗೆ ಸ್ವೀಕರಿಸಲಿ?

ಚಾಣಕ್ಯ—ಅದೆಲ್ಲ ಇರಲಿ, ನಿಮ್ಮ ವಿಷಯವಾಗಿ ಕೇಳಿಯೂ ಕಂಡೂ ಗೊತ್ತಿದೆ; ಚಂದ್ರನದಾಸನ ಜೀವನದಲ್ಲಿ ನಿಮಗೆ ಆಸೆ ಇದೆಯೊ? ಹಿಡಿಯಿರಿ ಪ್ರಾಧಾನ್ಯ ಶಸ್ತ್ರವನ್ನು.

ರಾಕ್ಷಸ— 'ಆಯಿತು, ನನ್ನ ಮಿತ್ರನ ಜೀವಕ್ಕಾಗಿ ನೀವು ಹೇಳಿದಂತೆ ಕೇಳುತ್ತೇನೆ, ಎಂದು ಪ್ರಾಧಾನ್ಯ ಶಸ್ತ್ರವನ್ನು ಹಿಡಿದನು.

ಆಗ ಶಂಖ ಭೇರಿ ಕಹಳಾನಿನಾದಗಳು ಭೋರಿಡಲು, ಅಮಾತ್ಯನು ಚಂದ್ರಗುಪ್ತನ ಬಲಗಡೆಯ ಮಂತ್ರಿವಿಷ್ಟರದಲ್ಲಿ ಬಂದು ಕುಳಿತನು. ಆ

ಸಮಯದಲ್ಲಿ ಭದ್ರಭಟಾದಿಗಳು ಮಲಯಕೇತುವನ್ನು ಅಂದಳದಲ್ಲಿ ಕುಳ್ಳಿರಿಸಿಕೊಂಡು, ಸಭಾಮಂದಿರಕ್ಕೆ ಕರೆದುತಂದರು. ಬರುವುದನ್ನು ನೋಡಿ, ಚಂದ್ರಗುಪ್ತನು ಎದ್ದುಹೋಗಿ ಮಲಯಕೇತುವನ್ನು ಆಲಿಂಗಿಸಿ, ಕೈಹಿಡಿದುಕೊಂಡು ಬಂದನು. ಅವನು ಬಂದು ಚಾಣಕ್ಯಾಮಾತ್ಯರಿಗೆ ದಂಡಪ್ರಣಾಮವನ್ನು ಮಾಡಿ, ಚಂದ್ರಗುಪ್ತನು ತೋರಿಸಿದ ಆಸನದಲ್ಲಿ ಕುಳಿತುಕೊಂಡನು. ಇತ್ತ ಚಂದ್ರಗುಪ್ತನ ಅಪ್ಪಣೆಯಂತೆ ಪರಾಜದೂತರು ಹೋಗಿ, ಚಂದನದಾಸನಿಗೆ ಮಂಗಲಸ್ನಾನವನ್ನು ಮಾಡಿಸಿ, ಅನರ್ಘ ವಸ್ತ್ರಭೂಷಣಗಳಿಂದ ಅಲಂಕರಿಸಿ, ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿಕೊಂಡು, ರಾಜಸಭೆಗೆ ಹೊಗಿಸಿದರು. ಅವನು ಆನೆಯಿಂದಿಳಿದು ಬಂದು ಚಾಣಕ್ಯಾಮಾತ್ಯರಿಗೂ, ಚಂದ್ರಗುಪ್ತ ಮಲಯಕೇತುಗಳಿಗೂ ನಮಸ್ಕರಿಸಿದನು. ಚಂದ್ರಗುಪ್ತನು ಅವನನ್ನು ತಬ್ಬಿಕೊಂಡು ಆಸನದಲ್ಲಿ ಹಿಡಿದು ತಂದು ಕುಳ್ಳಿರಿಸಿದನು.

ಆಗ ಚಂದನದಾಸನು—'ಛೀ! ಛೀ! ತಮ್ಮೆಲ್ಲರ ಮುಂದೆ ಆಸನದಲ್ಲಿ ಕುಳಿತುಕೊಳ್ಳಲಿಕ್ಕೆ ನಾನೆಷ್ಟರವನು?' ಎಂದು ಹಿಂದೆ ಹಿಂದೆ ಸರಿದನು. ಇದನ್ನು ನೋಡಿ, ಚಾಣಕ್ಯನು ತಾನೆ ಎದ್ದು ಬಂದು ಅವನ ಕೈ ಹಿಡಿದು- 'ಸೆಟ್ಟೀ! ಈ ಸಮಯದಲ್ಲಿ ನಿನಗೆ ಸರಿಯಾದವರು ಯಾರು ಇಲ್ಲ; ನೀನೆ ಎರಡನೆಯ ಶಿಬಿಚಕ್ರವರ್ತಿ; ನೀನೆ ಎರಡನೆಯ ದಧೀಚಿ; ನೀನೊಂದು ತೂಗವು ಇಡೀ ಲೋಕವು ಒಂದು ತೂಕವು; ಕುಳಿತುಕೊಳ್ಳಲೆ ಬೇಕು,' ಎಂದು ಕೈಹಿಡಿದು ಎಳೆದುಕೊಂಡು ಬಂದು ಕುಳ್ಳಿರಿಸಿ, ಹಿಂದೆ ಅವನ ಮನೆಯಿಂದ ಭಂಡಾರಕ್ಕೆ ಸೇರಿಸಿದ ದ್ರವ್ಯಕ್ಕೆ ನೂರುಮಡಿ ಹೆಚ್ಚಾಗಿ ಕೊಡಿಸಿದನು. ಆ ಮೇಲೆ ಅದುವೆ ಆನೆಯಲ್ಲಿಯೆ ಚಂದನದಾಸನನ್ನು ಅವನ ಮನೆಗೆ ಕಳುಹಿಸಿ, ಮಲಯಕೇತುವಿಗೆ ಬಿಡಾರವನ್ನು ಏರ್ಪಡಿಸಿಕೊಟ್ಟು, ಅಮಾತ್ಯನನ್ನು ನೋಡಿ—

'ಅಮಾತ್ಯರೆ! ಮೊದಲೊಮ್ಮೆ ಚಂದ್ರಗುಪ್ತನಿಗೆ ಪಟ್ಟಾಭಿಷೇಕವೆಂದು ನಿಶ್ಚೈಸಿ, ಅದು ಅಲ್ಲಿಯೆ ಉಳಿದು ಹೋಯಿತು; ನಾಳೆ ಒಳ್ಳೆಯ ಮುಹೂರ್ತವಿದೆ; ಮಾಡಿಸಿದರೆ ನೋಡಿಯೆ ಹೋಗಿಬಿಡುವೆವು; ಈಗ ನಮಗೆ ಆಶ್ರಮಕ್ಕೆ ಅಪ್ಪಣೆಯಾಗಲಿ' ಎಂದನು. ಕೂಡಲೆ ಅಮಾತ್ಯನೂ ಚಂದ್ರಗುಪ್ತನೂ ಎಲೆಮನೆಯ ವರೆಗೆ ಬಂದು, ಚಾಣಕ್ಯನನ್ನು ಅಲ್ಲಿ ಬಿಟ್ಟು

ಹಿಂದಿರುಗಿ ಬಂದು, ಚಂದ್ರಗುಪ್ತನನ್ನು ಅಂತಃಪುರಕ್ಕೆ ಕಳುಹಿಸಿ, ಅಮಾತ್ಯನು ಆಸ್ಥಾನಕ್ಕೆ ಬಂದನು.

ಅಮಾತ್ಯನು ಆಸ್ಥಾನದಲ್ಲಿ ಬಂದು ಕುಳಿತು, ಬಾಗುರಾಯಣನನ್ನು ಕರೆದು—"ನಾಳೆ ಹುಣ್ಣಿಮೆದಿನ ಪ್ರಾತಃಕಾಲಕ್ಕೆ ಚಂದ್ರಗುಪ್ತ ಮಹಾರಾಜರಿಗೆ ಪಟ್ಟಾಭಿಷೇಕವಾಗುವುದು; ಪಟ್ಟಣವೆಲ್ಲ ಅಲಂಕೃತವಾಗಲಿ, ಸೆರೆಯಲ್ಲಿದ್ದವರನ್ನು ಬಿಡಲಿ, ಆಶ್ರಿತರಾಜರಿಗೂ ವಿದ್ವಾಂಸರಿಗೂ ಉಡುಗೆರೆಗಳು ಹೋಗಲಿ, ಸರ್ವರಿಗೂ ಭೋಜನಗಳಾಗಲಿ, ಬಡವರಿಗೆ ದಾನಧರ್ಮಗಳಾಗಲಿ, ದೇವಾಲಯಗಳಲ್ಲಿ ಉತ್ಸವಗಳು ನಡೆಯಲಿ, ಸೇನೆಗಳು ಸಜ್ಜಾಗಿ ಬಂದು ನಿಲ್ಲಲಿ, ರಾಯಬೀದಿಗಳು ಸಂಗೀತ ನರ್ತನಗಳಿಂದ ಮೆರೆಯಲಿ, ಅಭಿಷೇಕಯೋಗ್ಯವಾದ ಸಾಮಾನುಗಳೆಲ್ಲವೂ ಸಿದ್ಧವಾಗಲಿ,' ಎಂದು ನೇಮಿಸಿ, ತಾನು ತನ್ನ ಮನೆಗೆ ಬಂದನು.

ಅಪ್ಪಣೆಯಂತೆ ಸರ್ವವೂ ಸಿದ್ಧವಾಯಿತು. ಮರುದಿನ ಉದಯಕಾಲದಲ್ಲಿ ಮುಹೂರ್ತವು ಸನ್ನಿಹಿತವಾಗುತ್ತಿರಲು, ಚಂದ್ರಗುಪ್ತನು ಪತ್ನಿಯೊಡಗೂಡಿ ಚಾಣಕ್ಯನ ಬಳಿಗೆ ಬಂದು, ಸುವರ್ಣಕಲಶೋದಕದಿಂದ ಅವನ ಪಾದಪ್ರಕ್ಷಾಲನೆ ಮಾಡಿ, ರತ್ನರಾಶಿಗಳಿಂದ ಚರಣಾಭಿಷೇಕವನ್ನು ಗೈದು, ಪೂಜಿಸಿ, ರನ್ನದ ಹಾವುಗೆಗಳನ್ನು ತಂದು ಪಾದಗಳಿಗೆ ಅಳವಡಿಸಿ, ಪಾನ ತೀರ್ಥವನ್ನು ಸೇವಿಸಿ, ಹಳೆಯ ಹಾವುಗೆಗಳನ್ನು ತನ್ನ ತಲೆಯಲ್ಲಿ ಹೊತ್ತುಕೊಂಡು, ಇದನ್ನು ತನ್ನ ನಿತ್ಯದ ಪೂಜೆಗೆ ಕೊಡಬೇಕೆಂದು ಬೇಡಿ ತೆಗೆದುಕೊಂಡು, ಅವುಗಳಿಗೆ ವಜ್ರಕವಚಗಳನ್ನು ಹಾಕಿಸಿ, ದೇವರ ಕೋಣೆಯಲ್ಲಿಟ್ಟು, ಚಾಣಕ್ಯನ ಅನುಮತಿಯಿಂದ ಮಂಗಲಸ್ನಾನವನ್ನು ಮಾಡಿ, ಅಲಂಕೃತನಾಗಿ ಬಂದು; ಷೋಡಶದಾನಗಳನ್ನು ಕೊಟ್ಟು, ಸರ್ವ ಜನಾನುಮತಿಯಿಂದ ಸಿಂಹಾಸನವನ್ನೇರಿ, ಮಾಣಿಕ್ಯಮಯವಾದ ಕಿರೀಟವನ್ನು ಧರಿಸಿ, ಕುಳಿತನು.

ಆಗ ಬ್ರಾಹ್ಮಣರು ಮಂಗಲಾಕ್ಷತೆಗಳನ್ನು ತಳಿಯಲು, ಸುವಾಸಿನಿಯರು ಆರತಿಗಳನ್ನು ಬೆಳಗಲು, ವಂದಿಗಳು ಹೊಗಳಲು, ಬಾಗುರಾಯಣನು ಬೆಳ್ಗೊಡೆಯನ್ನು ಹಿಡಿದಿರಲು, ಭದ್ರಭಟಾದಿಗಳು ಚಾಮರಗಳನ್ನು ಬೀಸುತ್ತಿರಲು, ಅಮಾತ್ಯನು ಹೂಗಳಿಂದ ಅರ್ಚಿಸಿ ಕಾಣಿಕೆಗಳನ್ನು ಒಪ್ಪಿಸಲು, ಸಾಮಂತರಾಯರು ಕಪ್ಪಗಳನ್ನು ನೀಡಿ ಕೈಜೋಡಿಸಿ ನಿಂದಿರಲು, ಅವರೆಲ್ಲ

ರನ್ನೂ ಚಂದ್ರಗುಪ್ತನು ಉಚಿತಪ್ರಕಾರವಾಗಿ ಮನ್ನಿಸಿ, ಕರ್ಪೂರ ವೀಳೆಯ ಗಳನ್ನು ಕೊಟ್ಟು ಮನ್ನಿಸಲು, ದಿಕ್ಕುಗಳೆಲ್ಲವೂ ಪ್ರಸನ್ನವಾಗಿ ಸುಗಂಧ ಮಂದಮಾರುತವು ಬೀಸುತ್ತಿರಲು, ಚಾಣಕ್ಯನು ಎದ್ದು ಬಂದು ಮುಂದೆ ನಿಂದುನೋಡಿ—'ಈಗ ನಮ್ಮ ಪತಿಜ್ಞಾಪೂರ್ಣತೆಯಾಯಿತು,' ಎಂದು ಅಂದು ಬಿಡಿಸಿದ ಜುಟ್ಟನ್ನು ಇಂದು ಕಟ್ಟಿದನು.

ಆ ಕಾಲದಲ್ಲಿ ಬಂದವರನ್ನು ನೋಡಿ, ಪಾತ್ರವರಿತು, ಚಂದ್ರಗುಪ್ತನು ಭೂದಾನಗಳನ್ನೂ, ಚಾಣಕ್ಯನು ರತ್ನದಾನಗಳನ್ನೂ, ರಾಕ್ಷಸನು ಧನದಾನ ಗಳನ್ನೂ, ವಸ್ತ್ರದಾನಗಳನ್ನು ವಕ್ರನಾಸನೂ, ವಾಹನದಾನಗಳನ್ನು ಸುಮ ತಿಯೂ, ಗೋದಾನಗಳನ್ನು ಬಾಗುರಾಯಣನೂ, ಕೈಗೆ ಸಿಕ್ಕಿದುದನ್ನು ರುಕ್ಮನೆಂಬವನೂ ಕೊಡುತ್ತಿರಲು, ಸರ್ವರೂ ಚಂದ್ರಗುಪ್ತನನ್ನು ಹರಿಸಿ ಚಾಣಕ್ಯನನ್ನು ವಂದಿಸಿ, ಅಮಾತ್ಯನನ್ನು ಹೊಗಳಿ, ಮಿಕ್ಕವರನ್ನು ಕೊಂಡಾಡಿ, ತನ್ನ ತನ್ನ ಮನೆಗೆ ಹೊರಟುಹೋದರು.

ಅನಂತರ ಚಂದ್ರಗುಪ್ತನು ಪಟ್ಟದಾನೆಯ ಮಸ್ತಕವನ್ನೇರಿ, ಮಹಾ ವೈಭವದಿಂದ ಮೆರವಣಿಗೆಯಾಗಿ ಬಂದು ಚಾಣಕ್ಯನ ಪಾದಕ್ಕೆರಗಿದನು. ಅವನವನನ್ನು ಹಿಡಿದೆತ್ತಿ ಕುಳ್ಳಿರಿಸಿ, ತಕ್ಕೈಸಿ, ಸರ್ವರನ್ನೂ ಅವರವರ ಬಿಡಾರಗಳಿಗೆ ಕಳುಹಿಸಿ, ಚಂದ್ರಗುಪ್ತನಿಂದ ಬಿಳ್ಕೊಂಡು, ಅಮಾತ್ಯನ ಹಸ್ತಲಾಘವವನ್ನು ಮಾಡಿ, ಮಿತ್ರಶಿಷ್ಯರಿಂದೊಡಗೂಡಿ ಪರ್ಣಶಾಲೆಗೆ ಹೋದನು.

## ಉತ್ತರತಂತ್ರ ಸಮಾಪ್ತಿ



## ಪರಿಸಮಾಪ್ತಿ

ಮರುದಿನ ಹೊತ್ತಾರೆಯಲ್ಲಿ ಎದ್ದು ನಿತ್ಯವಿಧಿಗಳನ್ನು ತೀರಿಸಿಕೊಂಡು ಚಾಣಕ್ಯನು ಶಿಷ್ಯಸಮೇತನೂ ತನ್ನ ಮಿತ್ರನೂ ಆದ ಇಂದುಶರ್ಮ ನೊಡನೆ ಆಸ್ಥಾನಕ್ಕೆ ಬಂದು, ಚಂದ್ರಗುಪ್ತನ ಆಗತಸ್ವಾಗತಗಳನ್ನು ಸ್ವೀಕರಿಸಿ, ಆಸನದಲ್ಲಿ ಕುಳಿತುಕೊಂಡು ಆತನನ್ನು ನೋಡಿ,—'ಚಂದ್ರಗುಪ್ತನೆ! ನನಗಿಂತಲೂ ರಾಜನೀತಿಯಲ್ಲಿ ನಿಪುಣರಾದ ಅಮಾತ್ಯರು ನಿನಗೆ ಮಂತ್ರಿಯಾದರು, ಸಕಲ ರಾಜರೂ ನಿನ್ನ ಪರಿವಾರದವರಾದರು ನೀನು ಸಾರ್ವಭೌಮನಾದೆ, ಕೀರ್ತಿವಂತನಾಗಿ ಬಾಳು, ಈಗ ನಮಗೆ ವನಕ್ಕೆ ಹೋಗಲಿಕ್ಕೆ ಅನುಮತಿಯನ್ನು ಕೊಡು, ಎಂದನು.

ಅದಕ್ಕವನು ಗದ್ಗದ ಕಂಠನಾಗಿ ಕಂಬನಿದುಂಬಿ—ಸ್ವಾಮಿ! ಎಲ್ಲಿಗೂ ಇಲ್ಲದವನಾಗಿ, ಯಾರಿಗೂ ಬೇಡದವನಾಗಿ, ಯಾವುದಕ್ಕೂ ಆಗದವನಾಗಿ ಇದ್ದ ನನ್ನನ್ನು ರಾಜಾಧಿರಾಜನನ್ನಾಗಿ ಮಾಡಿದಿರಿ; ಇನ್ನು ಏನೆಂದು ಹೇಳುವುದಕ್ಕೂ ನನಗೆ ಬಾಯಿಬಾರದು; ತಾವಿಲ್ಲದ ರಾಜ್ಯವು ನನಗೆ ಸುಖವನ್ನುಂಟುಮಾಡಲಾರದು; ಆದರೂ ತಮ್ಮನ್ನು ತಡೆಯುವುದಕ್ಕೆ ನಾನು ಅರ್ಹನಲ್ಲ; ಇಷ್ಟನ್ನು ಕೇಳುತ್ತೇನೆ; ಮುಂದೆ ನಾನು ಹೇಗೆ ನಡೆದುಕೊಳ್ಳಬೇಕು? ಅಪ್ಪಣೆಯಾಗಲಿ,' ಎಂದನು.

ಚಾಣಕ್ಯ—'ಕೇಳು; ಹಿರಿಯರಿಂದ ನಡೆದುಬಂದ ದೇಶಪದ್ಧತಿಯಲ್ಲಿ ಹೆಚ್ಚು ಕಡಮೆಗಳನ್ನು ಮಾಡಬೇಡ; ದೇಶಪದ್ಧತಿಯೆಂದರೆ—ಪ್ರಜೆಗಳನ್ನು ಅವರವರ ಜಾತಿ ಮತ ಪದ್ಧತಿಗಳಿಗೆ ತೊಡಕಾಗದಂತೆ ನೋಡಿಕೊಳ್ಳುವುದು; ಅದನ್ನು ಅಲಕ್ಷಮಾಡಿದರೆ, ಪ್ರಜೆಗಳ ಮನಸ್ಸು ಕಲಕಿಹೋಗಿ, ಅರಸನು ಕೆಟ್ಟುಹೋಗುವನು; 'ಯಥಾರಾಜ ತಥಾಪ್ರಜಾ' ಎಂದರೆ ನೀನು ಹೇಗೆ ನಡೆಯುವಿಯೊ, ಹಾಗೆಯೆ ನಿನ್ನ ಪ್ರಜೆಗಳೂ ನಡೆಯುವರು; ಪುಷ್ಟ ರಾದ ಪ್ರಜೆಗಳಿಂದ ಧನವನ್ನು ಸಂಗ್ರಹಿಸಿ, ಬಡವರನ್ನು ಪಾಲಿಸು; ಪ್ರಜೆಗಳೆ ರಾಜನ ಸಂಪತ್ತು, ಆದುದರಿಂದ ಪ್ರಜೆಗಳನ್ನು ಮಕ್ಕಳಂತೆ ನೋಡಿಕೋ; ಇದರಿಂದ ಅವರಿಗೆ ನಿನ್ನಲ್ಲಿ ಭಯವಿಶ್ವಾಸಗಳುಂಟಾಗುವುವು; ಅನ್ಯಾಯಿ ಗಳನ್ನು ಯೋಗ್ಯವಾಗಿ ದಂಡಿಸು; ದಯಾದಾಕ್ಷಿಣ್ಯಗಳು ಸಾಧುಸಜ್ಜನರ ಮೇಲೆ ಇರಲಿ; ನ್ಯಾಯಪಕ್ಷಪಾತಿಯಾಗು; ಲೋಕಾಪವಾದಕ್ಕೆ ಅಂಜಿ

ನಡೆ; ಅಪೂಜ್ಯರನ್ನು ಪೂಜ್ಯರಂತೆ ಕಾಣಬೇಡ; ಖಂಡಿತ ಹೇಳುವವರನ್ನು ಆಪ್ತರೆಂದು ತಿಳಿ; ಕಾರ್ಯಗಳನ್ನು ವಿಮರ್ಶೆಯಿಂದ ಮಾಡು; ನಿಷ್ಪಾಪಿಗಳಾದ ವಿದ್ವಾಂಸರನ್ನು ನೇಮಿಸು; ಕಾರ್ಯದಕ್ಷರ ಮುಂದೆ ಹೇಡಿಗಳನ್ನು ಮನ್ನಿಸಬೇಡ; ವಂಚಕರ ಮಾತಿಗೆ ಮನಸ್ಸು ಕೊಡಬೇಡ; ಇಂದು ಮಾಡುವುದನ್ನು ನಾಳೆಗಿಡಬೇಡ; ಮುಂದೆ ಮಾಡುವುದಕ್ಕೆ ತ್ವರೆಪಡಬೇಡ; ತಾನು ಮಾಡುವುದನ್ನು ಸೇವಕರಿಗೆ ನೇಮಿಸಬೇಡ; ಅನ್ಯರು ಮಾಡಬೇಕಾದುದಕ್ಕೆ ನೀನು ಕೈಹಾಕಬೇಡ; ಪಶ್ಚಾತ್ತಾಪಕರವಾದ ಕೆಲಸಗಳನ್ನು ಆರಂಭಿಸಲೆ ಬೇಡ; ಆರಂಭಿಸಿದ ಕಾರ್ಯಕ್ಕೆ ಇದುವೆ ಫಲವೆಂದು ಜನಗಳಿಗೆ ಗೊತ್ತುಪಡಿಸಬೇಡ; ಆದಿಯಲ್ಲಿ ಅಲ್ಪವಾಗಿ ಆರಂಭಿಸಿ, ವೃದ್ಧಿಗೊಂಡ ಮೇಲೆ ತಗ್ಗಿ ಬಾರದಂತೆ ನೋಡಿಕೊ; ಪುರುಷನ ಸ್ವಭಾವವನ್ನು ತಿಳಿಯದೆ ಕೆಲಸಕ್ಕೆ ನೇಮಿಸಿಕೊಳ್ಳಬೇಡ; ಕೆಲಸವನ್ನು ನೋಡಿ ಸಂಬಳ ಕೊಡು; ಹಿತೈಷಿಗಳೂ ಕಾರ್ಯದಕ್ಷರೂ ಆದವರಿಗೆ ಪ್ರೋತ್ಸಾಹವನ್ನು ಕೊಡು; ದೀನಾನಾಥರಿಗೆ ಆಧಾರನಾಗಿರು; ಸಕಲರಿಗೂ ಸಂತೋಷವನ್ನುಂಟು ಮಾಡು; ಹೀಗೆ ಮಾಡಿದರೆ ಶತ್ರುಗಳೆಲ್ಲರೂ ಮಿತ್ರರಾಗುವರು; ಪ್ರಜೆಗಳು ಕ್ಷುದ್ರಕರ್ಮಗಳನ್ನು ಬಿಡುವರು; ಹೇಡಿಗಳೂ ಕಾರ್ಯದಕ್ಷರಾಗುವರು; ಕಲಿಯುಗವು ಕೃತಯುಗವಾಗುವುದು; ಈ ರೀತಿಯಾಗಿ ಸ್ತ್ರೀಮದ್ಯ ದ್ಯೂತಾದಿಗಳಿಗೆ ವಶನಾಗದೆ ರಾಜ್ಯವನ್ನು ಪಾಲಿಸು; ನಿನಗೆ ಮಂಗಳವಾಗುವುದು.

ಇದನ್ನು ಕೇಳಿ ಚಂದ್ರಗುಪ್ತನು ಸಂತೋಷಭರಿತನಾಗಿ'—'ಸ್ವಾಮಿಾ! ಅಪ್ಪಣೆಯಂತೆ ನಡೆದುಕೊಳ್ಳುವೆನು ಎಂದು, ಅವನನ್ನು ಬಿಡಲಾರದೆ ಕಣ್ಣೀರುಗಳನ್ನು ತುಂಬಿಕೊಂಡಿರಲು, ಚಾಣಕ್ಯನು—'ಅರಸನೆ! ವ್ಯಸನ ಪಡಬೇಡ. ನಿನಗೆ ಪುತ್ರೋತ್ಸವವಾದುದನ್ನು ಕೇಳಿ ಇನ್ನೊಮ್ಮೆ ಬರುತ್ತೇವೆ; ಈಗ ಹೊರಡುತ್ತೇವೆ; ಎಲ್ಲವನ್ನೂ ಅಮಾತ್ಯರ ಅನುಜ್ಞೆಯಂತೆ ನಡೆಯಿಸು,' ಎಂದು ಆಶೀರ್ವದಿಸಿ ಎದ್ದುನಿಂತನು.

ಮಣಿಮಯರಥಗಳು ಮುಂದೆ ಬಂದು ನಿಂದುವು; ಸರ್ವರೂ ಎದ್ದು ಬಂದು ಚಾಣಕ್ಯನಿಗೆ ನಮಸ್ಕರಿಸಿದರು. ಎಲ್ಲರನ್ನೂ ಮನ್ನಿಸಿ ಕಳುಹಿಸಿ, ಅಮಾತ್ಯ, ಚಂದ್ರಗುಪ್ತ, ಚಾಣಕ್ಯ, ಇಂದುಶರ್ಮಾದಿಗಳು ರಥವನ್ನೇರಿ ನೈಮಿಶಾರಣ್ಯಕ್ಕೆ ಬಂದು, ಇಂದುಶರ್ಮನ ಪರ್ಣಶಾಲೆಯಲ್ಲಿಳಿದು, ಅವನ

ಆತಿಥ್ಯಗಳನ್ನು ಸ್ವೀಕರಿಸಿ, ನಾಲ್ಕು ದಿನಗಳು ಅಲ್ಲಿಯೆ ಇದ್ದು ಆಶೀರ್ವಾದಗಳನ್ನು ಪಡೆದು, ಅಮಾತ್ಯಚಂದ್ರಗುಪ್ತರು ಹಿಂದಿರುಗಿ ಬಂದು ಪಾಟಲೀಪುರವನ್ನು ಸೇರಿ, ಚಾಣಕ್ಯನಿದ್ದ ಪರ್ಣಶಾಲೆಯ ಸ್ಥಳದಲ್ಲಿದ್ದ ನೃಸಿಂಹದೇವಾಲಯವನ್ನು ಕಟ್ಟಿಸಿ, ಅದರ ವಿನಿಯೋಗಕ್ಕೆ ಬೇಕಾದ ಧನವನ್ನು ಪ್ರತ್ಯೇಕಿಸಿ, ಅವನು ಸಂಚರಿಸಿದೆಡೆಗಳಲ್ಲೆಲ್ಲ ಅಗ್ರಹಾರಗಳನ್ನೂ, ಅರವಟಿಗೆಗಳನ್ನೂ, ವಾಪೀಕೂಪತಟಾಕಗಳನ್ನೂ, ಅನ್ನಸತ್ರಗಳನ್ನೂ ಏರ್ಪಡಿಸಿ, ಅಮಾತ್ಯಸಮೇತನಾಗಿ ಚಂದ್ರಗುಪ್ತನು ರಾಜ್ಯಭಾರವನ್ನು ಮಾಡುತಿದ್ದನು.

ಆ ಕಾಲದಲ್ಲಿ ಬಡತನವು ನಡುವಿನಲ್ಲಿ, ವಕ್ರತೆ ಬಾಳೆಹಣ್ಣಿನಲ್ಲಿ, ಕಠಿಣತೆ ಕಗ್ಗಲ್ಲಿನಲ್ಲಿ, ಕೊಲೆ ಪಗಡೆಯಲ್ಲಿ, ಚಾಂಚಲ್ಯವು ನೇತ್ರಾಂಚಲದಲ್ಲಿ ಕುಟಿಲತೆ ಕುಂತಳದಲ್ಲಿ, ನಿಗ್ರಹವು ಇಂದ್ರಿಯದಲ್ಲಿ ಆಗಿರಲು, ಸಮಸ್ತರಿಗೂ ಸರ್ವಮಂಗಳವಾಯಿತು.

